3047

C. M. Veerabhadra Sharma

ಶ್ರೀ ಮುಗ್ಗಿಮಾಯಿದೇವಪ್ರಭುವಿರಚಿತ

ಶಿವಾಧವ ಶಿವಾವಲ್ಲಭ ಮಹದೈಪುರೀಶ್ವರ

# ಶತಕತ್ರಯವು







ಮೈಸೂರು
ಕ್ರೌನ್ ಎಲೆಕ್ಟ್ರಿಕ್ ಪ್ರೆಸ್
1925

॥ ಓಂ ॥

ಶ್ರೀಮದ್ವೇದವೇದಾಂತಸಿದ್ಧಾಂತಸಾರ

ಸರ್ವಜ್ಞ

ಶ್ರೀ ಮಗ್ಗೆಮಾಯಿದೇವಪ್ರಭುವಿರಚಿತ

ಶಿವಾಧವ ಶಿವಾವಲ್ಲಭ ಮಹದ್ಯೈಪುರೀಶ್ವರ

# ಶತಕತ್ರಯವು

ಶ್ರೀ ತೋಂಟದ ಸಿದ್ಧಲಿಂಗದೇಶಿಕ ವಿರಚಿತವಾದ

ಕರ್ಣಾಟಕ ಟೀಕೆಯೊಡನೆಯೂ ನವೀನ ಟಿಪ್ಪಣದೊಡನೆಯೂ

"ಮೈಸೂರ್ ಸ್ಟಾರ್" ಆಫೀಸಿನಲ್ಲಿ

ಪ್ರಕಟಿಸಲ್ಪಟ್ಟಿತು

C-M. V. Shastri

ಮೈಸೂರು

ಕ್ರೌನ್ ಎಲೆಕ್ಟ್ರಿಕ್ ಪ್ರೆಸ್

1925

# ಪೀಠಿಕೆ.

ಈ ಗ್ರಂಥದಲ್ಲಿ ಶಿವಾಧವ-ಶಿವಾವಲ್ಲಭ-ಮಹದೈಪುರೀಶ್ವರ ಪದಾಂಕಿತವಾದ ಮೂರು ಶತಕಗಳಿರುವುದರಿಂದ ಇದಕ್ಕೆ "ಶತಕತ್ರಯ" ವೆಂಬ ಹೆಸರು ಪ್ರಸಿದ್ಧ ವಾಗಿರುತ್ತದೆ. ಕ್ರಮವಾಗಿ ಆ ಮೂರು ಶತಕಗಳಲ್ಲೂ ವೀರಶೈವಾಗಮೋಕ್ತ ಮರ್ಯಾದೆಯನ್ನನುಸರಿಸಿ ಭಕ್ತಿ, ಜ್ಞಾನ, ವೈರಾಗ್ಯಗಳ ಲಕ್ಷಣವು ನಿರೂಪಿಸಲ್ಪ ಟ್ಟಿರುವುದು. ಪ್ರಾಚೀನರಾದ ವೀರಶೈವಕವಿಗಳು ಅನೇಕ ಶತಕಗಳನ್ನು ವಿರ ಚಿಸಿದ್ದಾರೆ. ಆದರೆ ಅವುಗಳಲ್ಲಿ ಕೇವಲ ಭಕ್ತಿಪ್ರಧಾನವಾಗಿರುವುವೇ ಹೆಚ್ಚು. ಈ ಗ್ರಂಥವಾದರೊ ವೀರಶೈವರ ಸಹಜವಾದ ಭಕ್ತಿಯೂ, ಆಚರಣೆಯೂ, ಜ್ಞಾನವೂ ಹೇಗಿರಬೇಕೆಂಬುದನ್ನು ಕರತಲಾಮಲಕವಾಗಿ ನಿರೂಪಿಸುವ ಶಾಸ್ತ್ರದಂ ತಿರುವುದು. ಅನೇಕಾಗಮವಚನರಹಸ್ಯದ ಪರಿಪಾಕವೇ ಇದಾಗಿರುವುದೆಂದರೂ ಸಲ್ಲು ವುದು. ಅದುಕಾರಣವೇ ಮುಮುಕ್ಷುಗಳ ಪಠನ ಮನನಾದಿಗಳಿಗೆ ಇದು ಅತ್ಯಂ ತಾರ್ಹವಾಗಿ ಪ್ರತೀತಿಗೊಂಡಿರುವುದು.

ಇದನ್ನು ರಚಿಸಿದವರು ಶ್ರೀ ಮಗ್ಗೆಯ ಮಾಯಿದೇವರು. ಅನುಭವಸೂತ್ರ ವೆಂಬ ಪ್ರಶಸ್ತಗ್ರಂಥವನ್ನು ಬರೆದು ವೀರಶೈವ ಜಗತ್ತಿಗೆ ಅಪಾರವಾದ ಉಪಕಾರ ವನ್ನೆಸಗಿರುವ ಕಲ್ಯಾಣದ ಮಾಯದೇವರೆಂದು ಪ್ರಸಿದ್ಧರಾಗಿರುವ ಆಚಾರ್ಯಶ್ರೇಷ್ಠ ರಿಗೇ "ಮಗ್ಗೆ ಮಾಯಿದೇವರು" ಎಂದೂ ಹೆಸರುಂಟು. ಅವರೇ ಈ ಶತಕತ್ರ ಯವನ್ನು ರಚಿಸಿದವರು ಎಂಬ ವಿಷಯದಲ್ಲಿ ಕೆಲರು ಸಂಶಯಪಡುತ್ತಾರೆ. ನಮಗಾದರೋ ಅದು ನಿಸ್ಸಂಶಯವೆಂದು ತೋರುತ್ತಿದೆ. ಹೇಗೆಂದರೆ—ಅನುಭವ ಸೂತ್ರದ ಆದಿಯಲ್ಲಿ ತನ್ನಿಷ್ಟದೈವವಾದ ಐಪುರದ ಸೋಮೇಶ್ವರನನ್ನು ಕುರಿತು ಗ್ರಂಥಕರ್ತರು ನಮಸ್ಕಾರಾತ್ಮಕ ಮಂಗಳವನ್ನಾಚರಿಸುವಾಗ್ಗೆ, "ಯಸ್ಯಾಮಾ ತ್ರಾತ್ರಯಂ ನಾಮ ವ್ಯತ್ಯಸ್ತಪ್ರಣವಾತ್ಮಕಂ | ಬಭೌಹ್ರಸ್ವದ್ವಯಂದೀರ್ಘಂ ದ್ವಿಮಾತ್ರತ್ವಾದುಮೈವಸಾ || ತಯೋಮಯಾಸಾರ್ಧ ಮುಪಾಸಿತತ್ವಾಚ್ಛಿವಸ್ಸ ದಾನಂದಚಿದಾತ್ಮಸಂಜ್ಞಃ | ಪ್ರಶಸ್ಯತೇಸೋಮ ಇತಿ ಪ್ರತೀತ್ಯಾತ ಮೈಪುರಾಧೀ ಶ್ವರಮಾನತೋಸ್ಮಿ" ಎಂಬ ಶ್ಲೋಕಗಳನ್ನು ಹೇಳಿ, ಸೋಮಶಬ್ದಕ್ಕೆ ಹೇಗೆ ನಿರ್ವ ಚನವನ್ನು ಹೇಳಿರುವರೋ ಅದರಂತೆಯೇ ಈ ಗ್ರಂಥದ ಮೂರುಶತಕಗಳ ಆದಿಯ ಲ್ಲಿಯೂ ಐಪುರದ ಸೋಮನಾಥನನ್ನೇ ಇಷ್ಟದೈವವನ್ನಾಗಿ ಭಜಿಸಿರುವುದಲ್ಲದೆ, ಶಿವಾವಲ್ಲಭ ಶತಕದ ಅಂತ್ಯದಲ್ಲಿ "ಓಮಿತ್ಯಕ್ಷರಮಾತೃಕಾತ್ರಯದ ತವ್ಯಾಕ್ಯಸ್ಥ

ಮಾತ್ರಾತ್ರಯಂ | ನಾಮಂ ಶ್ರೀಮದುಮಾಎನಲ್ಪರತರಂ ದೀರ್ಘಂ ಮಕಾರಂ ದ್ವಿತೀ || ಯಾ ಮಾ ಸಪ್ರಥಮಾ ಉಕಾರಮುಭಯಂಗೂಡಿ ರ್ದ್ದುಮಾಸಾರ್ಥಕಂ | ಸೋಮಂ ಮತ್ಪ್ರಭು ವೈಪುರೀಶ ನೆನಲಾಂ ಧನ್ಯಂ ಶಿವಾವಲ್ಲಭಾ '' ಎಂಬ ಪದ್ಯದಲ್ಲಿ ಸೋಮಶಬ್ದನಿರ್ವಚನವನ್ನು ಅನಭವಸೂತ್ರದಲ್ಲಿರುವಂತೆಯೇ ಮಾಡಿರುವರು, ಮತ್ತೂ ಕಡೆಯ ಶತಕವನ್ನೆಲ್ಲಾ ತಮ್ಮ ಇಷ್ಟದೈವವಾದ ಐಪುರಾಧೀಶನ ಅಂಕಿತವನ್ನಾಗಿಯೇ ಮಾಡಿರುವುದಲ್ಲದೆ, ಅದರ ಆದಿಯ ೧೦ ಪದ್ಯಗಳಲ್ಲಿ ಅಪಾರವಾದ ಭಕ್ತಿಯಿಂದ ಐಪುರೀಶನನ್ನು ಸ್ತುತಿಸಿರುವರು. ಇದು ಮಾತ್ರವೇ ಅಲ್ಲದೆ ಅನುಭವ ಸೂತ್ರಗ್ರಂಥದ ಅನೇಕ ಶ್ಲೋಕಗಳಲ್ಲಿ ಕಂಡ ಅಭಿಪ್ರಾಯವೇ ಶತಕತ್ರಯದ ಅನೇಕ ಪದ್ಯಗಳಲ್ಲಿ ಅಚ್ಚೊರದಂತೆ ಪ್ರತಿಫಲಿಸಿರುವುವು. ಉದಾಹರಣೆ—ಅನುಭವ ಸೂತ್ರದ ಅಷ್ಟಮಾಧಿಕರಣದಲ್ಲಿ ಪರಾಭಕ್ತಿಲಕ್ಷಣವನ್ನು ಹೇಳುವಾಗ " ತಮೋಜ್ಯೋತ್ಸ್ನಪ್ರವೃತ್ತಿರ್ಹಿ ರಾತ್ರಾವೇವನಚಾಹನಿ | ಪುಣ್ಯಪಾಪೋಭಯಂಕರ್ಮಮತೇಭಕ್ತಿಮತೇಕುತಃ || ಅಹನ್ಯಾತಪಎವಾಸ್ತೇ ತಮೋಜ್ಯೋತ್ಸ್ನವಿಲಕ್ಷಣೇ | ತಥಾಭಕ್ತಿಪದೇ ಶೈವಂ ಪುಣ್ಯಪಾಪವಿಲಕ್ಷಣೆ || ಎಂಬ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುವ ಅಭಿಪ್ರಾಯವೇ ಶಿವಾವಲ್ಲಭಶತಕದ " ತಮಮುಂಜೊನ್ನಮುಮೇಕರಾತ್ರಿಯೊಳೆ ವರ್ತಿಪ್ಪಂದದಿಂ ಪಾಪಮುಂ | ಸುಮಹತ್ಪುಣ್ಯಮುಮೇಕಕರ್ಮದೊಳೆ ವರ್ತಿಕ್ಕುಂ ಸಮಂ ಮತ್ತಮಾ || ತಮಮುಂ ಜೊನ್ನಮುಮಂ ಕೆದರ್ಚ್ಚಿ ದಿನಕೃತ್ತೀವ್ರಾತಪಂನಿಲ್ವ ಸಂ | ಭ್ರಮ ಮೆಂತಂತೆ ಶಿವೈಕಭಕ್ತಿ ವಿಭವಂ ನಿಲ್ಗುಂ ಶಿವಾವಲ್ಲಭಾ '' ಎಂಬ ಪದ್ಯದಲ್ಲಿ ಹೇಳಲ್ಪಟ್ಟಿದೆ. ಇದರಂತೆ ಅನೇಕ ಪದ್ಯಗಳನ್ನುದಹರಿಸಬಹುದಾದರೂ ಸ್ಥಲಸಂಕೋಚದಿಂದ ವಿರಮಿಸಬೇಕಾಗಿದೆ.

ಕಲ್ಯಾಣದ ಮಾಯಿದೇವರೇ ಮಗ್ಗೆಮಾಯಿದೇವರೆಂದು ಹೇಳುವುದಕ್ಕೆ ಇಷ್ಟೇ ಆಧಾರವಲ್ಲದೆ ಮತ್ತೊಂದು ಸ್ಪಷ್ಟವಾದ ಸಾಕ್ಷ್ಯವಿರುವುದು. ಅದಾವುದೆಂದರೆ—ಶ್ರೀ ವಿರೂಪಾಕ್ಷಪಂಡಿತರು ತಮ್ಮ ಚೆನ್ನಬಸವಪುರಾಣದ ೫ ನೆಯ ಕಾಂಡದ ೧೦ ನೆಯಧ್ಯಾಯದಲ್ಲಿ " ಎಲೆ ರಾಮ ಕೇಳಿನ್ನು ಸಕಲಾಗಮಂಗಳಿಗೆ | ನೆಲೆಯೆನಿಸಿ ಪ್ರೌಢನಿಂ ಪೂಜೆಯುಂ ಕೊಂಡು ಷ | ಟ್ಸ್ಥಲಮಾರ್ಗಮಂ ಸಕಲಶಿವಭಕ್ತ ಸಂತತಿಗೆ ಕರತಳಾಮಳಕಮಾಗಿ || ತಿಳಿವೊಲನುಭವಸೂತ್ರವಾದಿಶಾಸ್ತ್ರಂಗಳಂ | ಗೆಲವಿನಿಂ ಪೇಳ್ದು ನಿಜಶಿವ ಸಮಾಧಿಯಲಿ ಮಿಗೆ | ನಲವಿನಿಂದಲ್ಲಿ ಮಗ್ಗೆಯಮಾಯಿದೇವಪ್ರಭುವರ ನಿರದೆ ಮುಕ್ತನಹನು || '' ಎಂದು ಹೇಳಿರುವ ಪದ್ಯದಲ್ಲಿ ಮಗ್ಗೆಯಮಾಯಿದೇವರೇ ಅನುಭವಸೂತ್ರವನ್ನು ಬರೆದವರೆಂಬರ್ಥವು ಸ್ಪಷ್ಟವಾಗಿ

ರುವುದು. " ಅನುಭವಸೂತ್ರವಾದಿಶಾಸ್ತ್ರಂಗಳಂ " ಎಂಬಲ್ಲಿ ಆದಿಪದಪ್ರಯೋಗ ವಿರುವುದರಿಂದ ಶತಕತ್ರಯ ಮೊದಲಾದ ಗ್ರಂಥಗಳೆಲ್ಲವೂ ಉಪಲಕ್ಷಿಸಲ್ಪಡಬ ಹುದು. ಈ ವಿರೂಪಾಕ್ಷಪಂಡಿತರು ಮಗ್ಗೆಯಮಾಯಿದೇವರ ಗ್ರಂಥಗಳನ್ನು ಚೆನ್ನಾಗಿ ನೋಡಿದ್ದರೆಂಬುದಕ್ಕೆ ಅನುಭವಸೂತ್ರವನ್ನೇ ಆದ್ಯಂತವಾಗಿ ಅನುಸರಿಸಿ, ತಮ್ಮ ಚೆನ್ನಬಸವಪುರಾಣದಲ್ಲಿನ ಷಟ್ಸ್ಥಲವಿವರಣೆಯನ್ನು ಬರೆದಿರುವುದೇ ಮುಖ್ಯೋ ದಾಹರಣೆಯಾಗಿದೆ. ಅದುಕಾರಣ, ಮಾಯಿದೇವರ ವಿಷಯವನ್ನು ಇವರು ಚೆನ್ನಾಗಿ ಬಲ್ಲವರು. ಇವೆಲ್ಲ ವಿಚಾರಗಳಿಂದ ಮಾಯಿದೇವ ಎಂಬ ಹೆಸರಿಗೇ ಕಲ್ಯಾಣದ ಮತ್ತೂ ಮಗ್ಗೆಯ ಎಂಬ ಉಪಪದಗಳಿದ್ದವೆಂದು ಹೇಳಬೇಕಾಗುತ್ತದೆ.

ಇನ್ನು ಈ ಗ್ರಂಥಕರ್ತರ ವಿಷಯವನ್ನು ಕುರಿತು ವಿಚಾರಿಸುವ:—ಅನು ಭವಸೂತ್ರದಲ್ಲಿ ಇವರು ಹೇಳಿಕೊಂಡಿರುವ ತಮ್ಮ ವಂಶಾವಳಿಯ ಪ್ರಕಾರ-ಐವುರ ವೆಂಬ ನಗರದಲ್ಲಿ ಉಪಮನ್ಯುಶಿವಾಚಾರ್ಯರು ಸೋಮನಾಥ ಭಜಕರಾಗಿದ್ದರು. ಅವರಿಂದ ಭೀಮನಾಥರು ಜನಿಸಿದರು. ಅವರಿಂದ ಕಳೇಶ್ವರರು, ಅವರಿಂದ ಬೊಪ್ಪ ನಾಥರು, ಅವರಿಂದ ನಾಕರಾಜರು ಜನಿಸಿದರು. ಅವರ ಶಿಷ್ಯರಾಗಿ ಸಂಗಮೇಶ್ವರ ದೇವರು ಜನಿಸಿದರು. ಅವರ ಸುಕುಮಾರರೇ ಈ ಮಾಯಿದೇವರೆಂದು ಗೊತ್ತಾಗು ವುದು. ಹೀಗೆ ಪಾವನ ಪಾರಂಪರ್ಯವುಳ್ಳ ಈ ಮಾಯಿದೇವಪ್ರಭುವು ಸಕಲ ಶಿವಾ ಗಮಗಳನ್ನೂ, ವೇದವೇದಾಂತಾದಿಗಳನ್ನೂ ಚೆನ್ನಾಗಿ ಅರಿತವರಾಗಿ ಉಭಯ ಭಾಷಾ ಕವಿತೆಯಲ್ಲೂ ಸಮರ್ಥರಾಗಿದ್ದರೆಂಬುದನ್ನು ಅವರ ಗ್ರಂಥಗಳೇ ನಿರೂಪಿ ಸುತ್ತಿವೆ. ಇವರು ವಿಜಯನಗರದ ಪ್ರೌಢದೇವರಾಯನಿಂದ ಸಂಪೂಜಿತರಾಗಿದ್ದ ರೆಂದು ಚೆನ್ನಬಸವಪುರಾಣಕಾರರು ಹೇಳಿರುವ ಕಾರಣ, ಆ ರಾಜನ ಆಳ್ವಿಕೆಯ ಕಾಲದಲ್ಲಿವರಿದ್ದರೆಂಬುದು ವ್ಯಕ್ತವಾಗುತ್ತದೆ. ವಿಜಯನಗರವನ್ನು ಆಳಿದ ಅರಸು ಗಳಲ್ಲಿ ಪ್ರೌಢದೇವರಾಯನೆಂಬ ಹೆಸರುಳ್ಳವನು ಒಬ್ಬನೇ ಒಬ್ಬನು. ಇವನು ಮೊದ ಲನೆಯ ವಂಶಕ್ಕೆ ಸೇರಿದವನು. " ಈ ಪ್ರೌಢದೇವನ ಮಗನ ಕಾಲಕ್ಕೆ ಆ ರಾಜ್ಯ ವನ್ನು ನರಸಣ್ಣ (ನರಸಿಂಗ) ರಾಯನೆಂಬುವವನು ಗೆದ್ದುಕೊಂಡನು. ಅವನ ವಂಶವೇ ೨ ನೆಯದು. ಆ ವಂಶೀಯರು ೫೧ ವರ್ಷದವರೆಗೆ ಆಳಿದರು. ಅದಕ್ಕೆ ಅಚ್ಯುತರಾ ಯನೇ ಕಡೆ." ಎಂದು ವಿರೂಪಾಕ್ಷ ಪಂಡಿತರು ಹೇಳುತ್ತಾರೆ. ಈ ಸಂಗತಿಯೆಲ್ಲಾ ವಿಜಯನಗರದ ಚರಿತ್ರದಲ್ಲಿ ವರ್ಣಿಸಲ್ಪಟ್ಟಿರುವುದಕ್ಕೆ ಸರಿಹೋಲುತ್ತದೆ. ಇದಲ್ಲದೆ ವಿರೂಪಾಕ್ಷಪಂಡಿತರು ಪ್ರೌಢರಾಯನು ಆಳಿದಮೇಲೆ ಅರ್ಧಶತಮಾನದ ಕಾಲದಲ್ಲಿ ವಿಜಯನಗರದಲ್ಲಿದ್ದವರಾದ ಕಾರಣ ಅವರು ಆ ರಾಜ್ಯದ ಸಂಬಂಧದಲ್ಲಿ ಮಾಡಿ

ರುವ ಉಲ್ಲೇಖಗಳು ನಿಜವಾದುವೆಂದು ಹೇಳಲು ಅಭ್ಯಂತರವಿರುವುದಿಲ್ಲ. ಈ ಪ್ರೌಢರಾಯನ ಹೆಸರಿನ ಒಂದು ಶಿಲಾಲೇಖವು (ಕ್ರಿ|| ಶ|| ೧೪೩೮ ನೆಯ ವರ್ಷದುದು) ಕಡಪಾ ಜಿಲ್ಲೆಯಲ್ಲಿದೆಯೆಂದು ವಿಜಯನಗರಚರಿತ್ರದಲ್ಲಿ ಹೇಳಲ್ಪಟ್ಟಿರುವ ಕಾರಣದಿಂದಲೂ, ಚರಿತ್ರದ ಇತರಾಧಾರದಿಂದಲೂ ಮಗ್ಗೆ ಮಾಯಿದೇವರು ಅದೇ ಕಾಲದಲ್ಲಿದ್ದವರೆಂದು ಹೇಳುವುದಾಗಿದೆ. ಇವರು ಮತ್ತಾವ ಗ್ರಂಥಗಳನ್ನು ಬರೆದಿರುವರೆಂಬುದು ಗೊತ್ತಾಗಿಲ್ಲ. ಮಗ್ಗೆಯ ಮಾಯಿದೇವರವಚನವೆಂಬ ಗ್ರಂಥವೊಂದಿದೆಯೆಂದು ಕೇಳಿಕೆಯುಂಟು. "ಮಾಯಿದೇವರು, ನೆಳಲು ಭೂಮಿಯ ಮೇಲೆ ಬೀಳದಂತಹ ಜಯಸ್ತಂಭವನ್ನು ನಟ್ಟು, ಇಷ್ಟಲಿಂಗವನ್ನು ಶರೀರದಮೇಲೆ ಧರಿಸಿದವರಿಗೆ ಭವಬಂಧವಿಲ್ಲವೆಂಬುದನ್ನು ಸಿದ್ಧಾಂತ ಮಾಡಿ ತೋರಿಸಿ, ಷಟ್ಸ್ಥಲ ಮಾರ್ಗವನ್ನು ವಿಸ್ತರಿಸಿ ನಿರೂಪಿಸಿದರು." ಎಂಬುದಾಗಿ ತೋಂಟದಾರ್ಯರು ತಮ್ಮ ಪಾಲ್ಕುರಿಕೆ ಸೋಮೇಶ್ವರ ಪುರಾಣದ ಆದಿಭಾಗದಲ್ಲಿ ಹೇಳಿಕೊಂಡಿದ್ದಾರೆ.

ಈ ಶತಕತ್ರಯಕ್ಕೆ ಕರ್ಣಾಟಕ ವ್ಯಾಖ್ಯಾನವನ್ನು ಬರೆದವರು ತೋಂಟದ ಸಿದ್ಧಲಿಂಗ ಶಿವಯೋಗಿಗಳು. ಇವರಿಗೆ ತೋಂಟದಾರ್ಯ, ತೋಂಟದ ಸಿದ್ಧಲಿಂಗ ತೋಂಟದ ಸಿದ್ಧಲಿಂಗದೇಶಿಕ, ತೋಂಟದ ಸಿದ್ಧಲಿಂಗ ಶಿವಯೋಗೀಂದ್ರ ಎಂಬುದಾಗಿ ರೂಢವಾದ ಹೆಸರುಗಳಿದ್ದುವೆಂದು ಅವರು ತಮ್ಮ ಗ್ರಂಥಗಳಲ್ಲಿ ಉಪಯೋಗಿಸಿಕೊಂಡಿರುವ ಹೆಸರುಗಳಿಂದಲೇ ಗೊತ್ತಾಗುತ್ತದೆ. ಇವರು ಸಿದ್ಧೇಶ್ವರಪುರಾಣ ಪಾಲ್ಕುರಿಕೆ ಸೋಮೇಶ್ವರ ಪುರಾಣ, ಕರ್ಣಾಟಕಶಬ್ದಮಂಜರಿ, ಚಿದಾನಂದಸಿಂಧುವೆಂಬ ಗ್ರಂಥಗಳನ್ನು ವಿರಚಿಸಿದ್ದಾರೆ. ಮನೋವಿಜಯ ಮೊದಲಾದ ಅನೇಕ ಗ್ರಂಥಗಳಿಗೆ ಟೀಕೆಯನ್ನು ಬರೆದಿದ್ದಾರೆ. ಇವರು ರಚಿಸಿದ ಗ್ರಂಥಗಳ ಮೊದಲಿನಲ್ಲೆಲ್ಲಾ ನಿರಂಜನಲಿಂಗದ ಸ್ತುತಿಮಾಡಿರುವುದು ಒಂದು ಹೆಗ್ಗುರುತಾಗಿದೆ. ಬಿಜ್ಜಾವರವೆಂಬ ಪಟ್ಟಣಕ್ಕೆ ತೋಂಟದಸಿದ್ಧಲಿಂಗ ಭೂಪಾಲನೆಂಬುವವನು ಅರಸನಾಗಿದ್ದನೆಂದೂ, ಅವನಿಗೆ ಗುರುವಾಗಿಯೂ, ಚೆನ್ನನಂಜೇಶ್ವರರ ಶಿಷ್ಯರಾಗಿಯೂ ಇದ್ದ ನಂದಿಪುರದ ಸಿಹ್ಮಾಸನದ ಪರ್ವತೇಶರಿಂದ ದೀಕ್ಷಾತ್ರಯವನ್ನು ಹೊಂದಿ ಈ ತೋಂಟದಾರ್ಯರು ಶಿಷ್ಯರಾಗಿದ್ದರೆಂದೂ, ಇವರಿಗೆ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಸಂಪ್ರದಾಯದ ಗೂಳೂರ ಸಿದ್ಧವೀರಸ್ವಾಮಿಗಳಿಂದ ವಿರಕ್ತಾಶ್ರಮವು ಕೊಡಲ್ಪಟ್ಟಿರಬೇಕೆಂದೂ ಇವರ ಗ್ರಂಥಗಳ ಆಧಾರದಿಂದಲೇ ಕಂಡುಬರುತ್ತದೆ. ಇವರ ಕವಿತಾರಚನೆಯು ಹೊಸಗನ್ನಡದಿಂದ ಮಿಶ್ರವಾಗಿದೆ. ಇವರು ಬಹುಶಃ ೧೭ ನೆಯ ಶತಮಾನದಲ್ಲಿದ್ದಿರಬಹುದೆಂದು ಕಾಣುತ್ತದೆ.

ಶತಕತ್ರಯಕ್ಕೆ ಇವರು ಟೀಕೆಯನ್ನು ಬರೆದಿದ್ದರೂ, ಸಾಧಾರಣರಿಗೆ ಪದ್ಯಾಭಿಪ್ರಾಯವು ಚೆನ್ನಾಗಿ ಸ್ಫುರಿಸುತ್ತಿರಲಿಲ್ಲವಾದಕಾರಣ, ಅವರ ವ್ಯಾಖ್ಯಾನದಮೇಲೆ ಸುಲಭವಾದ ಕನ್ನಡಟಿಪ್ಪಣವನ್ನು ಬರೆಯಿಸಿ, ಪ್ರಾಚೀನವಾದ ೩ ತಾಳಪ್ರತಿಗಳನ್ನಿಟ್ಟುಕೊಂಡು, ಸಾಧ್ಯವಾದ ಮಟ್ಟಿಗೂ ಚೆನ್ನಾಗಿ ಪರಿಶೋಧಿಸಿಸಿ ಮುದ್ರಣ ಮಾಡಿಸಲಾಗಿದೆ. ಪ್ರಮಾದವಶಾತ್ ಸ್ಖಾಲಿತ್ಯಾದಿಗಳೇನಾದರೂ ಸಂಭವಿಸಿರುವುದು ಗೋಚರವಾದರೆ, ಮುಂದಣ ಮುದ್ರಣದಲ್ಲಿ ಸರಿಪಡಿಸಲಾಗುವುದು.

ತಾ|| 10-8-1925. ವೈ. ವಿರೂಪಾಕ್ಷಯ್ಯ.

---

ಓಂ

ಶ್ರೀಗುರುಬಸವಲಿಂಗಾಯನಮಃ.

# ಸಟೀಕ ಶತಕತ್ರಯಂ.

## ಉತ್ಪಲಮಾಲಾವೃತ್ತಂ.

ಶ್ರೀಗುರುವೇ ಮಹಾಗುರುವೆ ಶಾಂತಿಕಳಾಗುರುವೇ ಶಿವಾತ್ಮವಿ |
ದ್ಯಾಗುರುವೇ ಪುರಾಗುರುವೆ ವಿಶ್ವಜಗದ್ಗುರುವೇ ವಿಶುದ್ಧಜೇ |
ಷ್ಟಾಗುರುವೇ ಸುಧೀಗುರುವೆ ಭಕ್ತಿಯಶೋಗುರುವೇ ಪ್ರಸಾದತೇ |
ಜೋಗುರುವೇ ಕೃಪಾಗುರುವೆ ಮದ್ಗುರುವೇ ಗುರುವೇ ಶಿವಾಧವಾ ||

## ಟೀಕೆ.

ಕಂದ|| ಶ್ರೀಗುರು ನಿಜಬೋಧಾಮೃತ |
ಸಾಗರ ನಪ್ರತಿಮ ನಖಿಳಕಾರಣರೂಪಂ ||
ಯೋಗಿಜನಸೇವಿತಂ ಮಹಿ |
ಮಾಗಾರಂ ಪಾಲಿಸುಗೆ ನಿರಂಜನಲಿಂಗಂ ||

ಗದ್ಯ—ಶ್ರೀಮದನೇಕಲೋಕವಿಸ್ತಾರ ಕಾರಣರೂಪ ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವಭಾ
ವಷಟ್ಸ್ಥಲಜ್ಞಾನಪ್ರಭಾ ಪುಂಜರಂಜಿತ ಮಂಜುಳಾಂತರಂಗ ಕಾಂಡತ್ರಯಾತೀತಾಖಂಡಿತಾಮಳ
ಭಕ್ತಿಕಾಂಡಮಂಡಿತೋದ್ದಂಡ ಶಿವಯೋಗಿಜನ ಮನಸ್ಸರಸೀವಿಹರದ್ರಾಜಹಂಸ ಭಕ್ತಿಜ್ಞಾನವೈರಾಗ್ಯ
ಮಾರ್ಗೋದ್ಧಾರ ಪರಮಚರಿತ ಶರಣ ಕರುಣಾಪಾಂಗ ಶ್ರೀಮನ್ನಿರಂಜನಲಿಂಗಕೃಪಾಮೃತಸಾರಪೂರ
ನಿರ್ಮಲಾಂತಃಕರಣ ಶುದ್ಧಜ್ಞಾನ ಸತ್ಕ್ರಿಯಾಚಾರವರ್ತನಾಯುಕ್ತನಪ್ಪ ತೋಂಟದ ಸಿದ್ಧಲಿಂಗದೇ
ವನೆ ತಾಂ, ಮಗ್ಗೆಯ ಮಾಯಿದೇವ ಪ್ರಭುವಿನಿಂ ನಿರೂಪಿತಮಪ್ಪ ಪರಮವೀರಶೈವಮಾರ್ಗ ಪ್ರತಿ
ಪಾದಕಮಪ್ಪ ಶತಕತ್ರಯ ಮಹಾಪ್ರಬಂಧಮಂ ಸಮಸ್ತಶಿವಗಣಂಗಳಿಂದಾಚರಿಸಿ ನಿತ್ಯಮುಕ್ತರಾಗ
ಲೆಂದು ಶುದ್ಧಶಬ್ದಾರ್ಥಂಗಳಿನೆಲ್ಲರರಿವಂತೆ ಕನ್ನಡಿಸಿ ವ್ಯಾಖ್ಯಾನಮಂ ಮಾಡಿದಪೆಂ.

ಅವತಾರಿಕೆ—ಇಂತು ಮಗ್ಗೆಯ ಮಾಯಿದೇವಾಚಾರ್ಯಂ ಸಕಲಭಕ್ತಜನಹಿತೋಪದೇಶ
ಕಾರಣಾರ್ಥವಾಗಿ ಭಕ್ತಿಜ್ಞಾನವೈರಾಗ್ಯ ವೈಭವಮಂ ಪ್ರಕಟಿಸಲಿಚ್ಛೈಸಿ ತತ್ಪ್ರತಿಪಾದಕ ಶತಕತ್ರ
ಯಮಂ ಪೇಳಲುದ್ಯೋಗಿಸಿದಾತನಾಗಿ "ಯೋಗುರುಸ್ಸಶಿವಃಪ್ರೋಕ್ತೋಯಶ್ಶಿವಸ್ಸಗುರುಸ್ಮೃತಃ"
ಇಂತೆಂಬ ಶಿವಾಗಮವಾಕ್ಯಪ್ರಮಾಣದಿಂ ಶ್ರೀಗುರುವಿಂಗೆಯುಂ ಶಿವಂಗೆಯುಂ ಅಭೇದಮಂ ಭಾವಿಸಿ
ಕೊಂಡು, ಶ್ರೀಗುರು ನಮಸ್ಕಾರರೂಪಮಾದ ಮಂಗಳಾಚರಣೆಯಂ ಗ್ರಂಥಾರಂಭದಲ್ಲಿ ಮಾಡಿ, ಮೊ
ದಲು ಭಕ್ತಿಪ್ರತಿಪಾದಕಮಾದ ಶಿವಾಧವಶತಕಮಂ ಪೇಳುತ್ತಿರ್ದಪಂ.—

ಟೀಕೆ—ಶ್ರೀಗುರುವೆ-ಜ್ಞಾನಸಂಪತ್ತಿಯಿಂದುಪದೇಶಿಸುವ ಗುರುವೆ, ಮಹಾ ಗುರುವೆ-ಪೂಜ್ಯನಾದಂಥ ಗುರುವೆ, ಶಾಂತಿಕಲಾಗುರುವೆ-ಶಾಂತಿಯೆಂಬ ಕಲೆಯೊಡನೆ ಕೂಡಿದ ಅಮೂರ್ತಸಾದಾಖ್ಯಸ್ವರೂಪನಾದಂಥ ಗುರುವೆ, ಶಿವಾತ್ಮವಿದ್ಯಾಗುರುವೇ-ಲಿಂಗಾಂಗಸ್ಥಳಂಗಳೈಕ್ಯವಂ ಬೋಧಿಸುವ ಗುರುವೇ, ಪುರಾಗುರುವೆ-ದೇವದಾನವಮಾನವರುಗಳಿಗೆ ಮೊದಲಿಗನಾದ ಗುರುವೆ, ವಿಶ್ವಜಗದ್ಗುರುವೆ-ಸಮಸ್ತ ಜಗಂಗಳಿಗೂ ಗುರುವೆ, ವಿಶುದ್ಧಚೇಷ್ಟಾಗುರುವೇ-ಅತಿ ನಿರ್ಮಲವಾದ ಚರಿತ್ರೆಯನುಳ್ಳ ಗುರುವೆ, ಸುಧೀಗುರುವೆ-ಶೋಭನವಾದ ಬುದ್ಧಿಯುಳ್ಳ ಗುರುವೇ, ಭಕ್ತಿಯಶೋಗುರುವೆ-ಶಿವಭಕ್ತಿಯಂ ದಿಗಂತದಲ್ಲಿ ಪ್ರಸಿದ್ಧಿಯಂ ಮಾಳ್ಪ ಗುರುವೆ, ಪ್ರಸಾದತೇಜೋಗುರುವೇ-ಶುದ್ಧಸಿದ್ಧಪ್ರಸಿದ್ಧವೆಂಬ ಪ್ರಸಾದದಿಂದಾದ ಪ್ರಭಾವವನುಳ್ಳ ಗುರುವೆ, ಕೃಪಾಗುರುವೆ-ದಯಾಸ್ವರೂಪನಾದ ಗುರುವೆ, ಮದ್ಗುರುವೆ-ಎನ್ನ ಗುರುವೆ, ಗುರುವೆ-ಎನ್ನ ತಂದೆಯಾದ ಗುರುವೆ, ಶಿವಾಧವಾ-ಚಿಚ್ಛಕ್ತಿವಲ್ಲಭನಾದ ಪರಮಶಿವಸ್ವರೂಪನಾದ ಗುರುವೆ, ಜಯ-ಸರ್ವೋತ್ಕೃಷ್ಟನಾಗು.

ವಿಚಾರ—ಇನ್ನಿಲ್ಲಿ " ಜಯ " ವೆಂದು ಕ್ರಿಯಾಧ್ಯಾಹಾರಂ. ಈ ವೃತ್ತದಲ್ಲಿ " ಶಿವಾತ್ಮವಿದ್ಯಾಗುರುವೆ " ಎಂಬ ಪದದಿಂದೆಯುಂ " ಪ್ರಸಾದತೇಜೋಗುರುವೆ " ಎಂಬ ಪದದಿಂದೆಯುಂ " ಸುಧೀಗುರುವೆ " ಎಂಬ ಪದದಿಂದೆಯುಂ " ಭಕ್ತಿಯಶೋಗುರುವೇ " ಎಂಬ ಪದದಿಂದೆಯುಂ ಸಂಬಂಧ-ವಿಷಯ-ಪ್ರಯೋಜನ-ಅಧಿಕಾರಿಗಳೆಂಬ ಅನುಬಂಧಚತುಷ್ಟಯಂ ಸೂಚಿಸಲ್ಪಟ್ಟಿತು. ಇಲ್ಲಿ ಲಿಂಗಸ್ಥಲಾಂಗಸ್ಥಲಸಂಯೋಗವೇ ಸಂಬಂಧ, ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ಪಂಚಕಂಗಳನೇಕರೂಪವೆಂದು ಪ್ರತಿಪಾದಿಪುದೇ ವಿಷಯ, ಸ್ವರೂಪ ಸಾಕ್ಷಾತ್ಕಾರರೂಪವಾದ ಮೋಕ್ಷವೇ ಪ್ರಯೋಜನ, ಸರ್ವಾಚಾರಸಂಪನ್ನನಾಗಿ ಷಡರ್ಥಸಂಗ್ರಹಾಚರಣೆಯುಳ್ಳಾತನಾಗಿ ಮುಮುಕ್ಷುವಾದ ಭಕ್ತನೇ ಅಧಿಕಾರಿ. ಇವೀಗ ಪ್ರೇಕ್ಷಾವತ್ಪ್ರವೃತ್ತ್ಯಂಗವಾದ ಅನುಬಂಧಚತುಷ್ಟಯಂಗಳು.

## ಟಿಪ್ಪಣಿ.

ಕಂ|| ಶಕ್ತಿತ್ರಯಸಮವೇತಂ |
ಭಕ್ತವ್ರಜದೇಹಕರಣಪರ್ಯಾಪ್ತಂ ಸ ||
ನ್ಮುಕ್ತಿಪ್ರದ ನೆಮ ಗಾತ್ಮ |
ವ್ಯಕ್ತಿಯ ನೊಡರಿಸುಗೆ ಯೊಚ್ಚತಂ ಶಿವಲಿಂಗಂ ||

ತನ್ನನ್ನಾಶ್ರಯಿಸಿದವರಿಗೆ ಉಪದೇಶ ಬಲದಿಂದ ಶಿವಜ್ಞಾನಸಂಪತ್ತಿಯನ್ನುಂಟುಮಾಡುವ ಗುರುವೆ, ಪೂಜ್ಯನಾದ ಗುರುವೆ, ಶಾಂತಿಯೆಂಬ ಕಲೆಯೊಡನೆ ಕೂಡಿದ ಗುರುವೆ, ಲಿಂಗಾಂಗಸಾಮರಸ್ಯ ವಿದ್ಯೆಯನ್ನು ಬೋಧಿಸುವ ಗುರುವೆ, ದೇವರಾಕ್ಷಸ ಮಾನುಷಾದಿಗಳಿಗೆಲ್ಲಕ್ಕೂ ಮೊದಲಿಗನಾದ ಗುರುವೆ, ಸಕಲ ಪ್ರಪಂಚಕ್ಕೂ ಪೂಜ್ಯನಾದ ಗುರುವೆ, ನಿರ್ಮಲವಾದ ನಡೆಯುಳ್ಳ ಗುರುವೆ, ಸದ್ಬುದ್ಧಿಪ್ರದಾಯಕನಾದ ಗುರುವೆ, ಶಿವಭಕ್ತಿಯನ್ನು ಪ್ರಸಾರಮಾಡುವ ಸತ್ಕೀರ್ತಿಯಿಂದ ಮಂಡಿತನಾದ

ಗುರುವೆ, ಗುರುಲಿಂಗಜಂಗಮರ ಶುದ್ಧ ಸಿದ್ಧ ಪ್ರಸಿದ್ಧಪ್ರಸಾದಗಳ ಪ್ರಭಾವವನುಳ್ಳ ಗುರುವೆ, (ಅಥವಾ ಶಿವಾನುಗ್ರಹದಿಂ ಲಭಿಸಿದ ಮಹಾತೇಜಸ್ಸಿನಿಂದ ವಿರಾಜಿತನಾದ ಗುರುವೆ,) ದಯಾಮಯನಾದ ಗುರುವೆ, ನನ್ನ ತಂದೆಯೇ, ನನ್ನ ಗುರುವೇ, ಜ್ಞಾನಶಕ್ತಿಗೊಡೆಯನಾದ ಪರಶಿವನ ಸ್ವರೂಪನಾದ ಗುರುವೆ, ಸರ್ವೋತ್ಕೃಷ್ಟನಾಗು. ಎಂದು ಗ್ರಂಥಕರ್ತೃವಾದ ಶ್ರೀ ಮಗ್ಗೆಯ ಮಾಯಿದೇವರು ತಾವು ಆರಂಭಿಸಿದ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳುವುದಕ್ಕಾಗಿಯೂ, ಭಕ್ತಜನ ಹಿತೋಪದೇಶಾರ್ಥವಾಗಿಯೂ, ಶ್ರೀಗುರುವನ್ನೂ ಪರಶಿವನನ್ನೂ ಅಭೇದಭಾವನೆಯಿಂದ ಸ್ತುತಿಸಿ, ಮಂಗಳಾಚರಣವನ್ನು ಈ ಪದ್ಯದಲ್ಲಿ ಮಾಡಿರುತ್ತಾರೆ. ||೧||

ಅವತಾರಿಕೆ—ಇನ್ನು ಆಚಾರ್ಯಂ ಸ್ವಗುರುನಮಸ್ಕಾರಾನಂತರದಲ್ಲಿ ವೀರಶೈವ ಸಂಪ್ರದಾಯ ಪ್ರವರ್ತಕರಾದ ಬಸವೇಶ್ವರ, ಚೆನ್ನಬಸವೇಶ್ವರ, ಪ್ರಭುದೇವರೆಂಬ ಪುರಾತನರಂ ಮೂರುಪದ್ಯದಿಂ ಸ್ತೋತ್ರಮಂ ಮಾಡುತ್ತಿರ್ದಪಂ—

ಜಯ ಬಸವೇಶ ಭಕ್ತಜನಭಾಗ್ಯ ಶುಭೋದಯ ವೀರಶೈವನಿ |
ರ್ಣಯಪರಮಾವತಾರ ಶರಣಾಗತರಕ್ಷಕ ಚಿದ್ಘನಪ್ರಭಾ ||
ಮಯ ಜಗದಾದಿದೇಶಿಕ ಪುರಾತನಪುಂಗವ ಶಾಂಭವೈಪುರಾ |
ಶ್ರಯ ಜಯ ಸೋಮನಾಥ ಜಯ ದೇವ ಜಯಾವಿರತಂ ಶಿವಾಧವಾ ||೨||

ಟೀಕೆ—ಭಕ್ತಜನಭಾಗ್ಯ-ಶಿವಭಕ್ತಜನಂಗಳ ಭಾಗ್ಯಸ್ವರೂಪನಾದ, ಶುಭೋದಯ-ಶೋಭನವಾದ ಏಳಿಗೆಯನ್ನುಳ್ಳಂಥ, ವೀರಶೈವನಿರ್ಣಯಪರಮಾವತಾರ, ವೀರಶೈವ ನಿರ್ಣಯ-ವೀರಶೈವಾಚಾರ ನಿಶ್ಚಯಕ್ಕೋಸ್ಕರ (ಪುನರುದ್ಧಾರಣೆಗೋಸ್ಕರ) ಪರಮಾವತಾರ-ಉತ್ಕೃಷ್ಟವಾದ ಅವತಾರವುಳ್ಳಂಥ, ಶರಣಾಗತರಕ್ಷಕ-ಮರೆಹೊಕ್ಕವರ ರಕ್ಷಿಸುವಂಥ, ಚಿದ್ಘನಪ್ರಭಾಮಯ-ಜ್ಞಾನದಿಂದ ದಟ್ಟೈಸಿತ್ತಾದ ಪ್ರಕಾಶಸ್ವರೂಪನಾದಂಥ, ಜಗದಾದಿದೇಶಿಕ-ಲೋಕಗಳಿಗೆ ಪ್ರಥಮಾಚಾರ್ಯನಾದಂಥ, ಪುರಾತನಪುಂಗವ-ಪೂರ್ವದ ಪ್ರಮಥಗಣಂಗಳಲ್ಲಿ ಶ್ರೇಷ್ಠನಾದಂಥ, ಬಸವೇಶ-ಎಲೈ ಬಸವೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು. ಶಾಂಭವೈಪುರಾಶ್ರಯ-ಶಿವಸಂಬಂಧಿಯಾದ ಜ್ಞಾನಾಕಾಶವೆಂಬ ಪಟ್ಟಣವೇ ಆಶ್ರಯವಾಗುಳ್ಳ ('' ಐ ಕಾರಃ ಕಥ್ಯತೇ ಜ್ಞಾನೇ ವಾಗ್ಭವೇ ಗಜಶಿಕ್ಷಣೆ '' ಎಂದು ನಾನಾರ್ಥರತ್ನಮಾಲೆಯುಂಟಾಗಿ, ಐ ಕಾರಕ್ಕೆ ಜ್ಞಾನವೆಂಬರ್ಥವು.) ಸೋಮನಾಥ-ಚಿತ್ಕಲಾಸಂಯುಕ್ತನಾದ, ಬಸವೇಶ-ಎಲೈ ಬಸವೇಶ್ವರನೇ, ಜಯ-ಸರ್ವೋತ್ಕೃಷ್ಟನಾಗು, ದೇವ-ಸ್ವಯಂಪ್ರಕಾಶಸ್ವರೂಪನಾದ, ಬಸವೇಶ-ಎಲೈ ಬಸವೇಶ್ವರನೇ,- ಜಯ-ಸರ್ವೋತ್ಕೃಷ್ಟನಾಗು, ಶಿವಾಧವಾ-ಗುಣತ್ರಯಾತೀತಮಪ್ಪ ಪರಶಕ್ತಿಗೆ ವಲ್ಲಭನಾದ, ಬಸವೇಶ-ಎಲೈ ಬಸವೇಶ್ವರನೇ, ಅವಿರತಂ-ನಿರಂತರದಲ್ಲಿ, ಜಯ-ಸರ್ವೋತ್ಕೃಷ್ಟನಾಗು ||೨||

ಟಿಪ್ಪಣಿ—ಶಿವಭಕ್ತರಿಗೆ ಭಾಗ್ಯಸ್ವರೂಪನಾಗಿಯೂ, ಲೋಕಕ್ಕೆ ಮಂಗಳಕರವಾದ ತನ್ನ ಅಭ್ಯುದಯವುಳ್ಳವನಾಗಿಯೂ, ವೀರಶೈವಾಚಾರವನ್ನು ಜೀರ್ಣೋದ್ಧಾರಗೊಳಿಸುವುದಕ್ಕಾಗಿ ಉತ್ಕೃಷ್ಟವಾದ ಅವತಾರವನ್ನೆತ್ತಿದವನಾಗಿಯೂ, ತನ್ನ ಮರೆಹೊಕ್ಕವರನ್ನು ರಕ್ಷಿಸುವವನಾಗಿಯೂ, ಶಿವಜ್ಞಾನತೇಜಸ್ಸಿನಿಂದ ಪರಿಪೂರ್ಣನಾಗಿಯೂ, ಲೋಕಕ್ಕೆ ಆದಿಗುರುವಾಗಿಯೂ, ಪ್ರಮಥಶ್ರೇಷ್ಠನಾಗಿಯೂ, ಶಿವಜ್ಞಾನವೆಂಬ ಆಕಾಶವೇ ತನ್ನ ವಾಸದ ಪಟ್ಟಣವಾಗಿಯೂ ಇರುವ ಬಸವೇಶನೆ ಸರ್ವೋತ್ಕೃಷ್ಟನಾಗು. ಪರಶಕ್ತಿಯಿಂದೊಡಗೂಡಿದ ಸ್ವಾಮಿಯೇ, ಸರ್ವೋತ್ಕೃಷ್ಟನಾಗು. ಸ್ವಪ್ರಕಾಶನಾದೆನ್ನೊಡೆಯನೆ ಸರ್ವೋತ್ಕೃಷ್ಟನಾಗು. ಚಿಚ್ಛಕ್ತಿಸ್ವರೂಪಿಣಿಯಾದ ಅಂಬಿಕೆಗೆ ವಲ್ಲಭನಾದ ಪರಶಿವನಸ್ವರೂಪನಾದ ಬಸವೇಶನೆ! ಸದಾ ಸರ್ವೋತ್ಕೃಷ್ಟನಾಗು. ಎಂಬುದಾಗಿ ಈ ಪದ್ಯದಲ್ಲಿ ಶ್ರೀ ಬಸವೇಶ್ವರನನ್ನು ಶಿವಾಭಿನ್ನನನ್ನಾಗಿ ಭಾವಿಸಿ ಸ್ತುತಿಸಿರುವರು ||೨||

ಬಸವಕುಮಾರ ಭಾಕ್ತಿಕಪುರಸ್ಸರ ಷಟ್ಸ್ಥಲಧೀರ ಚಿತ್ಸುಧಾ |
ರಸಭರಿತಾಂತರಂಗ ಸಕಲಾಕ್ಷಸಮರ್ಪಿತಲಿಂಗತತ್ಪ್ರಸಾ ||
ದಸುಖವಿಶೇಷತೃಪ್ತ ಶಿವಯೋಗಪದೈಕಸಮಾಪ್ತ ನೀನೆ ರ |
ಕ್ಷಿಸುಗಡ ಜೀಯ ಚೆನ್ನಬಸವಯ್ಯ ಕೃಪಾನಿಧಿಯೇ ಶಿವಾಧವಾ ||೩||

ಟೀಕೆ—ಭಾಕ್ತಿಕಪುರಸ್ಸರ–ಶಿವಭಕ್ತರಲ್ಲಿ ಅಗ್ರೇಸರನಾದಂಥ–("ಪುರೋಗಾಗ್ರೇಸರಪ್ರಷ್ಠಾಗ್ರತಸ್ಸರಪುರಸ್ಸರಾಃ" ಎಂದು ಅಮರ ನಿಘಂಟು) ಷಟ್ಸ್ಥಲಧೀರ–ಷಟ್ಸ್ಥಲಮಾರ್ಗಮಂ ಬಲ್ಲಂಥ ("ಧೀರೋಮನೀಷೀ ಜ್ಞಃಪ್ರಾಜ್ಞಃ" ಎಂದು ನಿಘಂಟು.) (ಷಟ್ಸ್ಥಲಜ್ಞಾನಮಂ ಕೊಡುತಿರ್ಪಂಥಾತನೆಂದಾದರೂ ಆಗಲಿ, "ವಿದ್ಯಾಯಾಂರಮತೇ ಯಸ್ಮಾದ್ವೀರಇತ್ಯುಚ್ಯತೆಬುಧೈಃ" ಎಂಬಂತೆ ಷಟ್ಸ್ಥಲಜ್ಞಾನವಿದ್ಯೆಯಲ್ಲಿ ರಮಿಸುತ್ತಿರ್ಪಾತನೆಂದಾದರೂ ಆಗಲಿ) ಚಿತ್ಸುಧಾರಸಭರಿತಾಂತರಂಗ–ಜ್ಞಾನಾಮೃತರಸದಿಂ ತುಂಬಲ್ಪಟ್ಟಂತರಂಗವನುಳ್ಳಂಥ, ಸಕಲಾಕ್ಷಸಮರ್ಪಿತ ಲಿಂಗತತ್ಪ್ರಸಾದಸುಖವಿಶೇಷತೃಪ್ತ, ಸಕಲ–ಸಮಸ್ತವಾದ, ಅಕ್ಷ–ಇಂದ್ರಿಯಂಗಳಲ್ಲಿ, ಸಮರ್ಪಿತ–ಇರಿಸಲ್ಪಟ್ಟ ಲಿಂಗ–ಲಿಂಗಂಗಳ, ತತ್ಪ್ರಸಾದಸುಖವಿಶೇಷ–ಆ ಪ್ರಸಾದಸುಖಾತಿಶಯದಿಂದ, ತೃಪ್ತ–ತುಷ್ಟಿವಡೆದಾತನಾದಂಥ, ಶಿವಯೋಗಪದೈಕಸಮಾಪ್ತ–ಶಿವಯೋಗಪದವೊಂದರಿಂದಲೇ ಲೇಸಾಗಿ ಐದಲ್ಪಟ್ಟಂಥ, ಕೃಪಾನಿಧಿಯೇ–ಕೃಪೆಗೆ ನೆಲೆಯಾದಂಥ, ಶಿವಾಧವಾ–ಚಿಚ್ಛಕ್ತಿವಲ್ಲಭನಾದಂಥ ಪರಶಿವನ ಸ್ವರೂಪನಾದ, ಬಸವಕುಮಾರ–ಬಸವೇಶ್ವರನಪುತ್ರನಾದಂಥ, ಚೆನ್ನಬಸವಯ್ಯ–ಚನ್ನಬಸವೇಶ್ವರನೆಂಬ, ಜೀಯ–ಎಲೆ ಒಡೆಯನೆ, ನೀನೆ ರಕ್ಷಿಸುಗಡ–ನೀನೆ ಪಾಲಿಸುಕಂಡೆಯಾ||

ಟಿಪ್ಪಣಿ—ಶ್ರೀ ಬಸವೇಶ್ವರನಿಂದ ಶಿವದೀಕ್ಷೋಪದೇಶಗಳನ್ನು ಪಡೆದು ಶಿಷ್ಯನಾಗಿಯೂ, ಶಿವಭಕ್ತರಲ್ಲಿ ಅಗ್ರೇಸರನಾಗಿಯೂ, ಭಕ್ತಾದಿಐಕ್ಯಾಂತಮಾದ ಷಟ್ಸ್ಥಲವಿದ್ಯೆಯಲ್ಲಿ ಪಂಡಿತನಾಗಿಯೂ, ಶಿವಜ್ಞಾನಾಮೃತದಿಂದ ತುಂಬಿದ ಚಿತ್ತವುಳ್ಳವನಾಗಿಯೂ, ಸಕಲೇಂದ್ರಿಯ ಮುಖದಿಂದಾಗತವಾದ

ಸುಖಗಳನ್ನು ಆಯಾ ಲಿಂಗಗಳಿಗೆ ಸಮರ್ಪಿಸಿ ಅವುಗಳ ಪ್ರಸಾದ ಸುಖವನ್ನು ತಾನನುಭವಿಸುವುದ ರಿಂದ ತೃಪ್ತನಾಗಿಯೂ, ಶಿವಯೋಗಸಂಪನ್ನರಾದ ಜನರಿಗೆ ಮಾತ್ರವೇ ದೊರೆಯುವವನಾಗಿಯೂ, ಕೃಪಾನಿಕ್ಷೇಪನಾಗಿಯೂ, ಚಿಚ್ಛಕ್ತಿಪತಿಯಾದ ಪರಶಿವನ ಸ್ವರೂಪನಾಗಿಯೂ ಇರುವ ಎಲೈ ಸ್ವಾಮಿ ಚೆನ್ನಬಸವೇಶನೆ ! ನನ್ನನ್ನು ಸಂರಕ್ಷಿಸು. ಎಂದು ಶ್ರೀ ಚೆನ್ನಬಸವೇಶನನ್ನು ಶಿವಾಭಿನ್ನನನ್ನಾಗಿ ಈ ಪದ್ಯದಲ್ಲಿ ನುತಿಸಿರುವರು ||೩||

ಪ್ರಭುವೆ ಮಹಾಗುರುಪ್ರಭುವೆ ಲಿಂಗಕಳಾಪ್ರಭುವೇ ಚರಾಭಿಧ |
ಪ್ರಭುವೆ ಶಿವಾತ್ಮವಿತ್ಪ್ರಭುವೆ ಯೋಗಿವರಪ್ರಭುವೇ ಚಿದಂಗನಾ ||
ಪ್ರಭುವೆ ಸದಾಮಲಪ್ರಭುವೆ ರಕ್ಷಿಸು ದೇವ ಗುಹೇಶ್ವರಾಲ್ಲಮ |
ಪ್ರಭುವೆ ನಿರಂಜನಪ್ರಭುವೆ ಮತ್ಪ್ರಭುವೇ ಪ್ರಭುವೇ ಶಿವಾಧವಾ ||೪||

ಟೀಕೆ—ಪ್ರಭುವೆ-ನಿಗ್ರಹಾನುಗ್ರಹಸಮರ್ಥನೆ, ಮಹಾಗುರುಪ್ರಭುವೆ-ಪೂಜ್ಯನಾದ ಗುರುವರೇಣ್ಯನೆ, ಲಿಂಗಕಳಾಪ್ರಭುವೇ-ಲಿಂಗಚೈತನ್ಯಕ್ಕಧೀಶ್ವರನೇ, ಶಿವಾತ್ಮವಿತ್ಪ್ರಭುವೆ-ಶಿವತತ್ವಮಂಬಲ್ಲವರ್ಗಧೀಶ್ವರನೆ, ("ಆತ್ಮಾಭಾವೇಧೃತೌಬುದ್ಧೌ ಪರತತ್ವೇಪರಾತ್ಮನಿ" ಎಂದು ಯಾದವನಿಘಂಟು) ಯೋಗಿವರಪ್ರಭುವೇ-ಮಹಾಯೋಗಿಶ್ರೇಷ್ಠರ್ಗಧೀಶ್ವರನೆ, ಚಿದಂಗನಾಪ್ರಭುವೆ-ಜ್ಞಾನಶಕ್ತಿವಲ್ಲಭನೆ, ಸದಾಮಲಪ್ರಭುವೆ-ಯಾವಾಗಲೂ ನಿರ್ಮಲಾಂತಃಕರಣವುಳ್ಳ ಪ್ರಭುವೆ, ನಿರಂಜನಪ್ರಭುವೆ-ನಿರ್ಲೇಪನಾದ ಎಲೈ ಒಡೆಯನೆ, ಮತ್ಪ್ರಭುವೇ-ಎನ್ನಾಳ್ದನೆ, ಪ್ರಭುವೇ-ಸಕಲಜಗತ್ಪರಿಪೂರ್ಣನೆ, ಶಿವಾಧವಾ-ಚಿಚ್ಛಕ್ತಿವಲ್ಲಭನಾದಂಥ, ಗುಹೇಶ್ವರಾಲ್ಲಮಪ್ರಭುವೆ-ತನುಕರಣೇಂದ್ರಿಯಂಗಳಿಗೆ ವಿಲಕ್ಷಣವಾಗಿರ್ಪ ದಹರಾಕಾಶದಲ್ಲಿ ವಿಹರಿಸುವಂಥ ದೇವನೆ, ರಕ್ಷಿಸು-ಪಾಲಿಸು ||೪||

ಟಿಪ್ಪಣಿ—ಗುರುಲಿಂಗಜಂಗಮವರೆಂಬ ವಸ್ತುತ್ರಯಕ್ಕೆ ಚೈತನ್ಯನಾಗಿ ಅವುಗಳಿಗೆ ಅಧೀಶನಾದವನೆ, ಶಿವತತ್ತ್ವವಂ ಬಲ್ಲ ಜ್ಞಾನಿಗಳಿಗೆ ಸ್ವಾಮಿಯಾದವನೆ, ಶಿವಯೋಗಿವರೇಣ್ಯನೆ, ಜ್ಞಾನಶಕ್ತಿಗೆ ಪತಿಯಾದವನೆ, ಯಾವಾಗಲೂ ಮಲರಹಿತನಾಗಿರ್ಪ ಸ್ವಾಮಿಯೆ, ಮಾಯಾರಹಿತನಾದ ಪ್ರಭುವೆ, ದಹರಾಕಾಶಕ್ಕೆ ಅಧೀಶ್ವರನಾದ ಅಲ್ಲಮಪ್ರಭುವೆ, ನನ್ನೊಡೆಯನೆ, ಚಿಚ್ಛಕ್ತಿಯ ಪತಿಯಾದವನೆ, ಕಾಪಾಡು. ಎಂದು ಅಲ್ಲಮಪ್ರಭುವನ್ನು ಈಪದ್ಯದಲ್ಲಿ ಶಿವಾಭಿನ್ನನನ್ನಾಗಿ ಪ್ರಾರ್ಥಿಸಿರುವರು ||೪||

ಅವತಾರಿಕೆ—ಇಂತು ಆಚಾರ್ಯರ್ಗಳಂ ಬಸವಾದಿ ಪುರಾತನರಂ ಸ್ತುತಿಸಿ, ನೂತನಪುರಾತನರಂ ಸ್ತುತಿಸುತ್ತಿರ್ಪಂ.

ಬಸವನ ಸೊರ್ಮೆ ಚೆನ್ನಬಸವಣ್ಣನ ನೊರ್ಮೆ ಗುಹೇಶ್ವರಾಲ್ಲಮ |
ಪ್ರಸವಯಶೋಮಯಪ್ರಭುವ ನೊರ್ಮೆ ಸಮಾಹಿತಮಾದ ಭಾಕ್ತಿಕಂ ||
ಮಸಗೆ ಪುನಃಪುನಸ್ಸ್ಮರಿಸಿ ಕೀರ್ತಿಸಿ ಪಾಡಿ ಭವಪ್ರಪಂಚಮಂ |
ನುಸುಳುವರಯ್ಯ ವೀರನಿಯಮವ್ರತಧರ್ಮಪರ ಶಿವಾಧವಾ ||೫||

ಟೀಕೆ—ವೀರನಿಯಮವ್ರತಧರ್ಮಪರರ್, ವೀರನಿಯಮ, ಅಕ್ರೋಧ, ಗುರು ಸೇವೆ, ಶೌಚ, ಅಲ್ಪಾಹಾರ, ಎಚ್ಚರುಗಳೆಂಬೈದು ನಿಯಮಂಗಳ, ವೀರವ್ರತ-ಗೌರವ, ಲೈಂಗಿಕ, ಆಚಾರ, ಪ್ರಸಾದ, ಪಾದೋದಕ, ಭಕ್ತಿಯೆಂಬ ಷಡ್ವಿಧ ವ್ರತಂಗಳ,ಧರ್ಮ-ಆಚಾರದಲ್ಲಿ, ಪರರ್-ತಾತ್ಪರ್ಯವುಳ್ಳವರುಗಳು, ಬಸವನಂ ಒರ್ಮೆ-ಬಸವೇಶ್ವರನನ್ನೊಂದುವೇಳೆ, ಚೆನ್ನಬಸವಣ್ಣನಂ ಒರ್ಮೆ-ಚೆನ್ನಬಸವೇಶನನೊಂದುಸೂಳು, ಗುಹೇಶ್ವರಾಹ್ವಯಪ್ರಸವಯಶೋಮಯಪ್ರಭುವಂ ಒರ್ಮೆ, ಗುಹೇಶ್ವರಾಹ್ವಯ-ಗುಹೇಶ್ವರನೆಂಬ ಪೆಸರುಳ್ಳ, ಪ್ರಸವಯಶೋಮಯ-ಕುಸುಮ ಸುಕುಮಾರವಾದ ಕೀರ್ತಿಯನುಳ್ಳ, ಪ್ರಭುವಂಒರ್ಮೆ-ಪ್ರಭುದೇವರನೊಂದುಃಸಾರಿ, ಸಮಾಹಿತಮಾದ-ಅವಿರಳವಾದ, ಭಾಕ್ತಿಕಂಮಸಗೆ-ಭಕ್ತಿಭಾವಂ ಪ್ರಕಾಶಿಸುತ್ತಿರಲಾಗಿ, ಪುನಃಪುನಃ-ಮತ್ತೆ ಮತ್ತೆ, ಸ್ಮರಿಸಿ-ನೆನೆದು, ಕೀರ್ತಿಸಿ-ಕೊಂಡಾಡಿ, ಪಾಡಿ-ಗಾನವಂಮಾಡಿ, ಭವಪ್ರಪಂಚಮಂ-ಸಂಸಾರದ ವಿಸ್ತಾರವನ್ನು, ನುಸುಳುವರಯ್ಯ-ದಾಂಟುವವರು ||೫||

ಟಿಪ್ಪಣಿ—ಚಿಚ್ಛಕ್ತಿವಲ್ಲಭನಾದ ಎಲೈಪರಶಿವನೆ, ವೀರಶೈವಶಾಸ್ತ್ರೋಕ್ತವಾದ ಅಕ್ರೋಧಾದಿಪಂಚನಿಯಮಗಳನ್ನೂ, ಗೌರವಾದಿ ಷಡ್ವಿಧ ವೀರವ್ರತವನ್ನೂ ಆಚರಿಸುವುದರಲ್ಲಿ ಆಸಕ್ತರಾದ ವೀರಶೈವರುಗಳು, ಬಸವೇಶನನ್ನೊಂದುಬಾರಿ, ಚೆನ್ನಬಸವೇಶ್ವರನನ್ನೊಂದಾವೃತ್ತಿ, ಗುಹೇಶ್ವರನೆಂಬ ಹೆಸರನ್ನಾಂತ ಸುಮಕೋಮಲವಾದ ಯಶಸ್ಸುಳ್ಳ ಅಲ್ಲಮಪ್ರಭುದೇವನನ್ನೊಂದಾವೃತ್ತಿ, ಹೀಗೆ ಭಕ್ತಿಭರಿತವಾದ ಮನಸ್ಸಿನಿಂದ ತಿರಿತಿರಿಗಿ ಸ್ಮರಿಸಿ, ಕೊಂಡಾಡಿ, ಗಾನಮಾಡಿ, ವಿಸ್ತಾರವಾದ ಸಂಸಾರಸಾಗರವನ್ನು ದಾಟುವವರು ||೫||

ಬಸವಪುರಾತನ ರ್ಚರಿಸಿ ತೋರಿದ ಷಟ್ಸ್ಥಲಮಾರ್ಗದೊಳ್ಪ್ರವ |
ರ್ತಿಸುತ ಮನೂನಭಕ್ತಿರತಿಯಿಂ ತನು ವಿತ್ತಮನಂಗಳಂ ಸಮ ||
ರ್ಪಿಸಿ ಗುರುಲಿಂಗಜಂಗಮಕೆ ವಂಚನೆಯಿಲ್ಲದೆ ಮಾಡಿ ಕೂಡಿ ರಾ |
ಜಿಸುವ ಮಹಾತ್ಮರಂ ನೆನೆವುದೇ ಘನಮುಕ್ತಿಪದಂ ಶಿವಾಧವಾ ||

ಟೀಕೆ|| ಬಸವಪುರಾತನರ್-ಬಸವೇಶ್ವರ ಮುಂತಾದ ಪುರಾತನರು, ಚರಿಸಿ ತೋರಿದ-ಆಚರಿಸಿ ತೋರಿದಂಥ, ಷಟ್ಸ್ಥಲಮಾರ್ಗದೊಳ್-ಷಟ್ಸ್ಥಲ ಮಾರ್ಗದಲ್ಲಿ, ಪ್ರವರ್ತಿಸುತ್ತೆ-ಮಿಗಿಲಾಗಿ ನಡೆಯುತ್ತ, ಅನೂನಭಕ್ತಿರತಿಯಿಂ-ಸಂಪೂರ್ಣವಾದ ಭಕ್ತಿತಾತ್ಪರ್ಯದಿಂ, ಗುರುಲಿಂಗಜಂಗಮಕ್ಕೆ-ಗುರುಲಿಂಗಜಂಗಮವೆಂಬ ತ್ರಿವಿಧಕ್ಕೆ, ತನುವಿತ್ತಮನಂಗಳಂ-ತನುಮನೋಧನಗಳನ್ನು, ವಂಚನೆಯಿಲ್ಲದೆ—ಮರೆಮಾಜದೆ, ಸಮರ್ಪಿಸಿ-ಕೊಟ್ಟು, ಮಾಡಿ-ಇಂತಪ್ಪ ಭಕ್ತಿಯಂಮಾಡಿ, ಕೂಡಿ-ಸಾಮರಸ್ಯವನೈದಿ, ರಾಜಿಸುವ-ಒಪ್ಪುತ್ತಿರ್ಪ, ಮಹಾತ್ಮರಂ-ಮಹಾನುಭಾವರನ್ನು, ನೆನೆವುದೇ-ಸ್ಮರಿಸುವುದೇ, ಘನಮುಕ್ತಿಪದಂ-ದೊಡ್ಡಿತ್ತಾದ ಮೋಕ್ಷಪದವು ||೬||

ಟಿಪ್ಪಣಿ—ಎಲ್ಲೆ ಪಾರ್ವತೀಪತಿಯೆ, ಬಸವಾದಿ ಪ್ರಮಥರು ನಡೆದು ತೋರಿಸಿದ ಷಟ್ಸ್ಥಲಮಾರ್ಗದಲ್ಲಿ ನಡೆದು, ಅತಿಶಯವಾದ ಭಕ್ತಿಯಿಂದ ಗುರುಲಿಂಗಜಂಗಮರುಗಳಿಗೆ ತನುಮನೋಧನಗಳನ್ನು ವಂಚನೆಯಿಲ್ಲದೆ ಸಮರ್ಪಿಸಿ, ಇಂತಪ್ಪ ಭಕ್ತಿಭಾವದಿಂದ ಕೂಡಿ ಮೆರೆಯುವ ಮಹಿಮರನ್ನು ಸ್ಮರಿಸುತ್ತಿರುವುದೇ ಶ್ರೇಷ್ಠವಾದ ಮೋಕ್ಷಪದವಿಯು. ಎಂದು ಆಚಾರ್ಯನು ಈ ಶತಕದಲ್ಲಿ ಪ್ರತಿಪಾದಿಸಲುದ್ದೇಶಿಸಿದ ಭಕ್ತಿಯ ಸ್ವರೂಪವನ್ನೂ ಪ್ರಭಾವವನ್ನೂ ಹೇಳುವುದಕ್ಕೆ ಈ ಪದ್ಯದಿಂದಾರಂಭಿಸಿರುವನು.

ಅವತಾರಿಕೆ—ಇಂತು ಆಚಾರ್ಯಂ ನೂತನಪುರಾತನರ ಕೀರ್ತನಾನಂತರದಲ್ಲಿ ಭಕ್ತಿಯ ಮಹತ್ತ್ವಮಂ ಪೇಳುತ್ತಿರ್ದಪಂ :—

ಏನೆನಲುಂಟು ಭಕ್ತಿಯ ಮಹಾತ್ಮತೆಯಂ ಶ್ರುತಿಶಾಸ್ತ್ರಪಙ್ತ್ತಿಯೋ |
ಗೇನಪರಾ ಎನುತ್ತಮಳಭಕ್ತಿಯ ವೈಭವಮಂ ಪೊಗಳ್ದು ಸ ||
ನ್ಮಾನಿಸಿತಾಗಿ ಯೋಗಪದದಿಂ ದುಪರಿಷ್ಠ ವೆನಿಪ್ಪ ಭಕ್ತಿಸೌ |
ಖ್ಯಾನುಭವೈಕನಿಷ್ಕಳಪದಕ್ಕೆಣೆ ಯಾವಪದಂ ಶಿವಾಧವಾ ||೭||

ಟೀಕೆ—ಶ್ರುತಿಶಾಸ್ತ್ರಪಙ್ತ್ತಿ-ಚತುರ್ವೇದ ಷಟ್ಛಾಸ್ತ್ರಂಗಳ ಸಮೂಹವು, ಯೋಗೇನಪರಾಎನುತ್ತೆ-ಸಾಯುಜ್ಯಮುಕ್ತಿಯಿಂದಂ ಭಕ್ತಿಯಧಿಕವೆಂದು "ಯೋಗೇನತುಪರಾಭಕ್ತಿರಿತಿಭಕ್ತೇಸ್ತುವೈಭವಂ" ಎಂದು, ಅಮಳಭಕ್ತಿಯ-ಅಕಳಂಕವಾದ ಭಕ್ತಿಯ, ವೈಭವಮಂ-ಪ್ರಭಾವವನ್ನು ಪೊಗಳ್ದು-ಕೊಂಡಾಡಿ, ಸನ್ಮಾನಿಸಿತಾಗಿ-ಬಹುಮಾನವಂ ಮಾಡಿತ್ತಾಗಿ, ಭಕ್ತಿಯ-ಶಿವಭಕ್ತಿಯ, ಮಹಾತ್ಮತೆಯಂ-ಪ್ರಭಾವವನ್ನು, ಏನೆನಲುಂಟು-ಏನೆಂದುಪೇಳಬಹುದು ! ಯೋಗಪದದಿಂದೆ-ಸಾಯುಜ್ಯಮುಕ್ತಿಗಿಂತಲೂ, ಉಪರಿಷ್ಠವೆನಿಪ್ಪ-ಅಧಿಕವೆನಿಸುವಂಥ, ಭಕ್ತಿಸೌಖ್ಯಾನುಭವೈಕನಿಷ್ಕಳಪದಕ್ಕೆ-ಭಕ್ತಿಯಸುಖವೊಂದನ್ನೇ ಅನುಭವಿಸತಕ್ಕ ನಿಷ್ಕಳಪದಕ್ಕೆ, ಆವ ಪದಂ-ಆವಸಾಲೋಕ್ಯಾದಿಪದಂಗಳು, ಎಣೆ-ಸರಿ ? ಸಮವಲ್ಲವೆಂಬುದರ್ಥವು ||೭||

ಟಿಪ್ಪಣಿ—ಸಾಯುಜ್ಯಮುಕ್ತಿಗಿಂತಲೂ ಭಕ್ತಿಯೇ ಉತ್ಕೃಷ್ಟವಾದುದೆಂದು ವೇದಗಳೂ ಶಾಸ್ತ್ರಗಳೂಸಹ ಹೇಳಿ, ಅದರ ಪ್ರಭಾವವನ್ನು ವರ್ಣಿಸಿರುವಾಗ, ಇನ್ನದರ ಮಹತ್ತ್ವವನ್ನು ಏನೆಂದು ಹೇಳಬೇಕು ? ಅಂತಪ್ಪ ಶ್ರೇಷ್ಠವಾದ ಭಕ್ತಿಯಿಂದ ಲಭಿಸುವ ಪರಮಾನಂದವನ್ನು ಅನುಭವಿಸುತ್ತಿರುವ ಪದವಿಗೆ ಸಮನಾದ ಪದವಿಯು ಮತ್ತಾವುದಿರುವುದು ? ||೭||

ಭಕ್ತಿ ಶಿವಪ್ರಸಾದಜನನೀಭವನಂ ಶಿವನ ಪ್ರಸಾದ ವಾ|
ಭಕ್ತಿಗೆ ಜನ್ಮಭೂಮಿ ವಿಮಲಾಂಕುರಬೀಜದವೋಲ್ ಪರಸ್ಪರಂ ||
ವ್ಯಕ್ತಮಿದಿಂತು ನೋಳ್ಪೊಡದು ತಾನೆ ನಿರಂತರಮಪ್ಪ ಮುಕ್ತಿ ಯಾ |
ಮುಕ್ತಿಯೆ ಶುದ್ಧನಿಷ್ಕಳನಿಜೈಕ್ಯ ಪದಂ ಪರಮಂ ಶಿವಾಧವಾ ||೮||

ಟೀಕೆ—ಭಕ್ತಿ-ಶಿವಭಕ್ತಿಯು, ಶಿವಪ್ರಸಾದಜನನೀಭವನಂ-ಶಿವಪ್ರಸನ್ನತೆಗೆ ತವರ್ಮನೆಯಾದುದು, ಶಿವನ-ಆ ಶಿವನ, ಪ್ರಸಾದಂ-ಪ್ರಸನ್ನತೆಯು, ಆ ಭಕ್ತಿಗೆ-

ಆಶಿವಭಕ್ತಿಗೆ, ಜನ್ಮಭೂಮಿ-ಜನನಸ್ಥಾನವಾದುದು, ವಿಮಲಾಂಕುರ ಬೀಜದ ವೋಲ್-ನಿರ್ಮಲವಾದ ಬೀಜಾಂಕುರನ್ಯಾಯದಂತೆ, ಪರಸ್ಪರಂ-ಅನ್ಯೋನ್ಯವಾಗಿ, ಇದು, ವ್ಯಕ್ತಂ-ಸ್ಫುಟವು, ಇಂತುನೋಳ್ಪೊಡೆ-"ಪ್ರಸಾದಾದ್ದೇವತಾಭಕ್ತಿಃ ಪ್ರಸಾದೊ ಭಕ್ತಿಸಂಭವಃ|| ಯಥೈವಾಂಕುರತೋಬೀಜಂ ಬೀಜತೋವಾಯಥಾಂಕುರಃ" ಇಂತೆಂಬ ವಾಕ್ಯಪ್ರಮಾಣದಿಂನೋಡಿದರೆ, ಅದುತಾನೆ-ಅಭಕ್ತಿತಾನೆ, ನಿರಂತರ ಮಪ್ಪ-ಎಡೆದೆರಹಿಲ್ಲದ, ಮುಕ್ತಿ-ಮುಕ್ತಿಯು, ಆ ಮುಕ್ತಿಯೆ-ಆಮೋಕ್ಷವೇ, ಪರಮಂ-ಉತ್ಕೃಷ್ಟವಾದ, ಶುದ್ಧ ನಿಷ್ಕಳನಿಜೈಕ್ಯಪದಂ, ಶುದ್ಧ-ನಿರ್ಮಲವಾದ, ನಿಷ್ಕಳ-ಕಳಾತೀತವಾದ, ನಿಜೈಕ್ಯಪದಂ-ಸ್ವಸ್ವರೂಪಸಾಕ್ಷಾತ್ಕಾರಪದವು ||೮||

ಟಿಪ್ಪಣಿ—ಶಿವಭಕ್ತಿಯಿಂದ ಶಿವಾನುಗ್ರಹವುಂಟಾಗುವುದು. ಆ ಶಿವಾನುಗ್ರಹದಿಂದ ಶಿವಭಕ್ತಿಯು ದೊರಕೊಳ್ಳುವುದು. ಎಂದಬಳಿಕ, ಭಕ್ತಿಗೂ ಶಿವಾನುಗ್ರಹಕ್ಕೂ ಪರಸ್ಪರವಾಗಿ ಬೀಜಾಂಕುರನ್ಯಾಯದಂತೆ ಸಂಬಂಧವಿರುವುದು. ಆದುದರಿಂದ ಆ ಭಕ್ತಿಯೆಂಬುದೇ ಅವಿಚ್ಛಿನ್ನವಾದ ಮುಕ್ತಿಯು. ಆ ಮುಕ್ತಿಯೆಂಬುದೇ ನಿರ್ಮಲವಾದ ಸ್ವಸ್ವರೂಪಸಾಕ್ಷಾತ್ಕಾರಪದವಿಯು.

ಅವತಾರಿಕೆ—ಇಂತು, ಶಿವಭಕ್ತಿ ವೈಭವಮಂ ವಿಸ್ತರಿಸಿ ಕರ್ಮಕಾಂಡ, ಜ್ಞಾನಕಾಂಡಕ್ಕಿಂದು ಪರಿಯಾದ ಘನಲಿಂಗಪದಸ್ಥರೇ ಶರಣರೆಂದು ಪೇಳುತ್ತಿರ್ದಪಂ—

ಸ್ಥೂಲ ಮಿದೀಗ ಸೂಕ್ಷ್ಮಮಿದು ತತ್ಪರಸಂಜ್ಞೆಯಿದೆಂದು ಪೇಳ್ವತ |
ತ್ತ್ವಾಳಿಯೊಳಾರಿಗಾವುದುಪಲಕ್ಷಣವೀಕ್ಷಣಸಾಧ್ಯ ಮೆಂತೆನಲ್ ||
ಸ್ಥೂಲಮ ನೀಕ್ಷಿಪರ್ ಸುರರು ಸೂಕ್ಷ್ಮವನೀಕ್ಷಿಪ ರಾತ್ಮಯೋಗಿಗ |
ಳ್ಮೇಲಣಲಿಂಗಮಂ ಶರಣರೀಕ್ಷಿಸುವರ್ ಸತತಂ ಶಿವಾಧವಾ ||೯||

ಟೀಕೆ—ಇದೀಗ, ಸ್ಥೂಲಂ-ಸಕಲ ತತ್ವವು, ಇದು, ಸೂಕ್ಷ್ಮಂ-ಸಕಳನಿಷ್ಕಳತತ್ವವು, ಇದು, ತತ್ಪರಸಂಜ್ಞೆ-ಕೇವಲ ನಿಷ್ಕಳತತ್ವವು, ಎಂದು, ಪೇಳ್ವ-ಹೇಳುವಂಥ, ತತ್ವಾವಳಿಯೊಳ್-ತತ್ವಸಮೂಹದಲ್ಲಿ, ಉಪಲಕ್ಷಣವೀಕ್ಷಣಸಾಧ್ಯಂ-ಸಮೀಪದೃಷ್ಟಿಯಿಂ ಸಾಧಿಸಲ್ತಕ್ಕುದು, ಆರಿಗೆ-ಆವಾತಂಗೆ, ಆವುದು-ಆವತತ್ವವು, ಎಂತೆನಲ್-ಹೇಗೆನಲು, ಸುರರು-ದೇವತೆಗಳು, ಸ್ಥೂಲಮಂ ಈಕ್ಷಿಪರ್-ಸಕಲ ತತ್ವಮಂ ಕಾಣ್ಬರು. ಆತ್ಮಯೋಗಿಗಳ್-ಯೋಗಿಗಳು, ಸೂಕ್ಷ್ಮವ-ಸಕಳನಿಷ್ಕಳತತ್ವವನ್ನು, ನೋಳ್ಪರು, ಸತತಂ-ಆವಾಗಲೂ, ಮೇಲಣಲಿಂಗಮಂ-ಸ್ಥೂಲಸೂಕ್ಷ್ಮಾತೀತವಾದ ನಿಷ್ಕಳಲಿಂಗವನ್ನು, ಶರಣರ್-ಷಟ್ಸ್ಥಲಜ್ಞಾನಿಗಳಾದ ಶರಣರು, ಈಕ್ಷಿಪರ್-ನೋಡುವರು. ಈ ಅರ್ಥದಲ್ಲಿ ವಾತುಳತಂತ್ರಬ್ರಹ್ಮನವಾಕ್ಯವು :—"ಅಸ್ಮದಾದ್ಯಮರೈರ್ದೃಶ್ಯಂಸ್ಥೂಲಂ ಸೂಕ್ಷ್ಮಂಚಯೋಗಿಭಿಃ | ತತಃಪರಂತುಯನ್ನಿತ್ಯಂ ಜ್ಞಾನಮಾನಂದಮವ್ಯಯಂ || ತನ್ನಿಷ್ಠೈಸ್ತತ್ಪರೈರ್ಭಕ್ತೈರ್ದೃಶ್ಯಂತದ್ವ್ರತಮಾಸ್ಥಿತೈಃ" ||

ಟಿಪ್ಪಣಿ—ತತ್ವಸಮೂಹದಲ್ಲಿ ಸಕಲತತ್ವ, ಸಕಲನಿಷ್ಕಲತತ್ವ, ನಿಷ್ಕಲತತ್ವವೆಂಬ ಮೂರು ವಿಧಗಳುಂಟು. ಅವುಗಳಲ್ಲಿ ಮೊದಲನೆಯ ಸಕಲತತ್ವವು ದೇವತೆಗಳಿಂದುಪಲಕ್ಷಿಸುವುದಕ್ಕೆ ಸಾಧ್ಯವಾದುದು; ೨ನೆಯ ಸಕಲನಿಷ್ಕಲತತ್ವವು ಶಿವಯೋಗಿಗಳ ನಿರೀಕ್ಷೆಗೆ ಸಾಧ್ಯವು; ೩ನೆಯದಾದ ನಿಷ್ಕಲ ಲಿಂಗವಾದರೊ ನಿಷ್ಕಲಭಕ್ತಿಪದಸ್ಥಿತರಾದ ಮತ್ತು ಷಟ್ಸ್ಥಲಜ್ಞಾನಸಂಪನ್ನರಾದ ಶರಣರ ನಿರೀಕ್ಷಣೆಗೆ ಮಾತ್ರ ಸಾಧ್ಯವು. ||೯||

ತಪದ ಜಿತೇಂದ್ರಿಯತ್ವದ ವಿರಾಗದ ಯೋಗದ ಮೌನದ ವ್ರತ |
ಪ್ರವರದ ನಿತ್ಯಕರ್ಮದ ಸಮಾಧಿಯ ಸಂಜೆಯ ಮಂತ್ರಮಾಲಿಕಾ ||
ಜಪದ ಶರೀರನಿಗ್ರಹದ ಹೋಮದ ನೇಮದ ತೀರ್ಥಯಾತ್ರೆಯಾ |
ಕ್ಷಪಿತಸಮಾಯಜಾಡ್ಯದೊಳಗಿಪ್ಪನೆ ಭಕ್ತಿಪರಂ ಶಿವಾಧವಾ ||೧೦||

ಟೀಕೆ—ತಪದ-ಕೃಛ್ರಚಾಂದ್ರಾಯಣಾದಿ ತಪಸ್ಸಿನ, ಜಿತೇಂದ್ರಿಯತ್ವದ-ಪಂಚೇಂದ್ರಿಯಂಗಳ ನಿಗ್ರಹಿಸುವುದರ, ವಿರಾಗದ-ವೈರಾಗ್ಯದ, ಯೋಗದ-ಕರ್ಮಯೋಗದ, ಮೌನದ-ವಾಙ್ನಿಯಮದ, ವ್ರತಪ್ರವರದ-ಭಿನ್ನವ್ರತಸಮೂಹಂಗಳ, ನಿತ್ಯಕರ್ಮದ-ಅಕರಣೆಪ್ರತ್ಯವಾಯರೂಪವಾದ ಕರ್ಮದ, (ಮಾಡದಿರ್ದೊಡೆದೋಷ, ಮಾಡಿದೊಡೆಫಲವಿಲ್ಲವೆಂಬುದರ್ಥ) ಸಮಾಧಿಯ-ಸವಿಕಲ್ಪಕ ನಿರ್ವಿಕಲ್ಪಕ ಸಮಾಧಿಗಳ, ಸಂಜೆಯ-ಸಂಧ್ಯಾವಂದನಕರ್ಮದ, ಮಂತ್ರಮಾಲಿಕಾಜಪದ-ಸಪ್ತಕೋಟಿಮಹಾಮಂತ್ರಜಪದ, ಶರೀರನಿಗ್ರಹದ-ಉಪವಾಸಾದಿವ್ರತಗಳ, ಹೋಮದ-ಯಜ್ಞಾದಿಕರ್ಮದ, ನೇಮದ-ಪ್ರಾಣಾಯಾಮಾದಿಗಳ, ತೀರ್ಥಯಾತ್ರೆಯ-ಪುಣ್ಯತೀರ್ಥಗಳಂ ಚರಿಸುವುದರ, ಅಕ್ಷಪಿತಸಮಾಯಜಾಡ್ಯದೊಳಗೆ, ಅಕ್ಷಪಿತ-ಎಂದೆಂದಿಗೂ ಕೆಡದಿರ್ದ, ಸಮಾಯ-ಮಾಯೆಯೊಡನೆ ಕೂಡಿದ, ಜಾಡ್ಯದೊಳಗೆ-ಜಡತ್ವದಲ್ಲಿ, ಭಕ್ತಿಪರಂ-ಶಿವಭಕ್ತಿತಾತ್ಪರ್ಯವುಳ್ಳ ಶರಣನು, ಇರ್ಪನೆ? ಇರನೆಂಬುದರ್ಥ ||೧೦||

ಟಿಪ್ಪಣಿ—ಅಂತಪ್ಪ ನಿಷ್ಕಲಲಿಂಗಭಕ್ತಿ ಸಂಪನ್ನನಾದ ಶರಣನು, ಕೃಛ್ರಚಾಂದ್ರಾಯಣಾದಿ ತಪಗಳನ್ನೂ, ಚಕ್ಷುರಾದೀಂದ್ರಿಯನಿಗ್ರಹವನ್ನೂ, ವಿಷಯ ವೈರಾಗ್ಯವನ್ನೂ, ಯಮನಿಯಮಾದ್ಯಷ್ಟಾಂಗಯೋಗವನ್ನೂ, ಮೌನವ್ರತವನ್ನೂ, ಇನ್ನೂ ಬೇರೆಬೇರೆ ವ್ರತಗಳನ್ನೂ, ಜೀವಾಂತವಾಗಿ ಆಚರಿಸಬೇಕೆಂದು ಪೂರ್ವಾಶ್ರಮದಲ್ಲಿ ಹಿಡಿದಿರುವ ಕರ್ಮಜಾಲವನ್ನೂ, ಸವಿಕಲ್ಪ ನಿರ್ವಿಕಲ್ಪ ಸಮಾಧಿಗಳನ್ನೂ, ಸಂಧ್ಯಾವಂದನ ಮಂತ್ರಜಪಗಳನ್ನೂ, ದೇಹದಂಡನವನ್ನೂ, ಅಗ್ನಿಹೋತ್ರವನ್ನೂ, ನಿಯಮವನ್ನೂ, ತೀರ್ಥಯಾತ್ರೆಯನ್ನೂ ಆಚರಿಸಬೇಕೆಂಬ ಭ್ರಾಂತಿಯಿಂದ ಕೂಡಿದ-ಅಳಿವಿಲ್ಲದ ಮೂಢತ್ವದಲ್ಲಿ ಸಿಲ್ಕಿಕೊಂಡಿರುವನೆ? ||೧೦||

ಕ್ಷಯಿಸದೆ ಸರ್ವಕಾಮಿತ ಸಮೃದ್ಧಿಸಮನ್ವಿತ ತತ್ತದೈಹಿಕಾ |
ಶ್ರಯಘನಸೌಖ್ಯಮಂ ಬಿಡದೆ ಭೋಗಿಸಿ ತತ್ವ ನಿಜಸ್ವರೂಪನಿ ||
ಶ್ಚಯಪದಮಂ ಶರೀರ ದವಸಾನದೊಳೊಂದಿ ಮಹಾಮಹೇಶ್ವರ |
ರ್ಬಯಸದೆ ಭೋಗಮೋಕ್ಷಪರ ರಪ್ಪುದು ಚಿತ್ರವಲಾ ಶಿವಾಧವಾ ||೧೧||

ಟೀಕೆ—ಮಹಾಮಹೇಶ್ವರರ್-ಮಹಾನುಭಾವರಪ್ಪ ವೀರಮಾಹೇಶ್ವರರು, ಸರ್ವಕಾಮಿತಸಮೃದ್ಧಿ-ಸಮಸ್ತವಾದ ಮನೋರಥಂಗಳ ಪೆರ್ಚುಗೆ, ಕ್ಷಯಿಸದೆ-ನಷ್ಟವಾಗದೆ, ಸಮನ್ವಿತ ತತ್ತದೈಹಿಕಾಶ್ರಯಘನಸೌಖ್ಯಮಂ-ಸಮನ್ವಿತ-ಕೂಡಿದಂಥ, ತತ್ತತ್-ಆಯಾ, ಐಹಿಕಾಶ್ರಯ-ಇಹಲೋಕವನ್ನಾಶ್ರಯಿಸಿದಂಥ, ಘನ-ದೊಡ್ಡದಾದ, ಸೌಖ್ಯಮಂ-ಸುಖವನ್ನು, ಬಿಡದೆ-ಎಡೆಬಿಡದೆ, ಭೋಗಿಸಿ-ಅನುಭವಿಸಿ, ಶರೀರದ ಅವಸಾನದೊಳ್-ದೇಹಾವಸಾನಕಾಲದಲ್ಲಿ, ಬಯಸದೆ-ಮೋಕ್ಷವಂಬಯಸದೆ, ತತ್ವನಿಜಸ್ವರೂಪನಿಶ್ಚಯಪದಮಂ-ತತ್ವ-ಶಿವತತ್ವದ, ನಿಜಸ್ವರೂಪ-ತನ್ನ-ಸಹಜಸ್ವರೂಪದ, ನಿಶ್ಚಯಪದಮಂ-ನಿಶ್ಚಯಭಾವವನ್ನು, ಒಂದಿ-ಕೂಡಿ, ಭೋಗಮೋಕ್ಷಪರರ್-ಭುಕ್ತಿಮುಕ್ತಿಗಳಲ್ಲಿ ತಾತ್ಪರ್ಯವುಳ್ಳವರು, ಅಪ್ಪುದು-ಆಗುವುದು, ಚಿತ್ರವಲಾ-ಆಶ್ಚರ್ಯವಲ್ಲವೆ? "ಸ್ವೇಚ್ಛಾವಿಗ್ರಹಿಣಸ್ಸರ್ವೇ ಸ್ವೇಚ್ಛಾಚಾರಾಗಣೇಶ್ವರಾಃ| ಶಿವೇನಸಹತೇಭೋಗಾನ್ಭುಕ್ತ್ವಾಯಾಂತಿ ಶಿವಂಪದಂ" ಎಂದಾದಿತ್ಯಪುರಾಣವುಂಟಾಗಿ, ಸಿದ್ಧಾಂತಿಗಳು ಇಂದ್ರಿಯ ವಿಕೃತಿಕರವೆಂದು ಸರ್ವಭೋಗಮಂ ಬಿಟ್ಟು, ಶರೀರಾವಸಾನದಲ್ಲಿ ಮೋಕ್ಷವಂ ಬಯಸುವರು. ಶರಣರು ಲಿಂಗಪ್ರಸಾದಭೋಗಿಗಳಾದಕಾರಣ ಇಹಲೋಕದ ಸುಖಂಗಳಂ ಬಿಡದೆ, ತಾವು ಜೀವನ್ಮುಕ್ತರಾದಕಾರಣ ಶರೀರಾವಸಾನಕಾಲದಲ್ಲಿ ಮೋಕ್ಷವಂ ಬಯಸದೆ ನಿತ್ಯರಾಗಿರ್ಪರೆಂಬುದಭಿಪ್ರಾಯಂ. ||೧೧||

ಟಿಪ್ಪಣಿ—ಮಹಾವೀರಮಾಹೇಶ್ವರರು, ಇತರರಂತೆ ದೇಹಾಂತದಲ್ಲಿ ಮೋಕ್ಷವನ್ನೈದಬೇಕೆಂಬಪೇಕ್ಷೆಯಿಂದ ಐಹಿಕಭೋಗಗಳಲ್ಲಿ ವೈರಾಗ್ಯವನ್ನೊಂದಿರದೆ, ಯಾವುದೊಂದು ಮನೋರಥವನ್ನೂ ತಡೆಗಟ್ಟದೆ, ಆಯಾ ಇಂದ್ರಿಯಮುಖದಿಂದ ಬರುವ ಐಹಿಕಸುಖವನ್ನೆಲ್ಲಾ ಶಿವಪ್ರಸಾದಬುದ್ಧಿಯಿಂದನುಭವಿಸುತ್ತ, ಜೀವನ್ಮುಕ್ತರಾಗಿದ್ದುಕೊಂಡು, ತಾನಾಗಿ ಪ್ರಾಪ್ತವಾಗುವ ನಿತ್ಯ ಪದವಿಯನ್ನು ಹೊಂದುವರು. ||೧೧||

ಅವತಾರಿಕೆ—ಇಂತಪ್ಪ ಶರಣರಾಚರಿಸುವ ಷಟ್ಸ್ಥಲ ಕ್ರಮಮಂ ಪೇಳುತಿರ್ದಪಂ—

ಪ್ರಾಣಮುಮಂ ಶರೀರಮುಮ ನರ್ಥಮುಮಂ ಗುರುಲಿಂಗಜಂಗಮ |
ಶ್ರೇಣಿಗೆ ಕೊಟ್ಟು ತನ್ಮುಖಸಮಾಗತಶಾಂತಿಕರ ಪ್ರಸಾದಕ ||
ಲ್ಯಾಣಸುಖಪ್ರಪೂರ್ಣಪರಿಣಾಮವ ನೈದಿದವರ್ಗ್ಗೆ ನಿತ್ಯನಿ |
ರ್ವಾಣಪದಂ ಬಳಿಕ್ಕುಳಿದವರ್ಗ್ಗೆ ಪರಿಭ್ರಮಣಂ ಶಿವಾಧವಾ ||೧೨||

ಟೀಕೆ—ಗುರುಲಿಂಗಜಂಗಮಶ್ರೇಣಿಗೆ-ಗುರುಲಿಂಗಜಂಗಮ ಸಮೂಹಕ್ಕೆ, ಪ್ರಾಣಮುಮಂ ಶರೀರಮುಮಂ ಅರ್ಥಮುಮಂ-ಪ್ರಾಣಶರೀರಾರ್ಥಂಗಳನ್ನು, ಕೊಟ್ಟು-ಸಮರ್ಪಿಸಿ, ತನ್ಮುಖಸಮಾಗತಶಾಂತಿಕರ ಪ್ರಸಾದ ಕಲ್ಯಾಣಸುಖಪ್ರಪೂ

ರ್ಣಪರಿಣಾಮವಂ-ತನ್ಮುಖ-ಆಗುರುಲಿಂಗಜಂಗಮದ ಮುಖದತ್ತಣಿಂ, ಸಮಾಗತ-ಬಂದ, ಶಾಂತಿಕರ-ಸಂಸಾರತಾಪವನಡಂಗಿಸುವ, ಪ್ರಸಾದ-ತ್ರಿವಿಧ ಪ್ರಸಾದದ, ಕಲ್ಯಾಣ-ಮಂಗಲಸ್ವರೂಪವಾದ, ಸುಖ-ಆನಂದದಿಂದ, ಪ್ರಪೂರ್ಣ-ತುಂಬಿಪ್ಪಟ್ಟ, ಪರಿಣಾಮವಂ-ತೃಪ್ತಿಯನ್ನು, ಐದಿದವರ್ಗ್ಗೆ-ಪಡೆದವರ್ಗ್ಗೆ, ನಿತ್ಯನಿರ್ವಾಣಪದಂ-ಕೇಡಿಲ್ಲದ ಮೋಕ್ಷಪದವು, ಉಳಿದವರ್ಗ್ಗೆ-ಆ ಸಿದ್ಧಾಂತಿಗಳ್ಗೆ, ಪರಿಭ್ರಮಣಂ-ಸಂಸಾರಚಕ್ರದಲ್ಲಿ ತಿರುಗುವುದು ತಪ್ಪದು. ||೧೨||

ಟಿಪ್ಪಣಿ—ಗುರುವಿಗೆ ಶರೀರವನ್ನೂ, ಲಿಂಗಕ್ಕೆ ಪ್ರಾಣವನ್ನೂ, ಜಂಗಮಕ್ಕೆ ಧನವನ್ನೂ ಸಮರ್ಪಿಸಿ, ಆತ್ರಿವಿಧ ಮೂರ್ತಿಗಳಿಂದ ಲಭ್ಯವಾದ, ಜನನಮರಣ ತಾಪವನ್ನು ಹೋಗಲಾಡಿಸುವ, ಶುದ್ಧಸಿದ್ಧಪ್ರಸಿದ್ಧ ಪ್ರಸಾದಗಳನ್ನು ಅನುಭವಿಸುವ ಸೌಖ್ಯದಿಂದ ತುಂಬಿ ಪರಿತೃಪ್ತರಾದ ಶರಣರಿಗೆ ಅಳಿವಿಲ್ಲದ ಮುಕ್ತಿಯು ಲಭಿಸುವುದು. ಇತರರಿಗೆ ಜನನ ಮರಣಗಳ ರಾಟೆಯಲ್ಲಿ ಸುತ್ತುವಿಕೆಯು ತಪ್ಪುವುದಿಲ್ಲ. ||೧೨||

ಕಿಂಕರಭಾವಮಂ ಬಲಿದು ಲಿಂಗಮುಖಂ ಚರಲಿಂಗವೆಂದು ನಿ |
ಶ್ಯಂಕತೆಯಿಂ ಸುವರ್ಣವಸನಾನ್ನ ಪುರಸ್ಸರವಸ್ತುವಾಹನಾ ||
ಲಂಕರಣಂಗಳಂ ಸಲೆ ಸಮರ್ಪಿಸಿ ವೀರಶಿವಾಗಮೋಕ್ತಚಿ |
ಹ್ನಾಂಕಿತರಾದವರ್ಗ್ಗೆ ಮಣಿವಂತುಟೆ ಭಕ್ತಿಪದಂ ಶಿವಾಧವಾ ||೧೩||

ಟೀಕೆ—ಕಿಂಕರಭಾವಮಂ-ದಾಸೋಹಂಭಾವವನು, ಬಲಿದು-ದೃಢೀಕರಿಸಿ, ಚರಲಿಂಗವು-ಜಂಗಮವು, ಲಿಂಗಮುಖಂ-ಲಿಂಗಕ್ಕೆಮುಖವು ಎಂದು, ನಿಶ್ಯಂಕತೆಯಿಂ-ನಿಸ್ಸಂಶಯದಿಂದ, ಸುವರ್ಣವಸನಾನ್ನಪುರಸ್ಸರವಸ್ತುವಾಹನಾಲಂಕರಣಂಗಳಂ-ಸುವರ್ಣ-ಚಿನ್ನವನ್ನು, ವಸನ-ವಸ್ತ್ರವನ್ನು, ಅನ್ನ-ಭೋಜ್ಯವಸ್ತುವನ್ನು, ಪುರಸ್ಸರ, ಇದು ಮೊದಲಾದ, ವಸ್ತು-ಸುಗಂಧಾದಿ ವಸ್ತುಗಳನ್ನು, ವಾಹನ-ಕರಿತುರಗಾಂದೋಳಿಕಾದಿಗಳನ್ನು, ಅಲಂಕರಣಂಗಳಂ-ಆಭರಣಂಗಳನ್ನು ಸಲೆ-ಚೆನ್ನಾಗಿ ಸಮರ್ಪಿಸಿ-ಕೊಟ್ಟು, ವೀರಶಿವಾಗಮೋಕ್ತ ಚಿಹ್ನಾಂಕಿತರಾದವರ್ಗ್ಗೆ-ವೀರಶೈವಾಗಮೋಕ್ತಲಕ್ಷಣಲಕ್ಷಿತರಾದವರ್ಗೆ, ಮಣಿವಂತುಟೆ-ನಮಸ್ಕರಿಸುವುದೇ, ಭಕ್ತಿಪದಂ-ಭಕ್ತಿಮಾರ್ಗವು. ||೧೩||

ಟಿಪ್ಪಣಿ—ಜಂಗಮವೇ ಲಿಂಗಕ್ಕೆ ಮುಖವೆಂದು ನಿಸ್ಸಂಶಯವಾಗಿ ತಿಳಿದು, ಅವರಲ್ಲಿ ಕಿಂಕರತ್ವವನ್ನು ಹೊಂದಿ, ಧನಕನಕವಸ್ತುವಾಹನಾದಿಗಳನ್ನು ಅವರಿಗೆ ಸಮರ್ಪಿಸಿ, ವೀರಶೈವಾಗಮೋಕ್ತವಾದ ಲಕ್ಷಣಗಳಿಂದ ಕೂಡಿದ ಶರಣರನ್ನು ಕಂಡಕೂಡಲೇ ನಮಸ್ಕರಿಸುವುದೇ ಭಕ್ತಿಮಾರ್ಗವು. ಎಂದು ಇವೆರಡು ಪದ್ಯಗಳಲ್ಲಿ ಭಕ್ತಸ್ಥಲದ ಮುಖ್ಯಲಕ್ಷಣವನ್ನು ಹೇಳಿ, ಮುಂದೆ ಮಾಹೇಶ್ವರಸ್ಥಲ ಲಕ್ಷಣವನ್ನು ಹೇಳುವರು. ||೧೩||

ಪರವಧುವಂ ಪರದ್ರವಿಣಮಂ ಪರಹಿಂಸೆಯ ನೈದೆ ದೂರದಿಂ |
ಪರಿಹರಿಸಿ ಸ್ವದೇಶಿಕನಿರೂಪಿತಮಪ್ಪ ಷಡರ್ಥಸಂಗ್ರಹಾ ||
ಚರಣೆಯೊಳೇಕಲಿಂಗನಿಜನಿಷ್ಠೆ ಸಮಾಹಿತ ಮಾಡೊ ಡಂತದೇ |
ಪರಮಮಹೇಶ್ವರಸ್ಥಲದ ಲಕ್ಷಣವೃತ್ತಿಪದಂ ಶಿವಾಧವಾ ||೧೪||

ಟೀಕೆ—ಪರವಧುವಂ-ಪರಸ್ತ್ರೀಯನ್ನು, ಪರದ್ರವಿಣಮಂ-ಪರಧನವನ್ನು, ಪರಹಿಂಸೆಯಂ-ಪರರಪೀಡಿಸುವುದನ್ನು, ಐದೆ-ಚೆನ್ನಾಗಿ, ದೂರದಿಂ ಪರಿಹರಿಸಿ-ದೂರದಲ್ಲಿ ಬಿಟ್ಟು, ಸ್ವದೇಶಿಕನಿರೂಪಿತಮಪ್ಪ-ತನ್ನಾಚಾರ್ಯನಿಂ ನಿರೂಪಿಸಲ್ಪಟ್ಟ, ಷಡರ್ಥಸಂಗ್ರಹಾಚರಣೆಯೊಳ್-ಜ್ಞಾನ ಜ್ಞೇಯ ಅನುಷ್ಠೇಯ ಅಧಿಕಾರ, ಸಾಧನ, ಸಾಧ್ಯಂಗಳೆಂಬ ಷಡರ್ಥಸಂಗ್ರಹಾಚರಣೆಯಲ್ಲಿ, (ಈಯರ್ಥದಲ್ಲಿ ವಾಯುತಂತ್ರವುಂಟು— "ಜ್ಞಾನಂಜ್ಞೇಯಮನುಷ್ಠೇಯಮಧಿಕಾರೋಽರ್ಥಸಾಧನಂ | ಸಾಧ್ಯಂಚೇತಿಷಡರ್ಥಾನಾಂ ಸಂಗ್ರಹಸ್ತ್ವೇಷಸಂಗ್ರಹಃ || ಗುರೋರಧಿಗತಂಜ್ಞಾನಂ,ಜ್ಞೇಯಂಪಾಶಃ ಪಶುಃಪತಿಃ | ಲಿಂಗಾರ್ಚನಾದ್ಯನುಷ್ಠೇಯಂ,ಭಸ್ಮಾದ್ಯಧಿಕೃತಂದ್ವಿಜ | ಸಾಧನಂ ಶಿವಮಂತ್ರಾದ್ಯಂ,ಸಾಧ್ಯಂಶಿವಸಮಾನತಾ | ಷಡರ್ಥಸಂಗ್ರಹಸ್ಯಾರ್ಥಜ್ಞಾನಾತ್ಸರ್ವಜ್ಞತೋಚ್ಯತೇ" ಇಂತೆಂದುದಾಗಿ, ಏಕಲಿಂಗನಿಜನಿಷ್ಠೆ-ಏಕಲಿಂಗ-ಒಂದೇಲಿಂಗದಲ್ಲಿ, ನಿಜನಿಷ್ಠೆ-ತನ್ನ ನಿಷ್ಠೆಯು, ಸಮಾಹಿತಮಾದೊಡೆ-ಕೂಡಿದೊಡೆ, ಅಂತದೇ-ಅದು ತಾನೇ, ಪರಮಮಹೇಶ್ವರ ಸ್ಥಲದ-ಪರಮ-ಉತ್ಕೃಷ್ಟವಾದ, ಮಹೇಶ್ವರ ಸ್ಥಲದ-ಮಾಹೇಶ್ವರ ಸ್ಥಲದ, ಲಕ್ಷಣವೃತ್ತಿಪದಂ-ಲಕ್ಷಣ-ಸ್ವರೂಪದ; ವೃತ್ತಿಪದಂ-ಪ್ರವರ್ತಿಸುವಮಾರ್ಗವು. ||೧೪||

ಟಿಪ್ಪಣಿ—ಪರಸ್ತ್ರೀ ಪರದ್ರವ್ಯ ಪರಹಿಂಸೆ ಯೆಂಬಿವುಗಳನ್ನು ದೂರದಲ್ಲೇ ಬಿಟ್ಟು, ತನ್ನ ಗುರು ಉಪದೇಶಿಸಿರುವ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯವೆಂಬ ಷಟ್ಪ್ರಯೋಜನವನ್ನು ಗಳಿಸುವುದರಲ್ಲಿ ಆಸಕ್ತಿಯೊಂದಿ, ಗುರುದತ್ತವಾದ ಇಷ್ಟಲಿಂಗದಲ್ಲಲ್ಲದೆ ಅನ್ಯತ್ರ ನಿಷ್ಠೆಯನ್ನು ತೊರೆದು ವರ್ತಿಸುತ್ತಿರುವುದೇ ಮಾಹೇಶ್ವರಸ್ಥಲದ ಮಾರ್ಗವು. (ಇಲ್ಲಿ ಜ್ಞಾನವೆಂದರೆ-ಗುರೂಪದಿಷ್ಟವಾದ ಶಿವಜ್ಞಾನ, ಜ್ಞೇಯ-ಪಶುಪಾಶಪತಿಯೆಂಬ ತ್ರಿಪದಾರ್ಥಗಳು, ಅನುಷ್ಠೇಯ-ಲಿಂಗಪೂಜಾದಿಗಳು, ಅಧಿಕಾರ-ಭಸ್ಮರುದ್ರಾಕ್ಷಾದಿ ದೀಕ್ಷಾಸಂಪನ್ನತೆ, ಸಾಧನ-ಶಿವಮಂತ್ರಜಪಾದಿಗಳು, ಸಾಧ್ಯ, ಶಿವಸಮಾನತಾರೂಪಮುಕ್ತಿ). ||೧೪||

ಲಿಂಗಮುಖಾರ್ಪಣೀಯಮಪ ಸರ್ವವಿಶುದ್ಧಪದಾರ್ಥ ಜಾತಮಂ |
ಸ್ವಾಂಗವಚೋಮನಃಕರಣ ಕಾಯಕವಾಚಿಕಮಾನಸಕ್ರಿಯಾ ||
ಸಂಗತಸಾವಧಾನಸುವಿವೇಕದಿ ನರ್ಪಿಸಿ ತತ್ಪ್ರಸಾದಮಂ |
ಪಿಂಗದೆ ಭೋಗಿಪಲ್ಲಿ ಬಳಿಕಾಸ್ಥಲಸಿದ್ಧಿ ದಿಟಂ ಶಿವಾಧವಾ ||೧೫||

ಟೀಕೆ—ಲಿಂಗಮುಖಾರ್ಪಣೀಯವಹ-ಇಷ್ಟಪ್ರಾಣಭಾವವೆಂಬ ತ್ರಿವಿಧಲಿಂಗಮುಖಕ್ಕೆ ಸಮರ್ಪಿಸಲ್ತಕ್ಕ, ಸರ್ವವಿಶುದ್ಧ ಪದಾರ್ಥಜಾತಮಂ-ಸಮಸ್ತವಾದ ನಿರ್ಮಲಪದಾರ್ಥ ಸಮೂಹವನ್ನು, ಸ್ವಾಂಗವಚೋಮನಃಕರಣಕಾಯಕವಾಚಿಕ ಮಾನಸಕ್ರಿಯಾಸಂಗತಸಾವಧಾನಸುವಿವೇಕದಿಂ-ಸ್ವ-ತನ್ನ ಸಂಬಂಧವಾದ, ಅಂಗವಚೋಮನಃಕರಣ-ತನುವಾಙ್ಮನಸ್ಸುಗಳೆಂಬ ತ್ರಿಕರಣಗಳಲ್ಲಿಯೂ, ಕಾಯಕವಾಚಿಕಮಾನಸಕ್ರಿಯಾ-ಕಾಯಕವ್ಯಾಪಾರ ವಾಚಿಕವ್ಯಾಪಾರ ಮಾನಸವ್ಯಾಪಾರಂಗಳೊಡನೆ, ಸಂಗತ-ಕೂಡಿದಂಥ, ಸಾವಧಾನ-ಎಚ್ಚರದೊಡನೆ ಕೂಡಿದ, ಸುವಿವೇಕದಿಂ-ಶೋಭನವಾದ ಮತಿಯಿಂದ, ಅರ್ಪಿಸಿ-ತ್ರಿವಿಧಲಿಂಗಕ್ಕರ್ಪಿಸಿ, ತತ್ಪ್ರಸಾದಮಂ-ಆ ತ್ರಿವಿಧಲಿಂಗಪ್ರಸಾದವನು, ಪಿಂಗದೆ-ತೊಲಗದೆ, ಭೋಗಿಪಲ್ಲಿ-ಅನುಭವಿಸುವಲ್ಲಿ, ಬಳಿಕ-ಆಮೇಲೆ, ಆಸ್ಥಲಸಿದ್ಧಿ-ಆಪ್ರಸಾದಸ್ಥಲ ಸಿದ್ಧಿಯಪ್ಪುದು, ದಿಟಂ-ನಿಶ್ಚಯವು. ||೧೫||

ಇನ್ನು ಪ್ರಸಾದಿಸ್ಥಲವನ್ನು ನಿರೂಪಿಸುವರು :—

ಟಿಪ್ಪಣಿ—ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳಿಗೆ ಸಮರ್ಪಿಸುವುದಕ್ಕೆ ಯೋಗ್ಯವಾದ ರೂಪ ರುಚಿ ತೃಪ್ತಿಗಳೆಂಬ ನಿರ್ಮಲಪದಾರ್ಥಗಳನ್ನು ತ್ರಿಕರಣಪೂರ್ವಕವಾಗಿ ಅರ್ಪಣಾನುಸಂಧಾನ ಕ್ರಮವನ್ನರಿತು ಎಚ್ಚರಿಕೆಯಿಂದ ಆ ಲಿಂಗಗಳಿಗೆ ಸಮರ್ಪಿಸಿ, ಅವುಗಳ ತ್ರಿವಿಧಪ್ರಸಾದವನ್ನು ತಪ್ಪದೆ ಸೇವಿಸುತ್ತಿರುವುದೇ ಪ್ರಸಾದಿಸ್ಥಲಮಾರ್ಗವರ್ತನವು. ||೧೫||

ಆಣವಮಾಯಕಾರ್ಮಿಕಮಲತ್ರಯಸಂಗತಿದೂರಮಾಗಿ ನಿ |
ರ್ವಾಣಪದೈಕಹೇತುವಹ ಸದ್ಗುರುನಾಥ ನಿಜೋಪದೇಶದಿಂ ||
ಪ್ರಾಣದಲಿಂಗದ ಸ್ಥಿತಿ ಸಮಂಜಸಮಾಗಿ ಸುಸಾಧ್ಯ ಮಾದೊಡಾ |
ಪ್ರಾಣವೆಲಿಂಗಮಾದ ಪರಮಸ್ಥಳಸಿದ್ಧಿಕಣಾ ಶಿವಾಧವಾ ||೧೬||

ಟೀಕೆ—ನಿರ್ವಾಣಪದೈಕಹೇತುವಹ-ನಿರ್ವಾಣಪದ-ಮೋಕ್ಷಪದಕ್ಕೆ, ಏಕ ಮುಖ್ಯವಾಗಿ, ಹೇತುವಹ-ಕಾರಣಮಪ್ಪ-ಸದ್ಗುರುನಾಥನಿಜೋಪದೇಶದಿಂ-ಸದ್ಗುರುನಾಥ-ಶ್ರೀಗುರುಸ್ವಾಮಿಯ, ನಿಜೋಪದೇಶದಿಂ-ಸಹಜವಾದ ದೀಕ್ಷಾತ್ರಯೋಪದೇಶದಿಂದ, ಆಣವಮಾಯಕಾರ್ಮಿಕಮಲತ್ರಯಸಂಗತಿ-ಆಣವ-ಗರ್ಭಸಂಬಂಧವಾದ ಅಣುರೂಪವಾದ ಮಲವು, ಮಾಯ-ಜಾತಿಸಂಬಂಧವಾದ ಮೋಹವೆಂಬ ಮಲವು, (ಮಾಯಾಯಾಸ್ಸಂಬಂಧಿ-ಮಾಯಂ, " ತಸ್ಯೇದಂ " ಎಂಬ ಸೂತ್ರದಿಂ ಸಂಬಂದಾರ್ಥದಲ್ಲಿ ಅಣ್ಪ್ರತ್ಯಯಮಂ ಮಾಳ್ಪುದು.) ಕಾರ್ಮಿಕಮಲ-ದ್ರವ್ಯಸಂಬಂಧಮಾದ ಈಷಣತ್ರಯದೊಡನೆ ಕೂಡಿದ ಮಲವು, ತ್ರಯ-ಈಮೂರರ, ಸಂಗತಿ-ಸಂಪರ್ಕವು, ದೂರಮಾಗಿ-ಬಿಡುಗಡೆಯಾಗಿ, ಪ್ರಾಣದ ಲಿಂಗದ ಸ್ಥಿತಿ-ಪ್ರಾಣಲಿಂ

ಗಂಗಳೆರಡರ ಸ್ಥಿತಿಯು, ಸಮಂಜಸಮಾಗಿ-ಸರಸವಾಗಿ, ಸುಸಾಧ್ಯಮಾದೊಡೆ-ಲೇಸಾಗಿ ಸಾಧ್ಯಮಾದರೆ, ಆಪ್ರಾಣವೇ-ಆಪ್ರಾಣತಾನೇ, ಲಿಂಗವಾದ-ಲಿಂಗಸ್ವರೂಪವಾದ, ಪರಮ-ಉತ್ಕೃಷ್ಟವಾದ, ಸ್ಥಳ-ಸ್ಥಳದ, ಸಿದ್ಧಿಕಣಾ-ನಿಶ್ಚಯವಲಾ, ("ಪ್ರಾಣೇಷ್ವಂತರ್ಮನಸೋಲಿಂಗಮಾಹುಃ") ಎಂದು ಬೃಹದಾರಣ್ಯಕಮುಂಟು ||

ಇನ್ನು ಪ್ರಾಣಲಿಂಗಿಸ್ಥಲನಿರೂಪಣವು :—

ಟಿಪ್ಪಣಿ—ಶ್ರೀಗುರುನಾಥನು ಮಾಡಿದ, ಮುಕ್ತಿಗೆ ಮುಖ್ಯಕಾರಣವಾದ, ವೇಧಾ ಮನು ಕ್ರಿಯೆಯೆಂಬ ದೀಕ್ಷಾತ್ರಯದಿಂದ ಆಣವಮಾಯಾಕಾರ್ಮಿಕಗಳೆಂಬ ಮಲತ್ರಯವು ಅಳಿದುಹೋಗಿ, ಪ್ರಾಣವೂ ಲಿಂಗವೂ ಎರಡೂ ಒಂದಾಗಿ ಸಮನಿಸಿದ್ದರೆ, ಅದೇ ಉತ್ಕೃಷ್ಟವಾದ ಪ್ರಾಣಲಿಂಗಿಸ್ಥಲದ ಸಿದ್ಧಿಯು. ||೧೬||

ಪಂಚವಿಧೇಂದ್ರಿಯಪ್ರಕೃತಿಸಂಗಸುಖಂ ತನಗೆಂಬ ಬುದ್ಧಿಯಂ |
ವಂಚಿಸಿ ಲಿಂಗವೇ ಪತಿ ತದೀಯಮಹಾಸತಿ ತಾ ನೆನಿಪ್ಪ ನಿ ||
ರ್ವಂಚಕಭಾವಮಂ ಬಲಿದು ಚಿತ್ಪರಿಣಾಮಪರಾನುಭೂತಿಯಿಂ |
ದಂಚರಿಸಲ್ವಿಶಿಷ್ಟಶರಣಸ್ಥಲಸಿದ್ಧಿಕಣಾ ಶಿವಾಧವಾ ||೧೭||

ಟೀಕೆ—ಪಂಚವಿಧೇಂದ್ರಿಯಪ್ರಕೃತಿಸಂಗಸುಖಂ-ಪಂಚವಿಧ-ಐದುತೆರನಾದ ಇಂದ್ರಿಯ-ಇಂದ್ರಿಯಗಳ, ಪ್ರಕೃತಿ-ಸ್ವಭಾವದ, ಸಂಗ-ಸಂಪರ್ಕದಿಂದಾದ, ಸುಖಂ-ಆನಂದವು, ತನಗೆ, ಎಂಬ-ಹೀಗೆಂಬ, ಬುದ್ಧಿಯಂ-ಭಾವನೆಯನ್ನು, ವಂಚಿಸಿ-ವಿಸರ್ಜಿಸಿ, ಲಿಂಗವೇ ಪತಿ-ಪುರುಷನು, ತಾಂ-ತಾನು, ತದೀಯಮಹಾಸತಿ-ಆ ಲಿಂಗ ಸಂಬಂಧವಾದ ಅಧಿಕವಾದ ಸತಿಯು, ಎನಿಪ್ಪ-ಎಂದೆನಿಸುವ, ನಿರ್ವಂಚಕಭಾವಮಂ-ನಿಸ್ಸಂದೇಹಭಾವವನು, ಬಲಿದು-ದೃಢೀಕರಿಸಿ, ಚಿತ್ಪರಿಣಾಮಪರಾನುಭೂತಿಯಿಂದಂ-ಚಿತ್ಪರಿಣಾಮ-ಚಿಚ್ಛಕ್ತಿವಿಕಾರಮಪ್ಪ, ಪರಾನುಭೂತಿಯಿಂದಂ-ಉತ್ಕೃಷ್ಟವಾದ ಜ್ಞಾನದಿಂದ, ಚರಿಸಲ್-ಆಚರಿಸಲಾಗಿ, ವಿಶಿಷ್ಟಶರಣಸ್ಥಲಸಿದ್ಧಿಕಣಾ-ಮಿಗೆ ಶ್ರೇಷ್ಠವಾದ ಶರಣಸ್ಥಲದ ನಿಶ್ಚಯವಲಾ. ||೧೭||

ಶರಣಸ್ಥಲನಿರೂಪಣವು :—

ಟಿಪ್ಪಣಿ—ಶ್ರೋತ್ರಾದಿ ಪಂಚೇಂದ್ರಿಯಂಗಳ ಮುಖದಿಂದ ಸ್ವಭಾವಸಿದ್ಧವಾಗಿ ಹುಟ್ಟುವ ಶಬ್ದಾದಿ ವಿಷಯ ಸೌಖ್ಯವು ತನಗೆಂಬ ಭಾವನೆಯನ್ನು ಬಿಟ್ಟು, ತಾನು ಸತಿ ಲಿಂಗವೇ ಪತಿಯೆಂಬ ನಿರ್ಮಲವಾದ ಭಾವನೆಯನ್ನು ಹೊಂದಿ, ಸಕಲ ಜಗತ್ತೂ ಚಿಚ್ಛಕ್ತಿವಿಕಾರವಾದುದೆಂಬ ಉತ್ಕೃಷ್ಟವಾದ ಅನುಭವದಿಂದ ಕೂಡಿರುವುದೇ ಶರಣಸ್ಥಲವರ್ತನವು. ||೧೭||

ಶನಗವಸಾನಭೂಮಿ ಶಿವಲಿಂಗ ಮದಕ್ಕವಸಾನಭೂಮಿ ತಾ |
ನೆನಿಸಿ ಬಹಿಃಪ್ರಪಂಚರಚನಾಕ್ರಿಯೆಯಂ ನೆರೆ ಬಿಟ್ಟು ಚಿತ್ಪರಾ ||

ಣ್ವನುಭವದಿಂ ದಹಂತ್ವಮಿತಿ ಶಬ್ದವಿಭೇದ ಮಡಂಗಿ ತೋರ್ಪೊಡಾ |
ತನೆ ಪರಮೈಕ್ಯನಿಷ್ಕಳಮಹಾಸ್ಥಲಯುಕ್ತಿಯಿದಂ ಶಿವಾಧವಾ ||೧೮||

ಟೀಕೆ—ತನಗೆ-ಶರಣನೆನಿಸುವ ತನಗೆ, ಅವಸಾನಭೂಮಿ-ನಿಲುಕಡೆಯ ಸ್ಥಾನವು, ಶಿವಲಿಂಗಂ-ಶಿವಲಿಂಗವು, ಅದಕ್ಕೆ-ಆ ಶಿವಲಿಂಗಕ್ಕೆ, ಅವಸಾನಭೂಮಿ-ನಿಲುಕಡೆಯ ಸ್ಥಾನವು ತಾಂ, ಎನಿಸಿ-ಶರಣತಾನೇ ಯೆನಿಸಿ, ಬಹಿಃಪ್ರಪಂಚರಚನಾಕ್ರಿಯೆಯುಂ-ಬಾಹ್ಯಪ್ರಪಂಚವ ನಿರ್ಮಿಸುವ ವ್ಯಾಪಾರವನು, ನೆರೆಬಿಟ್ಟು-ನಿರ್ವಾಸನೆಯಪ್ಪಂತೆ ಬಿಟ್ಟು, ಚಿತ್ಪರಾಣ್ವನುಭವದಿಂದೆ, ಚಿತ್-ಜ್ಞಾನದಿಂ, ಪರ-ಉತ್ಕೃಷ್ಟವಾದ, ಅಣು-ಸೂಕ್ಷ್ಮವಾದ, ಅನುಭವದಿಂದೆ-ಸ್ವರೂಪಸಾಕ್ಷಾತ್ಕಾರದಿಂದ, ಅಹಂತ್ವಮಿತಿ-ನಾನು ನೀನೆಂಬ, ಶಬ್ದವಿಭೇದಂ-ಶಬ್ದಭೇದವು, ಅಡಂಗಿ-ಲೀನವಾಗಿ, ತೋರ್ಪೊಡೆ-ಕಾಣಿಸಿದೊಡೆ, ಆತನೆ-ಅವನುತಾನೇ, ಪರಮೈಕ್ಯ ನಿಷ್ಕಳಮಹಾಸ್ಥಲಯುಕ್ತಿಯಿದಂ-ಪರಮ-ಉತ್ಕೃಷ್ಟವಾದ ಮಹಾಲಿಂಗದಲ್ಲಿ, ಐಕ್ಯ-ಭೇದವಿಲ್ಲದ, ನಿಷ್ಕಳ-ಕಲಾರಹಿತವಾದ, ಮಹಾಸ್ಥಲ-ಅಧಿಕವಾದ ಸ್ಥಳದ, ಯುಕ್ತಿಯಿದಂ-ಸಂಬಂಧವನು ಒಲ್ಲಾತನು. ||೧೮||

ಐಕ್ಯಸ್ಥಲನಿರೂಪಣವು :—

ಟಿಪ್ಪಣಿ—ತನಗೆ ಶಿವಲಿಂಗವೂ ಶಿವಲಿಂಗಕ್ಕೆ ತಾನೂ ನಿಲುಕಡೆಯ ಸ್ಥಲವೆಂದು ತಿಳಿದು ಸ್ವಸ್ವರೂಪಜ್ಞಾನದಿಂದ ಭೇದಪ್ರತೀತಿಗೆ ಕಾರಣವಾದ ಮೂಲಾಜ್ಞಾನವು ನಷ್ಟವಾಗಿ, ಸಕಲ ಜಗತ್ತೂ ಶಿವಾತಿರಿಕ್ತವಲ್ಲದೆ ಇರುವುದೆಂದು ತೋರಿರುವ ಕಾರಣ, ಪ್ರಪಂಚವನ್ನು ಬಾಹ್ಯವಾದುದೆಂದು ಪರಿಭಾವಿಸದೆ, ಅದರಂತೆಯೇ ನಾನು ನೀನು ಎಂಬ ಭೇದಭಾವವೂ ಅಳಿದುಹೋಗಿ ಇರುತ್ತಿರುವುದೇ ಐಕ್ಯಸ್ಥಲಮಾರ್ಗವರ್ತನವು. ||೧೮||

ಅವತಾರಿಕೆ—ಇಂತಪ್ಪ ಷಟ್ಸ್ಥಲಾಚರಣಯುಕ್ತನಾದ ಶರಣನ ಷಡಿಂದ್ರಿಯಗಳಲ್ಲಿ ಲಿಂಗಸಂಬಂಧವಿರಲಾಗಿ, ಆತಂಗೆ ಭೌತಿಕವಾದ ದೇಹೇಂದ್ರಿಯಗಳಿಲ್ಲವೆಂದು ಪೇಳುತಿರ್ದಪಂ.—

ಆಚರಣಾದಿಲಿಂಗ ಗುರುಲಿಂಗ ಶಿವಾಹ್ವಯಲಿಂಗ ಜಂಗಮಾ |
ಖ್ಯೋಚಿತಲಿಂಗ ನಿರ್ಮಳನಿರರ್ಗಳ ನಿಶ್ಚಲಮುಕ್ತಿದಪ್ರಸಾ ||
ದಾಚಳಲಿಂಗ ನಿಷ್ಕಳಮಹಾಘನಲಿಂಗ ಮಯೇಂದ್ರಿಯಪ್ರಭಾ |
ಸೂಚಿತಷಟ್ಸ್ಥಲಾತ್ಮಕ ಶರೀರಧರಂ ಶರಣಂ ಶಿವಾಧವಾ ||೧೯||

ಟೀಕೆ—ಆಚರಣಾದಿ..ಶರೀರಧರಂ-ಆಚರಣಾದಿಲಿಂಗ-ಸರ್ವತತ್ವಂಗಳ್ಗಾಧಾರವಾದ ಲಿಂಗವು, ಗುರುಲಿಂಗ-ಗುರುಲಿಂಗವು, ಶಿವಾಹ್ವಯಲಿಂಗ-ಶಿವನೆಂಬ ಪೆಸರುಳ್ಳ ಲಿಂಗವು, ಜಂಗಮಾಖ್ಯೋಚಿತಲಿಂಗ-ಜಂಗಮನೆಂಬ ಪೆಸರ್ಗೆ ಯೋಗ್ಯವಾದ ಲಿಂಗವು, ನಿರ್ಮಳನಿರರ್ಗಳನಿಶ್ಚಲಮುಕ್ತಿದ ಪ್ರಸಾದಾಚಳಲಿಂಗ-ನಿರ್ಮಳ-ಸ್ವಚ್ಛ

ವಾದ, ನಿರರ್ಗಳ-ಎಡೆತಡೆಯಿಲ್ಲದ, ನಿಶ್ಚಲ-ಚಲನೆಯಿಲ್ಲದ, ಮುಕ್ತಿದ-ಮೋಕ್ಷಪ್ರದಮಾದ, ಪ್ರಸಾದ-ಪ್ರಸಾದವೆಂಬ, ಅಚಳಲಿಂಗ-ಸ್ಥಿರವಾದ ಲಿಂಗವು, ನಿಷ್ಕಳಮಹಾಘನಲಿಂಗ-ಕಲಾತೀತಮಪ್ಪ ಪೂಜ್ಯವಾದ ಸರ್ವೋತ್ಕೃಷ್ಟವಾದ ಲಿಂಗವು, ಮಯ-ಇಂತಪ್ಪ ಲಿಂಗಗಳ ಸ್ವರೂಪವಾದ, ಇಂದ್ರಿಯ-ಷಡಿಂದ್ರಿಯಂಗಳ, ಪ್ರಭಾ-ಬೆಳಗಿನಿಂ, ಸೂಚಿತ-ತೋರಿಸಲ್ಪಟ್ಟ, ಷಟ್ಸ್ಥಲಾತ್ಮಕ-ಷಟ್ಸ್ಥಲಸ್ವರೂಪವಾದ, ಶರೀರ-ವಿಗ್ರಹವನು, ಧರಂ-ಧರಿಸಿದಾತನೇ, ಶರಣಂ-ಶರಣನೆನಿಸುವನು ||

ಟಿಪ್ಪಣಿ—ಘ್ರಾಣೇಂದ್ರಿಯದಲ್ಲಿ ಆಚಾರಲಿಂಗ, ಜಿಹ್ವೇಂದ್ರಿಯದಲ್ಲಿ ಗುರುಲಿಂಗ, ನೇತ್ರೇಂದ್ರಿಯದಲ್ಲಿ ಶಿವಲಿಂಗ, ತ್ವಗಿಂದ್ರಿಯದಲ್ಲಿ ಜಂಗಮಲಿಂಗ, ಶ್ರೋತ್ರೇಂದ್ರಿಯದಲ್ಲಿ ಪ್ರಸಾದಲಿಂಗ, ಹೃದಯದಲ್ಲಿ ಮಹಾಲಿಂಗ, ಹೀಗೆ ಷಡಿಂದ್ರಿಯಗಳಲ್ಲಿಯೂ ಲಿಂಗಗಳು ಪ್ರತಿಷ್ಠಿತವಾಗಿರುವ ಕಾರಣ ಅಂಥ ಷಡ್ಲಿಂಗತೇಜೋಭರಿತತ್ವದಿಂದ ಭೌತಿಕದೇಹತ್ವ ನಿವೃತ್ತಿಯಾಗಿ ಷಟ್ಸ್ಥಲಮಯವಾದ ದೇಹವುಳ್ಳಾತನೇ ಶರಣನೆನಿಸಿಕೊಳ್ಳುವನು. ||೧೯||

ಭಾಕ್ತಿಕಮುಖ್ಯಷಟ್ಸ್ಥಲಸಮಾಚರಣಾಮಲಯೋಗಮಾರ್ಗಸಂ |
ಪ್ರೋಕ್ತವಿಚಾರಸಾರ ಪರಿಣಾಮಮಹತ್ತರಸೌಖ್ಯಸಿದ್ಧಿಯಿಂ ||
ಮುಕ್ತಿಪದಂ ಸ್ವಭಾವಪದಮಾಗಿ ವಿರಾಜಿಪನಯ್ಯ ಸದ್ಗುರು |
ಪ್ರೋಕ್ತರಹಸ್ಯವಾಕ್ಯ ಪರಮಾರ್ಥವಿದಂ ಶರಣಂ ಶಿವಾಧವಾ ||೨೦||

ಟೀಕೆ—ಸದ್ಗುರುಪ್ರೋಕ್ತರಹಸ್ಯವಾಕ್ಯಪರಮಾರ್ಥವಿದಂ—ಸದ್ಗುರು-ಶ್ರೀಗುರುಸ್ವಾಮಿಯಿಂ, ಪ್ರೋಕ್ತ-ಹೇಳಲ್ಪಟ್ಟ, ರಹಸ್ಯ-ಗೋಪ್ಯವಾದ, ವಾಕ್ಯ-ನಿರೂಪದ, ಪರಮಾರ್ಥ-ಸಿಕ್ಷ್ಟಯವನು, ವಿದಂ-ಬಲ್ಲಂಥ, ಶರಣಂ-ಶರಣನು, ಭಾಕ್ತಿಕಮುಖ್ಯಷಟ್ಸ್ಥಲ ಸಮಾಚರಣಾಮಲ ಯೋಗಮಾರ್ಗ ಸಂಪ್ರೋಕ್ತವಿಚಾರ ಸಾರ ಪರಿಣಾಮ ಮಹತ್ತರ ಸೌಖ್ಯಸಿದ್ಧಿಯಿಂ-ಭಾಕ್ತಿಕ-ಭಕ್ತಸ್ಥಲವೇ, ಮುಖ್ಯ-ಮೊದಲಾದ, ಷಟ್ಸ್ಥಲ-ಷಟ್ಸ್ಥಲಂಗಳನ್ನು, ಸಮಾಚರಣ-ಚೆನ್ನಾಗಿ ಆಚರಿಸುವುದರಿಂದ, ಅಮಲ-ನಿರ್ಮಲವಾದ, ಯೋಗ-ಶಿವಯೋಗದ, ಮಾರ್ಗ-ನಡವಳಿಕೆಯಿಂ, ಸಂಪ್ರೋಕ್ತ-ಚೆನ್ನಾಗಿ ಹೇಳಲ್ಪಟ್ಟ, ವಿಚಾರ-ವಿವೇಕದಲ್ಲಿ, ಸಾರ-ಶ್ರೇಷ್ಠವಾದ, ಪರಿಣಾಮ-ಪರಿಣಮಿಸುತಿರ್ಪ, ಮಹತ್ತರ-ಅಧಿಕತರವಾದ, ಸೌಖ್ಯ-ಆನಂದದ, ಸಿದ್ಧಿಯಿಂ-ಪಡೆವುದರಿಂದ, ಮುಕ್ತಿಪದಂ-ಮೋಕ್ಷಮಾರ್ಗವೇ, ಸ್ವಭಾವಪದಮಾಗಿ-ಸಹಜಮಾರ್ಗವಾಗಿ, ವಿರಾಜಿಪನಯ್ಯ-ಒಪ್ಪುತ್ತಿರ್ಪನಲಾ. ||೨೦||

ಟಿಪ್ಪಣಿ—ಶರಣನು ಸದ್ಗುರುವಿನಿಂದ ಪರಮಾರ್ಥರಹಸ್ಯವನ್ನು ತಿಳಿದುಕೊಂಡು, ಭಕ್ತಸ್ಥಲವೇ ಮೊದಲಾದ ಆರುಸ್ಥಲಗಳ ಆಚರಣವನ್ನು ನಡೆಯಿಸುವುದರಿಂದ, ಲಿಂಗಾಂಗಸಾಮರಸ್ಯವಿಚಾರಪರಿಪಾಕವನ್ನೈದಿ, ತನ್ಮೂಲಕ ಪರಮಾನಂದವನ್ನು ಪಡೆದು, ಜೀವನ್ಮುಕ್ತನಾಗಿ ವಿರಾಜಿಸುವನು.

ಪರಮಷಡಂಗಯೋಗನಿರವದ್ಯನಿರರ್ಗಳ ಮಾರ್ಗದೊಳ್ಮನೋ |
ಹರವಹನೈಷ್ಠಿಕಾಚರಣೆ ಶಂಕೆಯ ನೊಂದದೆ ಸಮ್ಯಗುತ್ತರೋ ||
ತ್ತರಕಣಯುಂಗಳೊಳ್ಸಲೆ ಸಮಾಹಿತಮಾಗಿ ವಿರಾಜಿಸಿರ್ಪುದೊಂ |
ದರಿದೆ ಗುರೂಪದೇಶ ವಚನಾನುಭವಾಗಮದೊಳ್ಶಿವಾಧವಾ ||೨೧||

ಟೀಕೆ—ಪರಮಷಡಂಗಯೋಗ ನಿರವದ್ಯನಿರರ್ಗಳ ಮಾರ್ಗದೊಳ್-ಪರಮ-ಉತ್ಕೃಷ್ಟವಾದ, ಷಡಂಗಯೋಗ-ಷಟ್ಸ್ಥಲಯೋಗದಿಂದ, ನಿರವದ್ಯ-ದೋಷರಹಿತವಾದ, ನಿರರ್ಗಳ-ನಿರಂಕುಶವಾದ, ಮಾರ್ಗದೊಳ್-ದಾರಿಯಲ್ಲಿ, ಮನೋಹರವಹ-ಮಂಜುಳವಾದ, ನೈಷ್ಠಿಕಾಚರಣೆ-ಶರಣನ ನೈಷ್ಠಿಕಾಚರಣೆಯು, ಶಂಕೆಯನೊಂದದೆ-ಸಂದೇಹವಂಪೊರ್ದದೆ, ಸಮ್ಯಗುತ್ತರೋತ್ತರ ಕಣಯುಂಗಳೊಳ್-ಸಮ್ಯಕ್-ಚೆನ್ನಾಗಿ, ಉತ್ತರೋತ್ತರ ಕಣಯುಂಗಳೊಳ್-ಉತ್ತರೋತ್ತರಮಾರ್ಗಂಗಳಲ್ಲಿ ('' ಕಣಯೊ ಮಾರ್ಗಣೆಮಾರ್ಗೆಮರೀಚ್ಯಾಮರ್ಥನಿಶ್ಚಯೆ '' ಎಂದು ವಿಶ್ವಪ್ರಕಾಶಿಕೆಯುಂಟು) ಸಲೆ-ಚೆನ್ನಾಗಿ, ಸಮಾಹಿತಮಾಗಿ-ಕೂಡಿ, ವಿರಾಜಿಸಿರ್ಪುದು-ಒಪ್ಪುತ್ತಿರ್ಪುದು, ಒಂದು-ಇದು ತಾನೊಂದು, ಗುರೂಪದೇಶವಚನಾನುಭವಾಗಮದೊಳ್-ಗುರೂಪದೇಶ-ಶ್ರೀಗುರುನಿರೂಪದ, ವಚನ-ವಾಕ್ಯದ, ಅನುಭವ-ಜ್ಞಾನಾನುಭವದಲ್ಲಿಯೂ, ಆಗಮದೊಳ್-ಶಿವಾಗಮಂಗಳಲ್ಲಿಯೂ, ಅರಿದೆ-ಚೋದ್ಯವೆ ? ಚೋದ್ಯವಲ್ಲವೆಂಬುದರ್ಥ. ||೨೧||

ಟಿಪ್ಪಣಿ—ಅಂತಪ್ಪ ಶರಣನು ಶ್ರೇಷ್ಠವಾದ ಷಟ್ಸ್ಥಲಯೋಗಮಾರ್ಗದಲ್ಲಿ ದೃಢವಿಶ್ವಾಸದಿಂದ ಆಚರಿಸುತ್ತಿರುವುದು ನಿಸ್ಸಂಶಯವಾಗಿ ಉತ್ತರೋತ್ತರ ಸಮಾಚೀನವಾದ ಮಾರ್ಗವನ್ನನುಲಕ್ಷಿಸುವಿಕೆಯೇ ಆಗಿರುವುದು. ಗುರೂಪದೇಶಲಬ್ಧವಾದ ಅರಿವಿನಲ್ಲಿಯೂ ಶಿವಶಾಸ್ತ್ರಗಳಲ್ಲಿಯೂ ನೋಡಲಾಗಿ ಇಂತಪ್ಪ ರೀತಿಯು ಸಮನಿಸುವುದು ಒಂದಾಶ್ಚರ್ಯವೆ ? ||೨೧||

ಗೌರವಲೈಂಗಿಕಾದಿನಿಯಮವ್ರತಧರ್ಮವೆನಿಪ್ಪ ದರ್ಪಣ |
ದ್ವಾರದಿನಿಟ್ಟಿಸಲ್ ಮಿಗೆ ಪರಿಸ್ಫುಟಮಾದ ನಿಜಸ್ವರೂಪವಿ ||
ಸ್ತಾರಮತೀವಶೋಭೆವಡೆ ದುನ್ನತಿಯಿಂ ಪ್ರತಿಬಿಂಬಿಸುತ್ತಮಿ |
ರ್ಪಾರಮಣೀಯಭಾವವೆಕಣಾ ಪರತತ್ವಪದಂ ಶಿವಾಧವಾ ||೨೨||

ಟೀಕೆ—ಗೌರವಲೈಂಗಿಕಾದಿ ನಿಯಮವ್ರತಧರ್ಮವೆನಿಪ್ಪ-ಗೌರವ-ಗುರುಸಂಬಂಧವಾದ ವ್ರತವು, ಲೈಂಗಿಕ-ಲಿಂಗಸಂಬಂಧವಾದ ವ್ರತವು, ಆದಿ-ಇವುಮೊದಲಾದ ಜಂಗಮಪ್ರಸಾದ ಪಾದೋದಕ ಭಕ್ತಿಸಂಬಂಧವಾದ, ನಿಯಮವ್ರತಧರ್ಮವೆನಿಪ್ಪ-ನಿಯಮ-ಕಟ್ಟಿನ, ವ್ರತ-ವ್ರತಂಗಳ, ಧರ್ಮವೆನಿಪ್ಪ-ಆಚರಣೆಯೆನಿಸುವ, ದರ್ಪಣದ್ವಾರದಿಂ-ಕೈಪಿಡಿಯೆಂಬ ಬಾಗಿಲಲ್ಲಿ, ನಿಟ್ಟಿಸಲ್-ನೋಡಲಾಗಿ, ಮಿಗೆ ಪರಿಸ್ಫುಟಮಾದ-

ಅತ್ಯಂತವ್ಯಕ್ತವಾದ, ನಿಜಸ್ವರೂಪವಿಸ್ತಾರಂ–ಸ್ವಸ್ವರೂಪಸಾಕ್ಷಾತ್ಕಾರದ ಬಿತ್ತರವು ಅತೀವಶೋಭೆವಡೆದು–ಮಿಗಿಲಾಗಿಕಾಂತಿವೆತ್ತು, ಉನ್ನತಿಯಿಂ–ಪೆರ್ಚುಗೆಯಿಂ, ಪ್ರತಿಬಿಂಬಿಸುತ್ತಮಿರ್ಪ–ಮಾರ್ಪೊಳೆವುತ್ತಿರ್ಪ, ಆ ರಮಣೀಯಭಾವವೆ–ಆ ರಂಜಿಸುತ್ತಿರ್ಪ ಭಾವವೇ, ಪರತತ್ವಪದಂಘಣಾ–ಶಿವತತ್ವವಲ್ಲವೆ ? ||೨೨||

ಟಿಪ್ಪಣಿ—ಗುರುಲಿಂಗಜಂಗಮಪಾದೋದಕಪ್ರಸಾದಾದಿಗಳಲ್ಲಿ ಭಕ್ತಿಯುಕ್ತನಾಗಿ ಅಚಲ ವ್ರತದಿಂದ ಆಚರಿಸುವುದಾವುದುಂಟೋ ಅಂಥ ಸದ್ಧರ್ಮವೆಂಬ ಕನ್ನಡಿಯ ಮೂಲಕವಾಗಿ ನೋಡುವುದರಿಂದ ಸ್ವಸ್ವರೂಪಸಾಕ್ಷಾತ್ಕಾರವಾಗುವುದು. ಹಾಗೆ ಪ್ರತಿಬಿಂಬಿಸಿದ ತೇಜೋಮಯವಾದ ಭಾವವೇ ಶಿವತತ್ವವಾಗಿರುವುದು. ||೨೨||

ಮುಕುರವ ನೀಕ್ಷಿಪಂಗನೆಯಬುದ್ಧಿ ಯದೇಂ ವರರೂಪಹಾವಭಾ |
ವಕಲಿತವಿಭ್ರಮಾಪ್ತನಿಜಮಂಗಳಮೂರ್ತಿಯ ನೀಕ್ಷಿಪಲ್ಲಿಯೋ ||
ಮುಕುರವನೇ ನಿರೀಕ್ಷಿಪೆಡೆಯಲ್ಲಿಯೊ ತನ್ನನೆ ನೋಳ್ಪಳೈಸೆ ಲೈಂ |
ಗಿಕನಿಯಮಾರ್ಚನಾನುಭವದರ್ಪಣದೊಳ್ ಶರಣಂ ಶಿವಾಧವಾ ||೨೩||

ಟೀಕೆ—ಮುಕುರವಂ–ಕನ್ನಡಿಯನ್ನು, ಈಕ್ಷಿಪ–ನೋಡುವ, ಅಂಗನೆಯ–ಸ್ತ್ರೀಯ, ಬುದ್ಧಿ–ಭಾವವು, ಅದೇಂ–ಅದೇನು, ವರರೂಪಹಾವಭಾವಕಲಿತವಿಭ್ರಮಾಪ್ತ ನಿಜಮಂಗಳಮೂರ್ತಿಯಂ–ವರ–ಶ್ರೇಷ್ಠವಾದ, ರೂಪ–ಸೌಂದರ್ಯದ, ಹಾವ–ಮುಖವಿಕಾಸದಿಂದ, ಭಾವ–ಚಿತ್ತಸಂಭ್ರಮದಿಂದ, ಕಲಿತ–ಕೂಡಿದ, ವಿಭ್ರಮ–ಪುರ್ಬಿನವಿಲಾಸದಿಂದ, ಆಪ್ತ–ಎಯ್ದಲ್ಪಟ್ಟ, ನಿಜ–ಸ್ವಕೀಯಮಾದ, ಮಂಗಳಮೂರ್ತಿಯಂ–ಚೆಲ್ವಿಕೆಯನುಳ್ಳ ಪ್ರತಿಬಿಂಬವನು, ಈಕ್ಷಿಪಲ್ಲಿಯೊ–ನೋಡುವೆಡೆಯಲ್ಲಿಯೊ? ಮುಕುರವನೇ–ಕನ್ನಡಿಯನೇ, ಈಕ್ಷಿಪೆಡೆಯಲ್ಲಿಯೊ–ನೋಡುವೆಡೆಯಲ್ಲಿಯೊ? ತನ್ನನೆ–ತನ್ನನ್ನೇ, ನೋಡುವಳೈಸೆ–ನೋಡುವಳಷ್ಟೆ ? ಹಾಗೆ, ಲೈಂಗಿಕನಿಯಮಾರ್ಚನಾನುಭವದರ್ಪಣದೊಳ್–ಲೈಂಗಿಕ–ಲಿಂಗಸಂಬಂಧವಾದ, ನಿಯಮ–ಕಟ್ಟಿನ, ಅರ್ಚನ–ಪೂಜೆಯ, ಅನುಭವ–ಅನುಭಾವವೆಂಬ, ದರ್ಪಣದೊಳ್–ಕನ್ನಡಿಯಲ್ಲಿ, ಶರಣಂ–ಶಿವಶರಣನು, ಸ್ವಸ್ವರೂಪವನೆ ನೋಡುತ್ತಿರ್ಪನು. ||೨೩||

ಟಿಪ್ಪಣಿ—ಕನ್ನಡಿಯನ್ನು ನೋಡತಕ್ಕಸ್ತ್ರೀಯ ಉದ್ದೇಶವು, ಸೌಂದರ್ಯಲಾವಣ್ಯವಿಲಾಸಾದಿಗಳಿಂದ ಕೂಡಿದ ತನ್ನ ದೇಹವನ್ನು ನೋಡಿಕೊಳ್ಳಬೇಕೆಂಬುದಾಗಿರುವುದೇ ಹೊರತು ಕನ್ನಡಿಯನ್ನೇ ನೋಡಬೇಕೆಂಬುದಾಗಿಲ್ಲದಿರುವಂತೆ, ಶರಣನು ಲಿಂಗಾರ್ಚನಾನಿಯಮವೆಂಬ ಕನ್ನಡಿಯ ನೋಟದಲ್ಲಿ ಸ್ವಸ್ವರೂಪಸಾಕ್ಷಾತ್ಕಾರವನ್ನೇ ಉದ್ದೇಶವಾಗಿಟ್ಟುಕೊಂಡಿರುವನು. ||೨೩||

ನೋಡದ ಮುನ್ನ ದರ್ಪಣದ ಭಾವ ಮದುಂಟು ವಿಭ್ರಮಂ |
ಗೂಡಿ ವಿರಾಜಿಸುತ್ತಭಿಮುಖಾಸ್ಪದಮಾದ ನಿಜಸ್ವರೂಪಮಂ ||
ನೋಡಿದ ನಂತರಂ ಮರಳಿ ದರ್ಪಣಭಾವಮದುಂಟೆ ತತ್ವಮಂ |
ನೋಡದ ಮುನ್ನ ಮಾಯೆ ಬಳಿಕೆಲ್ಲಿಯಮಾಯೆ ಬಿಡಾ ಶಿವಾಧವಾ ||೨೪||

ಟೀಕೆ—ನೋಡದಮುನ್ನ-ಕನ್ನಡಿಯನೋಡುವುದರಿಂದ ಮೊದಲು, ಅದು ದರ್ಪಣಭಾವಂ-ಕನ್ನಡಿಯೆಂಬ ಆ ಭಾವನೆಯು ಉಂಟು. ವಿಭ್ರಮಂಗೂಡಿ-ವಿಲಾಸದೊಡನೆಕೂಡಿ, ವಿರಾಜಿಸುತ್ತ-ಒಪ್ಪುತ್ತ, ಅಭಿಮುಖಾಸ್ಪದಮಾದ-ತನಗಿದಿರಾದ, ನಿಜಸ್ವರೂಪಮಂ-ತನ್ನ ಸೌಂದರ್ಯವನ್ನು, ನೋಡಿದನಂತರಂ-ನೋಡಿದಬಳಿಕ, ಮರಳಿ-ಮತ್ತೆ, ಅದುದರ್ಪಣಭಾವಂ-ಆ ಕನ್ನಡಿಯೆಂಬ ಭಾವನೆಯು ಉಂಟೆ ? ಇಲ್ಲವೆಂಬರ್ಥ. ಹಾಗೆ, ತತ್ವಮಂನೋಡದಮುನ್ನ-ಸ್ವರೂಪವಂಕಾಣ್ಬುದರಿಂ ಮೊದಲು, ಮಾಯೆ-ಇದಿರಿಟ್ಟುಮಾಳ್ಪಕ್ರಿಯಾಚರಣೆಯು ಉಂಟು. ಬಳಿಕ-ಸ್ವಸ್ವರೂಪಸಾಕ್ಷಾತ್ಕಾರವಾದ ನಂತರದಲ್ಲಿ, ಎಲ್ಲಿಯದುಮಾಯೆ-ಕ್ರಿಯಾಚಾರವೆಲ್ಲಿಯದು ? ಬಿಡಾ-ತೆಗೆ " ನಚಲಿಂಗಂನಚಕ್ರಿಯಾ " ಎಂದುದಾಗಿ. ||೨೪||

ಟಿಪ್ಪಣಿ—ತನ್ನಿದಿರಾಗಿಟ್ಟುಕೊಂಡು ನೋಡುವುದಕ್ಕೆ ಮುಂಚೆ ಕನ್ನಡಿಯೆಂಬ ಭಾವವು ತನಗುಂಟು. ಆದರಲ್ಲಿ ತನ್ನ ರೂಪನ್ನು ನೋಡಿದಬಳಿಕ ಕನ್ನಡಿಯ ಜ್ಞಾನವು ತನಗಿಲ್ಲ. ಅದರಂತೆಯೇ ಶರಣನಿಗೆ ಲಿಂಗಾರ್ಚನಾದಿಗಳಲ್ಲಿ ಸ್ವಸ್ವರೂಪಸಾಕ್ಷಾತ್ಕಾರವಾಗುವವರೆಗೂ ಕ್ರಿಯೆಯುಂಟು, ತತ್ವಸಾಕ್ಷಾತ್ಕಾರವಾದ ಬಳಿಕ ಮಲಶಕ್ತಿಯಳಿವಕಾರಣ ಕ್ರಿಯೆಯಿಲ್ಲ. ||೨೪||

ಅವತಾರಿಕೆ—ಸ್ವಸ್ವರೂಪಸಾಕ್ಷಾತ್ಕಾರವುಳ್ಳ ಶರಣಂಗೆ ಷಟ್ಸ್ಥಲಾಚರಣೆಯೊಂದೇ ಸ್ವರೂಪಮಾಗಿರ್ಪುದೆಂದು ಪೇಳುತ್ತಿರ್ದಪಂ.—

ಭಾಕ್ತಿಕವೇ ಮಹೇಶ್ವರಮಹಾಸ್ಥಲ ಮಾಸ್ಥಲವೇ ಪ್ರಸಾದಸಂ |
ಯುಕ್ತಿವಿಶಾರದಸ್ಥಳ ಮದೇ ಘನಜೀವಕಳಾತ್ಮಲಿಂಗಭಾ ||
ವೋಕ್ತನಿಜಸ್ಥಳಾಖ್ಯ ಮದು ತಾನೆ ಲಸಚ್ಛರಣಸ್ಥಳತ್ವಮಾ |
ಮುಕ್ತಿವಿಶಿಷ್ಟದಿವ್ಯಶರಣಸ್ಥಳ ಮೈಕ್ಯಪದಂ ಶಿವಾಧವಾ ||೨೫||

ಟೀಕೆ—ಭಾಕ್ತಿಕವೇ-ಭಕ್ತಿಸ್ಥಲವೇ, ಮಹೇಶ್ವರಮಹಾಸ್ಥಳಂ-ಮಾಹೇಶ್ವರವೆಂಬ ಸ್ಥಳವು. ಆ ಸ್ಥಳವೇ-ಆ ಮಾಹೇಶ್ವರಸ್ಥಳವೇ, ಪ್ರಸಾದಸಂಯುಕ್ತಿವಿಶಾರದಸ್ಥಳಂ-ಪ್ರಸಾದ-ಪ್ರಸಾದದ, ಸಂಯುಕ್ತಿ-ಸಂಯೋಜನದಲ್ಲಿ, ವಿಶಾರದ-ಬಲ್ಲವಿಕೆಯುಳ್ಳ, ಸ್ಥಳಂ-ಸ್ಥಳವು. ಅದೇ-ಆ ಪ್ರಸಾದಿಸ್ಥಳವೇ, ಘನಜೀವಕಳಾತ್ಮ ಲಿಂಗಭಾವೋಕ್ತ ನಿಜಸ್ಥಳಾಖ್ಯಂ-ಘನ-ದೊಡ್ಡದಾದ, ಜೀವಕಳಾತ್ಮ-ಜೀವಕಳೆಗೆ ಚೈತನ್ಯವಾದ ಪ್ರಾಣವೇ, ಲಿಂಗಭಾವ-ಲಿಂಗಸ್ವರೂಪವಾದುದೆಂಬ ಭಾವದಿಂ, ಉಕ್ತ-ಹೇಳಲ್ಪಟ್ಟ, ನಿಜ-ಸಹಜವಾದ, ಸ್ಥಲ-ಸ್ಥಳವೆಂಬ, ಆಖ್ಯಂ-ಪೆಸರುಳ್ಳುದು. ಅದು ತಾನೆ-ಆ ಪ್ರಾಣಲಿಂಗಿಸ್ಥಳವೇ, ಲಸಚ್ಛರಣಸ್ಥಲತ್ವಂ-ಒಪ್ಪುತ್ತಿರ್ಪ ಶರಣಸ್ಥಲಮಾದುದು. ಆ ಮುಕ್ತಿವಿಶಿಷ್ಟದಿವ್ಯಶರಣಸ್ಥಲಂ-ಅಂತಪ್ಪ ಮುಕ್ತಿಯೊಡನೆಕೂಡಿ ಪ್ರಕಾಶಮಯವಾದ ಶರಣಸ್ಥಲವೇ, ಐಕ್ಯಪದಂ-ಐಕ್ಯಸ್ಥಲವು. ||೨೫||

ಟಿಪ್ಪಣಿ—ಭಕ್ತಸ್ಥಲವೇ ವಿಶಿಷ್ಟಾಚರಣಸಂಪನ್ನತೆಯಿಂದ ಮಾಹೇಶ್ವರಸ್ಥಲವಾಗುವುದು. ಆ ಮಾಹೇಶ್ವರಸ್ಥಲವೇ ಮನೋನೈರ್ಮಲ್ಯದ ಸಂಬಂಧದಿಂದ ಪ್ರಸಾದಿಸ್ಥಲವಾಗುವುದು. ಆ ಪ್ರಸಾದಿಸ್ಥಲವೇ ಜ್ಞಾನಯೋಗದಿಂದ ಪ್ರಾಣಲಿಂಗಿಸ್ಥಲವಾಗುವುದು. ಆ ಪ್ರಾಣಲಿಂಗಿಸ್ಥಲವೇ ಶರಣಸತಿ ಲಿಂಗಪತಿಭಾವದಿಂದ ಲಿಂಗಾಂಗಸಾಮರಸ್ಯ ಸೌಖ್ಯವನ್ನನುಭವಿಸುತ್ತ ಬಾಹ್ಯವ್ಯಾಪಾರವನ್ನು ಮರೆತಿರುವುದರಿಂದ ಶರಣಸ್ಥಲವಾಗುವುದು. ಆ ಶರಣಸ್ಥಲವೇ ಶಿವಲಿಂಗದಲ್ಲಿ ಐಕ್ಯವನ್ನೈದಿ ಭಿನ್ನಭಾವವನ್ನಳಿದಿರುವುದರಿಂದ ಐಕ್ಯಸ್ಥಲವಾಗುವುದು. ಆದುಕಾರಣ, ಸ್ವಸ್ವರೂಪಸಾಕ್ಷಾತ್ಕಾರವುಳ್ಳ ಶರಣನಿಗೆ ಮೇಲೆಹೇಳಿದ ಷಟ್ಸ್ಥಲಾಚರಣೆಯೆಲ್ಲಾ ಒಂದೇ ಆಗಿರುವುದು. ||೨೫||

ಅವತಾರಿಕೆ—ಇಂತು ಆಚಾರ್ಯಂ ಸ್ವಮತಸ್ಥಾಪನೆಯಂಮಾಡಿ, ಎಲ್ಲಿಪರ್ಯಂತ ಪರಮತತಿರಸ್ಕಾರವಾಗಲಿಲ್ಲ ಅಲ್ಲಿಪರ್ಯಂತವೂ ಸ್ವಮತಸ್ಥಾಪನೆಯಾಗಲಿಲ್ಲವೆಂಬ ನ್ಯಾಯದಿಂ ಪರಮತಗಳಂ ಖಂಡಿಸುವಲ್ಲಿ ಮೊದಲಾಸಿದ್ಧಾಂತಿಯ ಮತಮಂ ಖಂಡಿಸುತ್ತಿರ್ದಪಂ.—

ಶ್ವಪಚನ ದೈವ ದಂತರಮ ನೊರ್ಮೆ ವಿಚಾರಿಸಿ ನೋಡೆ ಲೋಕದೊಳ್ |
ಶ್ವಪಚನೆ ಬಲ್ಪಲಾ ಜನದ ಬುದ್ಧಿಗೆ ದೈವಮ ನೊಲ್ದುಮುಟ್ಟಿದ ||
ಲ್ಲಿಪರಮಶುದ್ಧತಾಸ್ಮರಣೆ ಯಿಲ್ಲ ದಶುದ್ಧಸಲೇಪಭಾವಮಾ |
ಶ್ವಪಚನ ತಟ್ಟುಮುಟ್ಟಿ ನೆಡೆಯಲ್ಲಿಯೆ ಬರ್ಪುದರಿಂ ಶಿವಾಧವಾ ||೨೬||

ಟೀಕೆ—ಜನದ-ಸಿದ್ಧಾಂತಿಜನದ, ಬುದ್ಧಿಗೆ-ಮತಿಗೆ, ಪರಮಶುದ್ಧತಾಸ್ಮರಣೆಯಿಲ್ಲದೆ-ಮಹಾಪರಿಶುದ್ಧಿಯಾಯಿತೆಂಬ ಭಾವದ ನೆನಹಿಲ್ಲದೆ, ದೈವಮಂ-ಇಷ್ಟಲಿಂಗಮಾತ್ರವನ್ನು, ಒಲ್ದು-ಚೆನ್ನಾಗಿ, ಮುಟ್ಟಿದಲ್ಲಿ-ಸ್ಥೂಲತನುವಿನಲ್ಲಿ ಧರಿಸಿದಲ್ಲಿ, ಅಶುದ್ಧ ಸಲೇಪಭಾವಂ-ಅಪವಿತ್ರವಾದ ಪಾಪಲೇಪಭಾವವು, ಆಶ್ವಪಚನ-ಆ ಚಂಡಾಲನ, ತಟ್ಟುಮುಟ್ಟಿನ-ಸೋಂಕಿನ, ಎಡೆಯಲ್ಲಿಯೆ, ಬರ್ಪ್ಪುದರಿಂ-ಬರುವುದರಿಂದೆ, ಲೋಕದೊಳ್-ಜಗತ್ತಿನಲ್ಲಿ, ಶ್ವಪಚನ-ಚಂಡಾಲನ, ದೈವದ-ಆ ಸಿದ್ಧಾಂತಿಯ ಇಷ್ಟಲಿಂಗದ, ಅಂತರಮಂ-ತಾರತಮ್ಯವನು, ಒರ್ಮೆ-ಒಂದುವೇಳೆ, ವಿಚಾರಿಸಿ ನೋಡೆ-ಆರೈದುನೋಡಲಾಗಿ, ಶ್ವಪಚನೆ-ಆ ಚಂಡಾಲನೇ, ಬಲ್ಪಲಾ-ವೆಗ್ಗಳವಲಾ (ಅಂಗದಮೇಲೆ ಲಿಂಗಸಂಬಂಧವಾಗಿ ಲಿಂಗಭಾವವೆಡೆಗೊಳ್ಳದೆ ಮಲಿನಭಾವಿಯಾಗಿರ್ಪೊಡೆ ಆ ಲಿಂಗಧಾರಣಂ ವ್ಯರ್ಥವೆಂಬುದಭಿಪ್ರಾಯವು). ||೨೬||

ಟಿಪ್ಪಣಿ—ಕರ್ಮಭ್ರಾಂತರಾದ ಜನರ ಆಚರಣೆಯನ್ನು ನೋಡಿದರೆ, ಅವರಬುದ್ಧಿಗೆ ದೈವಕ್ಕಿಂತಲೂ ಚಂಡಾಲನೇ ಬಲ್ಲಿದನೆಂದು ತೋರಿರುವಂತೆ ಕಾಣುತ್ತದೆ. ಏಕೆಂದರೆ—ತನ್ನಲ್ಲಿ ಇಷ್ಟಲಿಂಗಸಂಬಂಧವಿರುವಾಗ ತಾನು ಯಾವಾಗಲೂ ಪರಿಶುದ್ಧನಾಗಿರುವೆನೆಂಬ ಭಾವವು ಇಲ್ಲದೆ ಚಂಡಾಲನು ತನ್ನನ್ನು ಸೋಂಕಿದಮಾತ್ರದಿಂದಲೇ ತನಗೆ ಆಶುಚಿತ್ವವು ಬರುವುದೆಂದು ತಿಳಿಯುವನು. ಪರಿಶುದ್ಧಭಾವವನ್ನುಂಟುಮಾಡುವ ದೈವಸಂಬಂಧಕ್ಕಿಂತಲೂ ಚಂಡಾಲನ ಸ್ಪರ್ಶದಲ್ಲಿ ಅಧಿಕಶಕ್ತಿಯಿರುವುದೆಂದು ಭಾವಿಸಿದಂತಾಯಿತೆಂದು ಅಭಿಪ್ರಾಯ. ||೨೬||

ವ್ರತನಿಯಮೋಪವಾಸವಿಧಿಮುಖ್ಯಸಮಸ್ತವಿಧಾನಸತ್ಕ್ರಿಯೋ |
ಚಿತವಿವಿಧಾಗಮಾಚರಣೆ ನೋಳ್ಪೊಡೆ ಲಿಂಗವಿಹೀನರಾದವ ||
ರ್ಗತಿಶಯಧರ್ಮ ಮಲ್ಲದೆ ಸದಾಶಿವಲಿಂಗಸಮಾಹಿತರ್ಗೆ ನಿ |
ಶ್ಚಿತವಹಧರ್ಮಮಲ್ಲ ಪರಮಾರ್ಥನಿರೂಪಣದಿಂ ಶಿವಾಧವಾ ||೨೭||

ಟೀಕೆ—ವ್ರತನಿಯಮೋಪವಾಸವಿಧಿಮುಖ್ಯಸಮಸ್ತವಿಧಾನಸತ್ಕ್ರಿಯೋಚಿತವಿವಿಧಾಗಮಾಚರಣೆ-ವ್ರತ-ಚಾಂದ್ರಾಯಣಾದಿವ್ರತಂಗಳು, ನಿಯಮ-ಪ್ರಾಣಾಯಾಮ ಮೊದಲಾದುವು, ಉಪವಾಸವಿಧಿ-ಏಕಾದಶ್ಯುಪವಾಸವಿಧಾನ ಮೊದಲಾದುವು, ಮುಖ್ಯ-ಇವು ಮೊದಲಾದ, ಸಮಸ್ತವಿಧಾನ-ಸಕಲವಿಧಗಳ, ಸತ್ಕ್ರಿಯಾ-ಸತ್ಕರ್ಮಗಳಿಗೆ, ಉಚಿತ-ತಕ್ಕಂಥ, ವಿವಿಧ-ಹಲವುತೆರನಾದ, ಆಗಮ-ಆಗಮುಗಳ, ಆಚರಣೆ-ನಡವಳಿಯು, ನೋಳ್ಪೊಡೆ-ವಿಚಾರಿಸಲಾಗಿ, ಲಿಂಗವಿಹೀನರಾದವರ್ಗೆ-ಲಿಂಗಸಂಬಂಧವಿಲ್ಲದವರ್ಗೆ, ಅತಿಶಯಧರ್ಮಮಲ್ಲದೆ-ಮಿಗಿಲಾದಧರ್ಮವಲ್ಲದೆ, ಸದಾ-ಯಾವಾಗಲೂ, ಶಿವಲಿಂಗಸಮಾಹಿತರ್ಗೆ-ಶಿವಲಿಂಗಸಂಬಂಧವುಳ್ಳವರ್ಗೆ, ಪರಮಾರ್ಥನಿರೂಪಣದಿಂ-ಯಥಾರ್ಥವಾಕ್ಯದಿಂ, ನಿಶ್ಚಿತವಹ-ನಿಶ್ಚೈಸಲ್ಪಟ್ಟ, ಧರ್ಮಮಲ್ಲ-ಆಚರಣೆಯಲ್ಲ. ||೨೭||

ಟಿಪ್ಪಣಿ—ವಿಚಾರಮಾಡಿನೋಡಿದರೆ ಚಾಂದ್ರಾಯಣಾದಿವ್ರತಗಳು, ಪ್ರಾಣಾಯಾಮಾದಿ ನಿಯಮಗಳು, ಉಪವಾಸಗಳು ಮೊದಲಾದ ಕಾಮ್ಯಕರ್ಮಸಂಬಂಧವಾದ ಆಚರಣೆಗಳು ಲಿಂಗವಿಹೀನರಾದ ಭವಿಗಳಿಗೆ ಉತ್ಕೃಷ್ಟವಾದ ಧರ್ಮವಾಗಿರುವುದೇ ಹೊರತು ಲಿಂಗಾಂಗಸಂಗಿಗಳಿಗೆ ಅವು ತತ್ವಾರ್ಥ ವಿಚಾರದಿಂ ಸಿದ್ಧಾಂತವಾದ ಆಚರಣೆಯಾಗಿರುವುದಿಲ್ಲ. ||೨೭||

ಆದೊಡೆ ನಿಲ್ಲು ತೀರ್ಥಜಲಮಜ್ಜನ ಮುಂಡನ ದಂತಧಾವನಾ |
ಚ್ಛಾದನ ಧೋತ್ರದೇಹಪರಿಶುದ್ಧ್ಯುಪವಾಸ ಸಹಸ್ರ ಪಾರಣಾ ||
ಪಾದಿತನಿತ್ಯಕರ್ಮವಿಧಿ ನೋಳ್ಪೊಡೆ ಮುಂಡೆಗೆ ಯೋಗ್ಯಮೈಸೆ ಮು |
ತ್ತೈದೆಗೆ ಯೋಗ್ಯಮಲ್ಲ ಸತತಂ ಪತಿಭಕ್ತಿಯಿರಲ್ ಶಿವಾಧವಾ ||೨೮||

ಟೀಕೆ—ಆದೊಡೆ-ಎಲೆವೈದಿಕಾ ನೀನಾಚರಿಸುವ ಕರ್ಮಮಾರ್ಗಂ ನಿಶ್ಚಯವೆಂಬೆಯಾದೊಡೆ, ನಿಲ್ಲು-ತಾಳು, ತೀರ್ಥಜಲಮಜ್ಜನ ಮುಂಡನದಂತದಾವನಾಛ್ಛಾದನಧೋತ್ರದೇಹಪರಿಶುದ್ಧ್ಯುಪವಾಸಸಹಸ್ರಪಾರಣಾಪಾದಿತ ನಿತ್ಯಕರ್ಮವಿಧಿ-ತೀರ್ಥಜಲ-ಪುಣ್ಯತೀರ್ಥೋದಕದಲ್ಲಿಯ, ಮಜ್ಜನ-ಸ್ನಾನ, ಮುಂಡನ-ವಪನ, ದಂತಧಾವನ-ಪಲ್ಗಳ ಶುದ್ಧಿ, ಆಚ್ಛಾದನ-ಹೊದಿಕೆ, ಧೋತ್ರ-ಉಟ್ಟವಸ್ತ್ರದ, ದೇಹ-ಶರೀರದ, ಪರಿಶುದ್ಧಿ-ನಿರ್ಮಲೀಕರಣ, ಉಪವಾಸ ಸಹಸ್ರ-ಮಾಸೋಪವಾಸ ಸಹಸ್ರಂಗಳು, ಪಾರಣಾ-ದ್ವಾದಶಿಯ ಪಾರಣೆ ಇವುಗಳಿಂ, ಆಪಾದಿತ-ಸಂಪಾದಿಸಲ್ಪಟ್ಟ,

ಟಿಪ್ಪಣಿ—ಭಕ್ತಸ್ಥಲವೇ ವಿಶಿಷ್ಟಾಚರಣಸಂಪನ್ನತೆಯಿಂದ ಮಾಹೇಶ್ವರಸ್ಥಲವಾಗುವುದು. ಆ ಮಾಹೇಶ್ವರಸ್ಥಲವೇ ಮನೋನೈರ್ಮಲ್ಯದ ಸಂಬಂಧದಿಂದ ಪ್ರಸಾದಿಸ್ಥಲವಾಗುವುದು. ಆ ಪ್ರಸಾದಿಸ್ಥಲವೇ ಜ್ಞಾನಯೋಗದಿಂದ ಪ್ರಾಣಲಿಂಗಿಸ್ಥಲವಾಗುವುದು. ಆ ಪ್ರಾಣಲಿಂಗಿಸ್ಥಲವೇ ಶರಣಸತಿ ಲಿಂಗಪತಿಭಾವದಿಂದ ಲಿಂಗಾಂಗಸಾಮರಸ್ಯ ಸೌಖ್ಯವನ್ನನುಭವಿಸುತ್ತ ಬಾಹ್ಯವ್ಯಾಪಾರವನ್ನು ಮರೆತಿರುವುದರಿಂದ ಶರಣಸ್ಥಲವಾಗುವುದು. ಆ ಶರಣಸ್ಥಲವೇ ಶಿವಲಿಂಗದಲ್ಲಿ ಐಕ್ಯವನ್ನೈದಿ ಭಿನ್ನಭಾವವನ್ನಳಿದಿರುವುದರಿಂದ ಐಕ್ಯಸ್ಥಲವಾಗುವುದು. ಆದುಕಾರಣ, ಸ್ವಸ್ವರೂಪಸಾಕ್ಷಾತ್ಕಾರವುಳ್ಳ ಶರಣನಿಗೆ ಮೇಲೆಹೇಳಿದ ಷಟ್ಸ್ಥಲಾಚರಣೆಯೆಲ್ಲಾ ಒಂದೇ ಆಗಿರುವುದು. ||೨೫||

ಅವತಾರಿಕೆ—ಇಂತು ಆಚಾರ್ಯಂ ಸ್ವಮತಸ್ಥಾಪನೆಯಂಮಾಡಿ, ಎಲ್ಲಿಪರ್ಯಂತ ಪರಮತತಿರಸ್ಕಾರವಾಗಲಿಲ್ಲ ಅಲ್ಲಿಪರ್ಯಂತವೂ ಸ್ವಮತಸ್ಥಾಪನೆಯಾಗಲಿಲ್ಲವೆಂಬ ನ್ಯಾಯದಿಂ ಪರಮತಗಳಂ ಖಂಡಿಸುವಲ್ಲಿ ಮೊದಲಾಸಿದ್ಧಾಂತಿಯ ಮತವಂ ಖಂಡಿಸುತ್ತಿರ್ದಪಂ.—

ಶ್ವಪಚನ ದೈವ ದಂತರಮ ನೊರ್ಮೆ ವಿಚಾರಿಸಿ ನೋಡೆ ಲೋಕದೊಳ್ |
ಶ್ವಪಚನೆ ಬಲ್ಪಲಾ ಜನದ ಬುದ್ಧಿಗೆ ದೈವಮ ನೊಲ್ದುಮುಟ್ಟಿದ ||
ಲ್ಲಿಪರಮಶುದ್ಧತಾಸ್ಮರಣೆ ಯಿಲ್ಲ ದಶುದ್ಧ ಸಲೇಪಭಾವಮಾ |
ಶ್ವಪಚನ ತಟ್ಟುಮುಟ್ಟಿ ನೆಡೆಯಲ್ಲಿಯೆ ಬರ್ಪುದರಿಂ ಶಿವಾಧವಾ ||೨೬||

ಟೀಕೆ—ಜನದ-ಸಿದ್ಧಾಂತಿಜನದ, ಬುದ್ಧಿಗೆ-ಮತಿಗೆ, ಪರಮಶುದ್ಧತಾಸ್ಮರಣೆಯಿಲ್ಲದೆ-ಮಹಾಪರಿಶುದ್ಧಿಯಾಯಿತೆಂಬ ಭಾವದ ನೆನಹಿಲ್ಲದೆ, ದೈವಮಂ-ಇಷ್ಟಲಿಂಗಮಾತ್ರವನ್ನು, ಒಲ್ದು-ಚೆನ್ನಾಗಿ, ಮುಟ್ಟಿದಲ್ಲಿ-ಸ್ಥೂಲತನುವಿನಲ್ಲಿ ಧರಿಸಿದಲ್ಲಿ, ಅಶುದ್ಧ ಸಲೇಪಭಾವಂ-ಅಪವಿತ್ರವಾದ ಪಾಪಲೇಪಭಾವವು, ಆಶ್ವಪಚನ-ಆ ಚಂಡಾಲನ, ತಟ್ಟುಮುಟ್ಟಿನ-ಸೋಂಕಿನ, ಎಡೆಯಲ್ಲಿಯೆ, ಬರ್ಪುದರಿಂ-ಬರುವುದರಿಂದೆ, ಲೋಕದೊಳ್-ಜಗತ್ತಿನಲ್ಲಿ, ಶ್ವಪಚನ-ಚಂಡಾಲನ, ದೈವದ-ಆ ಸಿದ್ಧಾಂತಿಯ ಇಷ್ಟಲಿಂಗದ, ಅಂತರಮಂ-ತಾರತಮ್ಯವನು, ಒರ್ಮೆ-ಒಂದುವೇಳೆ, ವಿಚಾರಿಸಿ ನೋಡೆ-ಆರೈದುನೋಡಲಾಗಿ, ಶ್ವಪಚನೆ-ಆ ಚಂಡಾಲನೇ, ಬಲ್ಪಲಾ-ವೆಗ್ಗಳವಲಾ (ಅಂಗದಮೇಲೆ ಲಿಂಗಸಂಬಂಧವಾಗಿ ಲಿಂಗಭಾವವೆಡೆಗೊಳ್ಳದೆ ಮಲಿನಭಾವಿಯಾಗಿ ಪೊರ್ದೆಡೆ ಆ ಲಿಂಗಧಾರಣಂ ವ್ಯರ್ಥವೆಂಬುದಭಿಪ್ರಾಯವು). ||೨೬||

ಟಿಪ್ಪಣಿ—ಕರ್ಮಭ್ರಾಂತರಾದ ಜನರ ಆಚರಣೆಯನ್ನು ನೋಡಿದರೆ, ಅವರಬುದ್ಧಿಗೆ ದೈವಕ್ಕಿಂತಲೂ ಚಂಡಾಲನೇ ಬಲ್ಲಿದನೆಂದು ತೋರಿರುವಂತೆ ಕಾಣುತ್ತದೆ. ಏಕೆಂದರೆ—ತನ್ನಲ್ಲಿ ಇಷ್ಟಲಿಂಗಸಂಬಂಧವಿರುವಾಗ ತಾನು ಯಾವಾಗಲೂ ಪರಿಶುದ್ಧನಾಗಿರುವೆನೆಂಬ ಭಾವವು ಇಲ್ಲದೆ ಚಂಡಾಲನು ತನ್ನನ್ನು ಸೋಂಕಿದಮಾತ್ರದಿಂದಲೇ ತನಗೆ ಅಶುಚಿತ್ವವು ಬರುವುದೆಂದು ತಿಳಿಯುವನು. ಪರಿಶುದ್ಧಭಾವವನ್ನುಂಟುಮಾಡುವ ದೈವಸಂಬಂಧಕ್ಕಿಂತಲೂ ಚಂಡಾಲನ ಸ್ಪರ್ಶದಲ್ಲಿ ಅಧಿಕಶಕ್ತಿಯಿರುವುದೆಂದು ಭಾವಿಸಿದಂತಾಯಿತೆಂದು ಅಭಿಪ್ರಾಯ. ||೨೬||

ವ್ರತನಿಯಮೋಪವಾಸವಿಧಿಮುಖ್ಯಸಮಸ್ತವಿಧಾನಸತ್ಕ್ರಿಯೋ |
ಚಿತವಿವಿಧಾಗಮಾಚರಣೆ ನೋಳ್ಪೊಡೆ ಲಿಂಗವಿಹೀನರಾದವ ||
ರ್ಗತಿಶಯಧರ್ಮ ಮಲ್ಲದೆ ಸದಾಶಿವಲಿಂಗಸಮಾಹಿತರ್ಗೆ ನಿ |
ಶ್ಚಿತವಹಧರ್ಮಮಲ್ಲ ಪರಮಾರ್ಥನಿರೂಪಣದಿಂ ಶಿವಾಧವಾ ||೨೭||

ಟೀಕೆ—ವ್ರತನಿಯಮೋಪವಾಸವಿಧಿಮುಖ್ಯಸಮಸ್ತವಿಧಾನಸತ್ಕ್ರಿಯೋಚಿತವಿವಿಧಾಗಮಾಚರಣೆ-ವ್ರತ-ಚಾಂದ್ರಾಯಣಾದಿವ್ರತಂಗಳು, ನಿಯಮ-ಪ್ರಾಣಾಯಾಮ ಮೊದಲಾದುವು, ಉಪವಾಸವಿಧಿ-ಏಕಾದಶ್ಯುಪವಾಸವಿಧಾನ ಮೊದಲಾದುವು, ಮುಖ್ಯ-ಇವು ಮೊದಲಾದ, ಸಮಸ್ತವಿಧಾನ-ಸಕಲವಿಧಗಳ, ಸತ್ಕ್ರಿಯಾ-ಸತ್ಕರ್ಮಗಳಿಗೆ, ಉಚಿತ-ತಕ್ಕಂಥ, ವಿವಿಧ-ಹಲವುತೆರನಾದ, ಆಗಮ-ಆಗಮಗಳ, ಆಚರಣೆ-ನಡವಳಿಯು, ನೋಳ್ಪೊಡೆ-ವಿಚಾರಿಸಲಾಗಿ, ಲಿಂಗವಿಹೀನರಾದವರ್ಗೆ-ಲಿಂಗಸಂಬಂಧವಿಲ್ಲದವರ್ಗೆ, ಅತಿಶಯಧರ್ಮಮಲ್ಲದೆ-ಮಿಗಿಲಾದಧರ್ಮವಲ್ಲದೆ, ಸದಾ-ಯಾವಾಗಲೂ, ಶಿವಲಿಂಗಸಮಾಹಿತರ್ಗೆ-ಶಿವಲಿಂಗಸಂಬಂಧವುಳ್ಳವರ್ಗೆ, ಪರಮಾರ್ಥನಿರೂಪಣದಿಂ-ಯಥಾರ್ಥವಾಕ್ಯದಿಂ, ನಿಶ್ಚಿತವಹ-ನಿಶ್ಚೈಸಲ್ಪಟ್ಟ, ಧರ್ಮಮಲ್ಲ-ಆಚರಣೆಯಲ್ಲ. ||೨೭||

ಟಿಪ್ಪಣಿ—ವಿಚಾರಮಾಡಿನೋಡಿದರೆ ಚಾಂದ್ರಾಯಣಾದಿವ್ರತಗಳು, ಪ್ರಾಣಾಯಾಮಾದಿ ನಿಯಮಗಳು, ಉಪವಾಸಗಳು ಮೊದಲಾದ ಕಾಮ್ಯಕರ್ಮಸಂಬಂಧವಾದ ಆಚರಣೆಗಳು ಲಿಂಗವಿಹೀನರಾದ ಭವಿಗಳಿಗೆ ಉತ್ಕೃಷ್ಟವಾದ ಧರ್ಮವಾಗಿರುವುದೇ ಹೊರತು ಲಿಂಗಾಂಗಸಂಗಿಗಳಿಗೆ ಅವು ತತ್ತ್ವಾರ್ಥವಿಚಾರದಿಂ ಸಿದ್ಧಾಂತವಾದ ಆಚರಣೆಯಾಗಿರುವುದಿಲ್ಲ. ||೨೭||

ಅದೊಡೆ ನಿಲ್ಲು ತೀರ್ಥಜಲಮಜ್ಜನ ಮುಂಡನ ದಂತಧಾವನಾ |
ಚ್ಛಾದನ ಧೋತ್ರದೇಹಪರಿಶುದ್ಧ್ಯುಪವಾಸ ಸಹಸ್ರ ಪಾರಣಾ ||
ಪಾದಿತನಿತ್ಯಕರ್ಮವಿಧಿ ನೋಳ್ಪೊಡೆ ಮುಂಡೆಗೆ ಯೋಗ್ಯಮೈಸೆ ಮು |
ತ್ತೈದೆಗೆ ಯೋಗ್ಯಮಲ್ಲ ಸತತಂ ಪತಿಭಕ್ತಿಯಿರಲ್ ಶಿವಾಧವಾ ||೨೮||

ಟೀಕೆ—ಆದೊಡೆ-ಎಲೆವೈದಿಕಾ ನೀನಾಚರಿಸುವ ಕರ್ಮಮಾರ್ಗಂ ನಿಶ್ಚಯವೆಂಬೆಯಾದೊಡೆ, ನಿಲ್ಲು-ತಾಳು, ತೀರ್ಥಜಲಮಜ್ಜನ ಮುಂಡನದಂತದಾವನಾಛ್ಛಾದನಧೋತ್ರದೇಹಪರಿಶುದ್ಧ್ಯುಪವಾಸಸಹಸ್ರಪಾರಣಾಪಾದಿತ ನಿತ್ಯಕರ್ಮವಿಧಿ-ತೀರ್ಥಜಲ-ಪುಣ್ಯತೀರ್ಥೋದಕದಲ್ಲಿಯ, ಮಜ್ಜನ-ಸ್ನಾನ, ಮುಂಡನ-ವಪನ, ದಂತಧಾವನ-ಪಲ್ಗಳ ಶುದ್ಧಿ, ಆಚ್ಛಾದನ-ಹೊದಿಕೆ, ಧೋತ್ರ-ಉಟ್ಟವಸ್ತ್ರದ, ದೇಹ-ಶರೀರದ, ಪರಿಶುದ್ಧಿ-ನಿರ್ಮಲೀಕರಣ, ಉಪವಾಸ ಸಹಸ್ರ-ಮಾಸೋಪವಾಸ ಸಹಸ್ರಂಗಳು, ಪಾರಣಾ-ದ್ವಾದಶಿಯ ಪಾರಣೆ ಇವುಗಳಿಂ, ಆಪಾದಿತ-ಸಂಪಾದಿಸಲ್ಪಟ್ಟ,

ನಿತ್ಯಕರ್ಮ-ಸಂಧ್ಯಾವಂದನಾದಿ ನಿತ್ಯಕರ್ಮದ, ವಿಧಿ-ಅನುಷ್ಠಾನವು, ನೋಳ್ಪೊಡೆ-ವಿಚಾರಿಸಲಾಗಿ, ಮುಂಡೆಗೆ-ರಂಡೆಗೆ, ಯೋಗ್ಯಮೈಸೆ-ಯೋಗ್ಯವಷ್ಟೆ? ಸತತಂ-ಆವಾಗಳೂ, ಪತಿಭಕ್ತಿಯಿರಲ್-ಪುರುಷಭಕ್ತಿಯಿರಲಾಗಿ, ಮುತ್ತೈದೆಗೆ, ಯೋಗ್ಯಮಲ್ಲ-ತಕ್ಕುದಲ್ಲ (ಶರಣಸತಿಲಿಂಗಪತಿಯೆಂಬ ಭಾವದಿಂದಾಚರಿಸುವಶರಣಂಗೆ ವೈದಿಕ ಕಾಮ್ಯಕರ್ಮಂ ಯೋಗ್ಯಮಲ್ಲವೆಂದು ತಾತ್ಪರ್ಯಂ). ||೨೮||

ಟಿಪ್ಪಣಿ—ಎಲೆಕರ್ಮವಾದಿಯೆ, ಆ ಉಪವಾಸಾದಿವ್ರತಗಳೇ ಕರ್ತವ್ಯಗಳೆಂದು ಹೇಳುವ ಯಾದರೆ, ತಡೆ, ಪತಿಯೇದೈವವೆಂದು ತಿಳಿದಿರುವ ಮುತ್ತೈದೆಯು ಪತಿಯಪ್ಪಣೆಯ ಹೊರತು ತೀರ್ಥಜಲಸ್ನಾನ, ತಲೆಬೋಳಿಸುವಿಕೆ, ಉಪವಾಸ, ಪಾರಣೆ, ವೊದಲಾದುವುಗಳನ್ನು ಎಂದಿಗೂ ಮಾಡುವುದಿಲ್ಲವಾದುದರಿಂದ ಅವೆಲ್ಲಾ ಮುಂಡೆಯಾಚರಿಸತಕ್ಕ ಧರ್ಮಗಳು. ಅದರಂತೆಯೇ "ತಾನು ಸತಿ ಲಿಂಗವು ಪತಿ" ಯೆಂದು ತಿಳಿದಿರುವ ಶರಣರಿಗೆ ಶಿವೈಕಾಯತ್ತವಾದ ಆಚರಣೆಯ ಹೊರತು ಬೇರೆ ವ್ರತೋಪವಾಸಾದಿಗಳನ್ನು ಮಾಡುವುದು ಅಧರ್ಮವೆಂದು ಭಾವವು. ||೨೮||

ಅರಿಸಿನ ಗಂಧ ಚಂದ್ರ ಕಚಮಾಲ್ಯ ವಿಲೇಪನ ವಸ್ತ್ರಭೂಷಣೋ |
ತ್ಕರರಚನಾವಿಲಾಸಮಯಶೋಭೆ ವಿಚಾರಿಸೆ ಗಂಡನುಳ್ಳ ಚೆ ||
ಲ್ವರಸಿಗೆ ಯೋಗ್ಯಮೋ ಬಣಗುಮುಂಡೆಗೆ ಯೋಗ್ಯಮೊ ಲಿಂಗಸಂಗತ |
ತ್ಪರಶರಣಂಗೆ ಸರ್ವವಿಧಭೋಗ ಸುಖಂ ಪೆರತೇಂ ಶಿವಾಧವಾ ||೨೯||

ಟೀಕೆ—ಅರಿಸಿನ ಗಂಧ ಚಂದ್ರ ಕಚಮಾಲ್ಯ ವಿಲೇಪನವಸ್ತ್ರಭೂಷಣೋತ್ಕರರಚನಾವಿಲಾಸಮಯಶೋಭೆ-ಅರಿಸಿನ-ಅರಿಸಿನದ ತಿಗುರಿನ, ಗಂಧ-ಚಂದನದ, ಚಂದ್ರ-ಬೈತಲೆಯಚಂದ್ರದ, ಕಚಮಾಲ್ಯ-ಮುಡಿದಂಡೆಯ, ವಿಲೇಪನ-ಅಂಗರಾಗದ, ವಸ್ತ್ರ-ಉಡಿಗೆಯ, ಭೂಷಣ-ತೊಡಿಗೆಯ, ಉತ್ಕರ-ಸಮೂಹಂಗಳ, ರಚನಾ-ಅಲಂಕಾರದ, ವಿಲಾಸಮಯ-ವಿಲಾಸದಿಂದವೆಗ್ಗಳಮಾದ, ಶೋಭೆ-ಕಾಂತಿಯು, ವಿಚಾರಿಸೆ-ವಿಚಾರಿಸಲಾಗಿ, ಗಂಡನುಳ್ಳ-ಪುರುಷನುಳ್ಳ, ಚೆಲ್ವರಸಿಗೆ-ಸೊಬಗಿಯಾದಸ್ತ್ರೀಗೆ, ಯೋಗ್ಯಮೊ-ಉಚಿತವೊ? ಬಣಗುಮುಂಡೆಗೆ-ಲಜ್ಜೆಯಿಲ್ಲದ ಮುಂಡೆಗೆ, ಯೋಗ್ಯಮೊ? (ಇಂತೆಂಬ ವಿಕಲ್ಪದಲ್ಲಿ, ಮುತ್ತೈದೆಗೆ ಯೋಗ್ಯವಲ್ಲದೆ ಮುಂಡೆಗೆ ಯೋಗ್ಯವಲ್ಲವೆಂಬುದರ್ಥ) ಸರ್ವವಿಧ ಭೋಗಸುಖಂ-ಲಿಂಗಮುಖವಾದನೇಕವಿಷಯ ಸುಖವು, ಲಿಂಗಸಂಗತತ್ಪರಶರಣಂಗೆ-ಲಿಂಗಸಂಗದಲ್ಲಿ ಎರಕವುಳ್ಳ, ಶರಣಂಗೆ, ಪೆರತೇಂ-ಬೇರೆಯೆ? ಬೇರಲ್ಲವೆಂಬುದರ್ಥ. ||೨೯||

ಟಿಪ್ಪಣಿ—ಅರಿಸಿನ ಹೂವು ಗಂಧ ಒಡವೆ ವಸ್ತ್ರ ವೊದಲಾದುವುಗಳನ್ನಲಂಕರಿಸಿ ಮೆರೆಯುವುದು ಗಂಡನುಳ್ಳ ಮುತ್ತೈದೆಗೆ ಒಪ್ಪುವುದೇ ಹೊರತು ಮುಂಡೆಗೆ ಯೋಗ್ಯವಲ್ಲದಿರುವಂತೆ, ಲಿಂಗಾಂಗ ಸಂಬಂಧಯುಕ್ತವಾಗಿರುವ ಶರಣನು ಸಕಲೇಂದ್ರಿಯಮುಖಾಗತವಾದ ಸೌಖ್ಯವನ್ನೂ ಅನುಭವಿಸುವುದಕ್ಕೆ ಅರ್ಹನಾಗಿರುವನು. ||೨೯||

ಅವತಾರಿಕೆ—ಇಂತು ಸಿದ್ಧಾಂತಿಯ ಮತಮಂ ಖಂಡಿಸಿ, ಒಣವಾಗದ್ವೈತಿಯ ಮತಮಂ ದೂಷಿಸುತ್ತಿರ್ದಪಂ.—

ಭ್ರಮಿಸದೆ ಮಾಣ್ಬರೇ ಬಯಲ ಬೊಮ್ಮದ ಹಮ್ಮಿನ ಬಿಮ್ಮುಹತ್ತಿ ಏ |
ಶ್ರಮಿಸುವ ಭೇದಮಂ ತಿಳಿಯಲೊಲ್ಲದೆ ಯೋಗಿಗಳೆಂದು ದೃಷ್ಟಯೋ ||
ಗಮೆನಿಪಲಿಂಗಧಾರಣಸಮರ್ಚನಚಿಂತನನಿಶ್ಚಿತಕ್ರಿಯಾ |
ಶ್ರಮಶಿವದೀಕ್ಷೆ ಯಿಲ್ಲದಿಹ ಮರ್ತ್ಯಜನ ರ್ಭವದೊಳ್ ಶಿವಾಧವಾ ||೩೦||

ಟೀಕೆ—ದೃಷ್ಟಯೋಗಮೆನಿಪ, ಪ್ರತ್ಯಕ್ಷಮಪ್ಪ ಶಿವಯೋಗವೆನಿಸುವ, ಲಿಂಗಧಾರಣ ಸಮರ್ಚನಚಿಂತನ ನಿಶ್ಚಿತಕ್ರಿಯಾಶ್ರಮಶಿವದೀಕ್ಷೆಯಿಲ್ಲದಿಹ-ಲಿಂಗಧಾರಣ-ಲಿಂಗಾಂಗ ಸಂಬಂಧದಿಂ, ಸಮರ್ಚನ-ಶಿವಪೂಜೆಯಿಂ, ಚಿಂತನ-ಶಿವಸ್ಮರಣೆಯಿಂ, ನಿಶ್ಚಿತ-ನಿರ್ಣೈಸಲ್ಪಟ್ಟ, ಕ್ರಿಯಾ-ಸತ್ಕ್ರಿಯೆಗಳ್ಗೆ, ಆಶ್ರಮ-ಸ್ಥಾನವಾದ ಶಿವದೀಕ್ಷೆಯಿಲ್ಲದಿಹ-ವೀರಶೈವದೀಕ್ಷೆಯಿಲ್ಲದಿರ್ಪ, ಮರ್ತ್ಯಜನರ್-ಸೊಕ್ಕಿದಜನರು, ಏಶ್ರಮಿಸುವ-ಲಿಂಗಸುಖದಲ್ಲಿ ಪರಿಣಮಿಸುವ ಭೇದಮಂ, ತಿಳಿಯಲೊಲ್ಲದೆ-ಅರಿಯಲೊಲ್ಲದೆ, ಬಯಲ-ವ್ಯರ್ಥವಾದ, ಬೊಮ್ಮದಹಮ್ಮಿನ-ಬ್ರಹ್ಮ ಏದನಾದೆನೆಂಬಹಂಕಾರದ, ಬಿಮ್ಮು-ಮರವೆ, ಹತ್ತಿ-ತಲೆಗೇರಿ, ಯೋಗಿಗಳೆಂದು-ತಾವುಯೋಗಿಗಳೆಂದು, ಭವದೊಳ್-ಸಂಸಾರದಲ್ಲಿ, ಭ್ರಮಿಸದೆ ಮಾಣ್ಬರೆ-ತಿರುಗದಿರ್ಪರೆ? ತಿರುಗುವರೆಂಬುದರ್ಥ. ||೩೦||

ಟಿಪ್ಪಣಿ—ಪ್ರತ್ಯಕ್ಷ ಶಿವಯೋಗವಾಗಿರುವ ಲಿಂಗಧಾರಣ ಪೂಜನ ಧ್ಯಾನ ಮೊದಲಾದುವುಗಳಿಗೆ ಆಶ್ರಯವಾದ ಶಿವದೀಕ್ಷೆಯನ್ನು ಹೊಂದದೆಯಿರುವ ಗರ್ವಾಂಧಜನರು ಲಿಂಗಸುಖಪರಿಣಾಮಿಗಳಾಗುವ ರೀತಿಯನ್ನರಿಯದೆ, ಶೂನ್ಯಬ್ರಹ್ಮವೇತಾನಾದೆನೆಂಬ ಅಹಂಕಾರದಿಂದ ಬೀಗುತ್ತ, ತಾವು ಯೋಗಿಗಳೆಂದು ಹೇಳಿಕೊಳ್ಳುತ್ತಿರುವರು. ಇಂಥವರು ಸಂಸಾರಚಕ್ರದಲ್ಲಿಸಿಕ್ಕಿ ತಿರುಗದೆಯಿರುವರೆ? ||೩೦||

ದೃಷ್ಟದ ಲಿಂಗಧಾರಣ ಸಮರ್ಚನ ಚಿಂತನ ಮಿಲ್ಲ ದಾಗಮ |
ಭ್ರಷ್ಟರಿ ಗಂತರಾನುಪಮಚಿದ್ಘನರೂಪ ಮಹಾತ್ಮಲಿಂಗ ಮ ||
ಸ್ಪಷ್ಟ ಮದೃಶ್ಯ ಮಧ್ರುವ ಮಪೂಜ್ಯ ಮಗೋಚರ ಮಿಷ್ಟಲಿಂಗನಿ |
ರ್ದಿಷ್ಟಬಹಿಷ್ಕ್ರಿಯಾಪರರಿ ಗಂತರ ಸಿದ್ಧಿ ದಿಟಂ ಶಿವಾಧವಾ ||೩೧||

ಟೀಕೆ—ಅಂತರಾನುಪಮಚಿದ್ಘನರೂಪಮಹಾತ್ಮಲಿಂಗಂ-ಅಂತರ-ಅಂತಃಕರಣದಲ್ಲಿ, ಅನುಪಮ-ಸರಿಯಿಲ್ಲದಂಥ, ಚಿದ್ಘನರೂಪ-ಜ್ಞಾನದಿಂದಟ್ಟಿತ್ತಾದ ಸ್ವರೂಪವನುಳ್ಳ, ಮಹಾಲಿಂಗಂ-ದೊಡ್ಡಿತ್ತಾದ ಪ್ರಾಣಲಿಂಗವು, ದೃಷ್ಟದ-ಪ್ರತ್ಯಕ್ಷವಾದ, ಲಿಂಗಧಾರಣಸಮರ್ಚನಚಿಂತನಂ-ಲಿಂಗಧಾರಣ-ಲಿಂಗಾಂಗಸಂಬಂಧವು, ಸಮರ್ಚನ-ಶಿವಪೂಜೆಯು, ಚಿಂತನಂ-ಶಿವಲಿಂಗದ ಸ್ಮರಣೆಯು, ಇಲ್ಲದ-ರಹಿತರಾದ,

ಆಗಮಭ್ರಷ್ಟರಿಗೆ-ಶಿವಾಗಮದತ್ತಣಿಂ ಜಗುಳಿಬಿದ್ದವರಿಗೆ, ಅಸ್ಪಷ್ಟಂ-ವ್ಯಕ್ತವಲ್ಲ, ಅದೃಶ್ಯಂ-ಪ್ರತ್ಯಕ್ಷದಿಂಕಾಣಿಸಿಕೊಳ್ಳದು, ಅಧ್ರುವಂ-ನಿಶ್ಚಯವಾಗದು, ಅಪೂಜ್ಯಂ-ಪೂಜಿಸಿಕೊಳ್ಳದು, ಅಗೋಚರಂ-ಮನಸ್ಸಿಗೂ ಕಾಣಿಸಿಕೊಳ್ಳದು, ಅಂತರಸಿದ್ಧಿ-ಅಂತಃಕರಣದಲ್ಲಿ ಪ್ರಾಣಲಿಂಗಸಂಬಂಧನಿಷ್ಪತ್ತಿಯು; ಇಷ್ಟಲಿಂಗನಿರ್ದಿಷ್ಟ ಬಹಿಷ್ಕ್ರಿಯಾಪರರಿಗೆ-ಇಷ್ಟಲಿಂಗ-ಇಷ್ಟಲಿಂಗದಲ್ಲಿ, ನಿರ್ದಿಷ್ಟ-ಸಮರ್ಪಿಸಲ್ಪಟ್ಟ, ಬಹಿಷ್ಕ್ರಿಯಾ-ಬಾಹ್ಯಪೂಜೆಯಲ್ಲಿ, ಪರರಿಗೆ-ತಾತ್ಪರ್ಯವುಳ್ಳವರಿಗೆ, ದಿಟಂ-ಸಾಧ್ಯವು (ಇಷ್ಟಲಿಂಗದಲ್ಲಿ ಸತ್ಕ್ರಿಯಾಸಂಪನ್ನರಾದವರ್ಗಲ್ಲದೆ ಪ್ರಾಣಲಿಂಗಸಂಬಂಧವಿಲ್ಲೆಂಬುದಭಿಪ್ರಾಯಂ). ||೩೧||

ಟಿಪ್ಪಣಿ—ಪ್ರತ್ಯಕ್ಷವಾದ ಇಷ್ಟಲಿಂಗವನ್ನು ಧರಿಸಿಕೊಂಡು, ಅದರ ಪೂಜಾಧ್ಯಾನಗಳನ್ನು ಮಾಡದಿರುವ ಶಿವಾಗಮದೂರರಾದವರಿಗೆ, ಅಸದೃಶವಾದ, ಜ್ಞಾನಸ್ವರೂಪವಾದ, ಅಂತರ್ಗತವಾದ ಪ್ರಾಣಲಿಂಗವು ವ್ಯಕ್ತವಾಗುವುದಿಲ್ಲ, ಕಾಣಿಸುವುದಿಲ್ಲ, ಸ್ಥಿರವಾಗುವುದಿಲ್ಲ, ಪೂಜಾಯೋಗ್ಯವಾಗುವುದಿಲ್ಲ, ಮನಸ್ಸಿಗೆ ನಿಲುಕುವುದಿಲ್ಲ. ಮತ್ತೇನೆಂದರೆ—ಯಾರು, ಬಾಹ್ಯವ್ಯಾಪಾರಗಳನ್ನೆಲ್ಲಾ ಇಷ್ಟಲಿಂಗಕ್ಕೆ ಅರ್ಪಿಸುವ ಅವಧಾನವುಳ್ಳವರೋ ಅಂಥವರಿಗೆ ಮಾತ್ರವೇ ಪ್ರಾಣಲಿಂಗವು ಗೋಚರಿಸುವುದು. ||೩೧||

ಕನಸಿನೊ ಳೊರ್ವ ನಿಂದ್ರಪದಭೋಗವಿಶಿಷ್ಟಸುಖಾನುರಾಗದಿಂ |
ಘನಪರಿಣಾಮಿ ಯಾಗಿರುತಿಹನ್ನಬರೊಯ್ಯನೆ ನಿದ್ರೆ ತೀರೆ ಮು ||
ನ್ನಿನ ಪರಿಯಂತೆ ತಾನಿಹ ದರಿದ್ರತೆಯಂ ನೆರೆ ಕಂಡು ದುಃಖದಿಂ |
ಪುನರಪಿ ನಿದ್ರೆಗೆಯ್ಯ ಲದು ತಪ್ಪದೆ ಬರ್ಪುದೆ ಪೇಳ್ ಶಿವಾಧವಾ ||೩೨||

ಟೀಕೆ—ಒರ್ವಂ-ಒಬ್ಬಮನುಷ್ಯನು, ಕನಸಿನೊಳ್-ಸ್ವಪ್ನದಲ್ಲಿ, ಇಂದ್ರಪದಭೋಗವಿಶೇಷಸುಖಾನುರಾಗದಿಂ-ಇಂದ್ರಪದ-ದೇವೇಂದ್ರಪದದಲ್ಲಿ, ಭೋಗವಿಶೇಷ-ಮಹಾಭೋಗಂಗಳಿಂದಲಾದ, ಸುಖಾನುರಾಗದಿಂ-ಸುಖಾಸಕ್ತಿಯಿಂದ, ಘನಪರಿಣಾಮಿಯಾಗಿ-ಮಹಾಸುಖವುಳ್ಳವನಾಗಿ, ಇಹನ್ನಬರ-ಇಪ್ಪರ್ಪಪರ್ಯಂತವೂ, ಒಯ್ಯನೆ-ಮೆಲ್ಲನೆ, ನಿದ್ರೆತೀರೆ-ಎಚ್ಚರಾಗಲಾಗಿ, ಮುನ್ನಿನಪರಿಯಂತೆ-ಮೊದಲಿದ್ದ ಹಾಗೆ, ತಾನಿಹದರಿದ್ರತೆಯಂ-ತಾನನುಭವಿಸುವ ದರಿದ್ರತ್ವವನ್ನು, ನೆರೆ-ಚೆನ್ನಾಗಿ, ನೋಡಿ, ದುಃಖದಿಂ-ಶೋಕದಿಂದ, ಪುನರಪಿ ನಿದ್ರೆಗೆಯ್ಯಲು-ಮರಳಿನಿದ್ರೆಗೆಯ್ಯಲಾಗಿ, ಅದು-ಆ ಇಂದ್ರಪದಭೋಗವು, ತಪ್ಪದೆ ಬರ್ಪುದೆ-ಬಿಡದೆಬರ್ಪುದೆ? ಬಾರದೆಂಬುದರ್ಥ. ಪೇಳ್-ಎಲೆವಾದಿ ಇದಕ್ಕುತ್ತರಮಂಪೇಳು (ಇಷ್ಟಲಿಂಗಸತ್ಕ್ರಿಯೋಪಚಾರಮಿಲ್ಲದೆ ಪ್ರಾಣಲಿಂಗಸಂಬಂಧದಿಂ ಸುಜ್ಞಾನಿಯಾಗಿರ್ಪೆನೆಂದೊಡೆ ಅದು ಸ್ಥಿರವಲ್ಲವೆಂಬುದಭಿಪ್ರಾಯಂ. ||೩೨||

ಟಿಪ್ಪಣಿ—ಒಬ್ಬನು ಕನಸಿನಲ್ಲಿ ಇಂದ್ರಪದವಿಯಸುಖವನ್ನನುಭವಿಸುತ್ತಿರುವಂತೆ ಕಾಣುತ್ತಿರುವಷ್ಟರಲ್ಲಿ, ನಿದ್ರೆಯಳಿದು ಎಚ್ಚರಾಗಲು, ತಾನು ಮೊದಲಿದ್ದಂತೆಯೇ ದರಿದ್ರನಾಗಿರುವುದನ್ನು ಕಂಡು, ವ್ಯಸನಪಟ್ಟು, ಮತ್ತೆ ನಿದ್ರೆಮಾಡಲಾಗಿ, ಆ ಮೊದಲನುಭವಿಸುತ್ತಿದ್ದ ಇಂದ್ರಪದವಿಯ ಸೌಖ್ಯವು ಮತ್ತೆ ಬರುವುದೆ ? ಅದರಂತೆಯೇ ಇಷ್ಟಲಿಂಗ ಸಂಬಂಧವಿಲ್ಲದೆ ಪ್ರಾಣಲಿಂಗವನ್ನರಿತು ಸುಖಿಸುತ್ತೇನೆಂಬುದು ಸ್ವಪ್ನಸುಖಾನುಭವದಂತೆ ಅಸ್ಥಿರವು. ||೧೨||

ಚಿರಸುಖಿ ಜಾಗ್ರದೊಳ್ ನೆರೆ ಮನೋರಮೆಯಪ್ಪ ನಿಜಪ್ರಿಯಾಂಗನಾ |
ಸರಸರತಿಪ್ರಸಂಗಪರಿಣಾಮದೊಳಿರ್ಪನೆಗಂ ತದೀಯನಿ ||
ರ್ಭರಸುಖತೃಪ್ತಿ ಸುಪ್ತಿ ಯೆಡೆಗೊಂಡಿರಲಲ್ಲಿಯ ವೇಧೆಯಿಂದಮಾ |
ಪರಿಯೆ ದಿಟಂ ಪ್ರಬುದ್ಧತೆಯೊಳಂತು ಮದೇ ಸಹಜಂ ಶಿವಾಧವಾ ||೧೩||

ಟೀಕೆ—ಚಿರಸುಖಿ-ಸ್ಥಿರವಾದ ಸುಖವುಳ್ಳಾತನು, ಜಾಗ್ರದೊಳ್-ಜಾಗ್ರದವಸ್ಥೆಯಲ್ಲಿ, ನೆರೆ-ಮಿಗಿಲಾಗಿ, ಮನೋರಮೆಯಪ್ಪ-ಮನದನ್ನೆಯಾಗಿರುವ, ನಿಜಪ್ರಿಯಾಂಗನಾಸರಸರತಿಪ್ರಸಂಗಪರಿಣಾಮದೊಳ್-ನಿಜ-ತನ್ನ, ಪ್ರಿಯಾಂಗನಾ-ಇಷ್ಟಳಾದ ಸ್ತ್ರೀಯ, ಸರಸರತಿಪ್ರಸಂಗಪರಿಣಾಮದೊಳ್-ಸರಸ-ವಿನೋದದೊಡನೆ ಕೂಡಿದ, ರತಿಪ್ರಸಂಗ-ಸುರತಪ್ರಸಂಗದ, ಪರಿಣಾಮದೊಳ್-ಸುಖದಲ್ಲಿ, ಇರ್ಪನೆಗಂ-ಇಹಪರ್ಯಂತವೂ, ತದೀಯನಿರ್ಭರಸುಖತೃಪ್ತಿ-ತದೀಯ-ಆಸುರತಸಂಬಂಧವಾದ, ನಿರ್ಭರ-ನಿಬಿಡವಾದ, ಸುಖ-ಆನಂದದಿಂದಾದ, ತೃಪ್ತಿ-ಸಂತುಷ್ಟಿಯು, ಸುಪ್ತಿಯೆಡೆಗೊಂಡಿರಲ್-ನಿದ್ರೆಬರಲಾಗಿ, ಅಲ್ಲಿಯವೇಧೆಯಿಂದಂ-ಆ ಜಾಗ್ರದಲ್ಲಿಯ ಜ್ಞಾನದಿಂದ, ಆಪರಿಯೆ-ಆ ಸುಖದಿಂದಿರ್ಪುದೇ, ದಿಟಂ-ನಿಶ್ಚಯವಾಗಿರ್ಪುದು, ಪ್ರಬುದ್ಧತೆಯೊಳ್-ಎಚ್ಚರದಲ್ಲಿ, ಅಂತುಂ-ಹಾಗೂ, ಅದೇ-ಆ ಕನಸಿನಲ್ಲಿರ್ದ ಪ್ರಕಾರವೇ ಸಹಜಂ-ಸಹಜವಾಗಿರ್ಪುದು. ||೧೩||

ಟೀಕೆ—ಜಾಗ್ರದವಸ್ಥೆಯಲ್ಲಿ ತನ್ನ ಪ್ರಿಯೆಯೊಡನೆ ಕೂಡಿ ರಮಿಸಿ ಸುಖಪಡುತ್ತಿರುವವನು ನಿದ್ರಾವಸ್ಥೆಯನ್ನೈದಿದರೂ ಆ ಜಾಗ್ರದವಸ್ಥೆಯ ಸುಖಸಂಸ್ಕಾರದಿಂದ ಆಗಲೂ ಸುಖಪರಿಣಾಮಿಯಾಗಿಯೇ ಇರುವನು. ಎಚ್ಚರುಗೊಂಡಾಗಲೂ ಆ ಸ್ವಪ್ನಾವಸ್ಥೆಯ ಸುಖಭೋಗವನ್ನೇ ಸಹಜವಾಗಿಯೂ ಹೊಂದುತ್ತಿರುವನು. ಅದರಂತೆಯೇ ಇಷ್ಟಲಿಂಗ ಧಾರಣಪೂಜಾಸ್ಮರಣಾದಿಗಳಿಂದ ಸುಖಿಸುತ್ತಿರುವವನು ಆ ಸಂಸ್ಕಾರಬಲದಿಂದ ಪ್ರಾಣಲಿಂಗಜ್ಞಾನಿಯಾಗಲೂ ಶಕ್ತನಾಗುವನು ||೧೩||

ಗೋವಿನ ದೇಹದಲ್ಲಿ ಘೃತಮಿರ್ದೊಡದೇಂ ಫಲ ಮಾತ್ಮರೋಗವಿ |
ದ್ರಾವಣಪೋಷಣಪ್ರಬಲಶಕ್ತಿ ಬಹಿರ್ಗತ ಮಾದೊಡಲ್ಲದಿ ||
ಲ್ಲೀವಿಧದಿಂ ಶಿವಂ ಸಕಲಜಂತು ಶರೀರದೊಳಿರ್ಪ್ಪ ನಿರ್ದೊಡೇಂ |
ಪ್ರಾವಣಶಕ್ತಿ ಬಾಹ್ಯಸಮುಪಾಸ್ತಿಯೊಳೈಸೆಕಣಾ ಶಿವಾಧವಾ ||೧೪||

ಟೀಕೆ—ಘೃತಂ-ತುಪ್ಪವು, ಗೋವಿನದೇಹದಲ್ಲಿ-ಆಕಳ ಶರೀರದಲ್ಲಿ, ಇರ್ದೊಡೆ-ಇರುತ್ತಿರ್ದೊಡೆ, ಅದೇಂಫಲಂ-ಏನುಪ್ರಯೋಜನವು ? ಆತ್ಮರೋಗವಿದ್ರಾವಣಪೋಷಣಪ್ರಬಲಶಕ್ತಿ-ಆತ್ಮ-ಆಕಳಾದ ತನ್ನ, ರೋಗವಿದ್ರಾವಣ-ರೋಗಂಗಳ ಪರಿಹರಿಸುವಲ್ಲಿಯೂ, ಪೋಷಣ-ಪುಷ್ಟಿಯಂಮಾಡುವಲ್ಲಿಯೂ, ಪ್ರಬಲಶಕ್ತಿ-ಘನತರವಾದ ಸಾಮರ್ಥ್ಯವು, ಬಹಿರ್ಗತಮಾದೊಡಲ್ಲದೆ-ಆ ಘೃತವು ಪೊರಮಟ್ಟಲ್ಲದೆ, ಇಲ್ಲ. ಈ ವಿಧದಿಂ-ಈ ಪ್ರಕಾರದಿಂ "ಗವಾಂಸರ್ಪಿಶ್ಶರೀರಸ್ಥಂ ನಕರೋತ್ಯಾತ್ಮಪೋಷಣಂ | ನಿಸ್ಸೃತಂಕರ್ಮರಚಿತಂಪುರಸ್ತಾತ್ತಾಂತುಭೇಷಜಂ" ಎಂದು ಶಿವರಹಸ್ಯವುಂಟಾಗಿ, ಶಿವ-ಗುಣಾತೀತನಪ್ಪಶಿವನು, ಸಕಲಜಂತುಶರೀರದೊಳ್-ಸಕಲಪ್ರಾಣಿದೇಹಂಗಳಲ್ಲಿ, ಇರ್ಪಂ-ಪರಿಪೂರ್ಣನಾಗಿರ್ಪನು. ಇರ್ದೊಡೇಂ-ಇದ್ದರೆ ಪ್ರಯೋಜನವೇನು ? ಪ್ರಾವಣಶಕ್ತಿ-ಪೋಷಣಸಾಮರ್ಥ್ಯವು ("ಅವರಕ್ಷಣೆ" ಎಂಬ ಧಾತುವಿನ ಮೇಲೆ ಲ್ಯುಟ್ಪ್ರತ್ಯಯಮಾಗಿಯೂ, "ಯುವೋರನಾಕೌ" ಎಂಬ ಸೂತ್ರದಿಂ ಅನಾದೇಶಂಬಂದು "ಪ್ರ" ಎಂಬುಪಸರ್ಗಂ ಕೂಡಿ ಪ್ರಾವಣವೆಂದಾಯಿತು) ಬಾಹ್ಯಸಮುಪಾಸ್ತಿಯೊಳ್ಸೈಕಣಾ-ಬಾಹ್ಯೋಪಾಸನೆಯಲ್ಲಿ ಮಾತ್ರವೆ ತಾನೇ ಇರುವುದು ? ||೩೪||

ಟಿಪ್ಪಣಿ—ಹಸುವಿನ ದೇಹದಲ್ಲಿ ತುಪ್ಪವಿದ್ದರೇನು ? ಆದನ್ನು ಹೊರಕ್ಕೆ ತೆಗೆದು ಅಣಿಮಾಡಿದಲ್ಲದೆ, ಆ ಹಸುವಿನ ರೋಗನಿವಾರಣೆಗೂ ದೇಹರಕ್ಷಣೆಗೂ ತನ್ನಷ್ಟಿಗೆ ತಾನೇ ಅದು ಹೇಗೆ ಸಾಧಕವಾಗುವುದಿಲ್ಲವೋ, ಅದರಂತೆಯೇ, ಗುಣಾತೀತನಾದ ಪರಶಿವನು ಸಕಲ ಪ್ರಾಣಿಗಳ ಅಂತಸ್ಥನಾಗಿದ್ದರೂ, ಬಾಹ್ಯದಲ್ಲಿ ಇಷ್ಟಲಿಂಗವನ್ನು ಉಪಾಸನೆ ಮಾಡಿದಲ್ಲದೆ, ಒಳಗಿನ ಪ್ರಾಣಲಿಂಗಸೌಖ್ಯವು ತನಗೆ ಲಭಿಸಲಾರದು. ||೩೪||

ಈ ಅರ್ಥಮಂ ಮತ್ತೆಯೂ ವಿವರಿಸುತ್ತಿರ್ಪಂ.—

ಒಳಗೆ ಘೃತಸ್ವರೂಪಮಿರೆ ಭಾವಮದೇಂ ಬಹುಸಾಧನಕ್ರಿಯಾ |
ಬಳವಶಮಾಗಿ ಗೋವಿನ ಕಳೇವರದಿಂ ಪೊರಮಟ್ಟು ತಾನೆ ನಿ ||
ಶ್ಚಳಸುಖಸಿದ್ಧಿದಪ್ರಬಲಭೇಷಜ ಮಾಗಿಹವೋ ಲ್ಸ್ವಕಾಂತರಾ |
ಮಳಶಿವಲಿಂಗ ವಿಾಪರಿ ಬಹಿಸ್ಕರಿಸ ಲ್ಯುಭದಂ ಶಿವಾಧವಾ ||೩೫||

ಟೀಕೆ—ಘೃತಸ್ವರೂಪಂ-ತುಪ್ಪದಬಲ್ಮೆಯು, ಒಳಗೆ-ಗೋವಿನ ದೇಹದಲ್ಲಿ, ಇರೆ-ಇರಲಾಗಿ, ಭಾವಮದೇಂ-ಪ್ರಯೋಜನವೇನು ? ಗೋವಿನ-ಆಕಳ, ಕಳೇವರದಿಂ-ದೇಹದತ್ತಣಿಂ, ಪೊರಮಟ್ಟು-ಹೊರಹೊರಟುಬಂದು, ತಾನೆ-ಆಘೃತತಾನೇ, ಬಹುಸಾಧನಕ್ರಿಯಾಬಳವಶಮಾಗಿ-ಬಹು-ಅನೇಕವಾದ, ಸಾಧನ-ಕಾರಣಂಗಳಿಗೂ, ಕ್ರಿಯಾ-ಕಾರ್ಯಂಗಳಿಗೂ, ಬಳ-ಪುಷ್ಟಿಕರಣಕ್ಕೂ, ವಶಮಾಗಿ-ಆಧೀನಮಾಗಿ,

(ಕರೆದು ಕಾಸಿ ಹೆಪ್ಪನಿಕ್ಕಿ, ಮಥನಿಸಿ, ನವನೀತಮಂಮಾಡಿ, ಎಂಬುದರ್ಥವು) ನಿಶ್ಚ ಳಸುಖಸಿದ್ಧಿದಪ್ರಬಲಭೇಷಜಮಾಗಿಹವೋಲ್-ನಿಶ್ಚಳ-ಸ್ಥಿರವಾದ, ಸುಖ-ಸುಖದ, ಸಿದ್ಧಿ-ನಿಷ್ಪತ್ತಿಯನ್ನು, ದ-ಕೊಡುವಂಥ, ಪ್ರಬಲ-ಸತ್ವವನುಳ್ಳ, ಭೇಷಜಮಾಗಿಹ ವೋಲ್-ಔಷಧಮಾಗಿರುವಹಾಗೆ, ಸ್ವಕಾಂತರಾಮಳಶಿವಲಿಂಗಂ, ಸ್ವಕ-ತನ್ನಸಂಬಂ ಧವಾದ, ಅಂತರ-ಪ್ರಾಣಸ್ವರೂಪವಾದ, ಅಮಳ-ನಿರ್ಮಳವಾದ, ಶಿವಲಿಂಗಂ-ಶಿವ ಲಿಂಗವು, ಈಪರಿ-ಹಿಂದೆ ಹೇಳಿದರೀತಿಯಿಂದ, ಬಹಿಷ್ಕರಿಸಲ್-ಬಾಹ್ಯಕ್ಕೆಬರಲಾಗಿ, ಶುಭದಂ-ಸಂಸಾರವ್ಯಥೆಯಂಕೆಡಿಸಿ ಶಿವಸಾಮರಸ್ಯಮಂ ಕೊಡುವುದು. ||೩೫||

ಟಿಪ್ಪಣಿ—ಗೋವಿನೊಳಗೆ ತುಪ್ಪವಿದ್ದರೇನು ? ಅದರ ಶರೀರದಲ್ಲಿರುವ ಹಾಲನ್ನು ಈಚೆಗೆ ಕರೆದು, ಹೆಪ್ಪಿಟ್ಟು, ಮೊಸರನ್ನು ಕಡೆದು, ತುಪ್ಪವನ್ನು ಮಾಡಿ ಕುಡಿಸಿದಾಗ ಅದು ಆ ಗೋವಿನ ರೋಗನಿವಾರಣೆಗೂ ದೇಹಪೋಷಣೆಗೂ ಹೇಗೆ ಶಕ್ತವಾಗುವುದೋ, ಅದರಂತೆಯೇ ಗುರುವು ಆ ಪ್ರಾಣಲಿಂಗದ ಕಲೆಯನ್ನು ಇಷ್ಟಲಿಂಗದಲ್ಲಿ ಆವಾಹಿಸಿ ಕೊಟ್ಟನಂತರ ಅದನ್ನು ಉಪಾಸನೆ ಮಾಡಿದ ರೇನೆಯೇ ತನಗೆ ಪ್ರಾಣಲಿಂಗಜ್ಞಾನವೂ, ತನ್ಮೂಲಕವಾದ ಕಲ್ಯಾಣವೂ ಲಭಿಸುವುದು ||೩೫||

ಅವತಾರಿಕೆ—ಇಷ್ಟಲಿಂಗಸಂಬಂಧದಿಂ ಜೀವಭಾವಂ ಕೆಡದೆಂಬ ವೇದಾಂತಿಯ ಶಂಕೆಯಂ ಪರಿಹರಿಸುತ್ತಿರ್ದಪಂ—

ಕಾಷ್ಠದೊ ಳಿರ್ದ್ದ ವಹ್ನಿ ಮಥನೋದ್ಭವದಿಂ ತಲೆದೋರಿದಲ್ಲಿತ !
ತ್ಕಾಷ್ಠದ ಭಾವ ಮುಂಟೆ ಬಳಿ ಕಾತ್ಮನೊ ಳಿರ್ದ್ದ ಪರಾಣುಲಕ್ಷಣಾ |
ಧಿಷ್ಠಿತಲಿಂಗ ಮಾದಿಗುರುಸಂಸ್ಮೃತಿಯಿಂ ತಲೆದೋರಿದಲ್ಲಿತ |
ನ್ನಿಷ್ಠುರ ಮಾತ್ಮಲೇಪ ಪಶುಭಾವ ಮದುಂಟೆ ಬಿಡಾ ಶಿವಾಧವಾ || ||೩೬||

ಟೀಕೆ—ಕಾಷ್ಠದೊಳ್-ಕಟ್ಟಿಗೆಯಲ್ಲಿ, ಇರ್ದ, ಅಗ್ನಿ-ಬೆಂಕಿಯು, ಮಥನೋ ದ್ಭವದಿಂ-ಮಥಿಸುವುದರಿಂದಾದ ಉತ್ಪತ್ತಿಯಿಂದ, ತಲೆದೋರಿದಲ್ಲಿ-ಬಾಹ್ಯಕ್ಕೆ ಬಂದ ಲ್ಲಿ, ತತ್ಕಾಷ್ಠದಭಾವಂ-ಆ ಕಟ್ಟಿಗೆಯೆಂಬ ಭಾವನೆಯು, ಉಂಟೆ ? ಇಲ್ಲ. ಬಳಿಕ-ಮರಳಿ, ಆತ್ಮನೊಳಿರ್ದ-ಆತ್ಮನಲ್ಲಿರ್ದಂಥ, ಪರಾಣುಲಕ್ಷಣಾಧಿಷ್ಠಿತಲಿಂಗಂ-ಪರ-ಉತ್ಕೃಷ್ಟವಾದ, ಅಣುಲಕ್ಷಣ-ಸೂಕ್ಷ್ಮರೂಪಿನಿಂ, ಅಧಿಷ್ಠಿತ-ಆಶ್ರಯಿಸಲ್ಪಟ್ಟ, ಲಿಂಗಂ-ಪ್ರಾಣಲಿಂಗವು, ಆದಿಗುರುಸಂಸ್ಮೃತಿಯಿಂ-ಎಲ್ಲವಕ್ಕೂ ಮೊದಲಿಗನಾದ ಗುರುವಿನ ಸೇವೆಯಿಂದ, (ಸೃಗತೌ ಎಂಬಧಾತು.) ತಲೆದೋರಿದಲ್ಲಿ-ಪ್ರಕಟವಾದಲ್ಲಿ, ತತ್-ಆ, ನಿಷ್ಠುರಂ-ಕಠಿನವಾದಂಥ, ಅದು ಆತ್ಮಲೇಪಪಶುಭಾವಂ-ಸ್ವಸ್ವರೂಪಕ್ಕೆ ಆವರಣವಾದ ಆ ಜೀವಭಾವವು ಉಂಟೆ ? (ಇಲ್ಲವೆಂದರ್ಥ.) ಬಿಡಾ-ಬಿಡು (ಈ ಯರ್ಥದಲ್ಲಿ " ಯಥಾಕಾಷ್ಠೋದ್ಭವೋವಹ್ನಿಃ ಕಾಷ್ಠಮೇವವಿನಿರ್ದಹೇತ್ | ತಥಾ ಕರ್ಮೋದ್ಭವಂ ಜ್ಞಾನಂ ಕರ್ಮೈವಪ್ರವಿನಾಶಯೇತ್ " ಎಂದು ವಿಶೇಷಾರ್ಥಪ್ರಕಾ ಶಿಕೆಯ ವಚನಮುಂಟು).

ಟಿಪ್ಪಣಿ—ಇನ್ನು ಇಷ್ಟಲಿಂಗಧಾರಣದಿಂದ ಪಶುತ್ವವಳಿವುದೆಂಬುದನ್ನು ನಿರೂಪಿಸುವನು. ಕಟ್ಟಿಗೆಯೊಳಗಿರುವ ಬೆಂಕಿಯನ್ನು ಕಡೆದು ಹೊರಕ್ಕೆ ಹೊರಡಿಸಿಬಿಟ್ಟ ಬಳಿಕ ಆ ಬೆಂಕಿಯೂ ಕಟ್ಟಿಗೆಯೂ ಬೆಂಕಿಯೇ ಆಗುವುದಲ್ಲದೆ, ಕಟ್ಟಿಗೆಯೆಂಬ ಭಾವನೆಯು ಹೇಗಿರುವುದಿಲ್ಲವೋ, ಅದರಂತೆಯೇ ತನ್ನಲ್ಲಿರ್ಪ ಪರಮಸೂಕ್ಷ್ಮವಾದ ಪ್ರಾಣಲಿಂಗವನ್ನು ಗುರುವು ಸಂಸ್ಕಾರ ವಿಶೇಷದಿಂದ ಹೊರಕ್ಕೆ ತೆಗೆದು ಇಷ್ಟಲಿಂಗವನ್ನಾಗಿಸಿ ತೋರಿಸಿದ ಬಳಿಕ ತತ್ಸಂಬಂಧವನ್ನೈದಿದವನಲ್ಲಿ ಇನ್ನು ಪಶುತ್ವವೆಲ್ಲಿರುವುದು ? ||೩೬||

ಪೊರ ಗೊಳ ಗಾಯ್ತು ನೋಳ್ಪೊ ಡೊಳಗೇ ಪೊರಗಾಯ್ತು ಗುರೂಪದೇಶದಿಂ |
ಪೊರಗೊಳಗೆಂಬ ಸಂಶಯ ಮದಿಲ್ಲದೆ ಪೋಯ್ತು ವಿಶುಷ್ಕಕಾಷ್ಠದೊ ||
ಳ್ಮರೆವಿಡಿದಿರ್ದ್ದ ವಹ್ನಿ ಪೊರಗಾದೊಡೆ ತಾ ನೊಳಗಾಯ್ತು ಕಾಷ್ಠ ಮೊಂ |
ದರೊ ಳಿರ ದೊಂದಡಂಗೆ ಪೊರ ಗಿಲ್ಲೊ ಳಗಿಲ್ಲಕಣಾ ಶಿವಾಧವಾ ||೩೭||

ಟೀಕೆ—ಗುರೂಪದೇಶದಿಂ-ಶ್ರೀಗುರೂಪದೇಶದಿಂದೆ, ನೋಳ್ಪೊಡೆ-ವಿಚಾರಿಸಲಾಗಿ, ಒಳಗೇ-ಅಂತರಂಗದಲ್ಲಿರ್ಪ ಚಿತ್ಕಲಾಲಿಂಗವೇ, ಪೊರಗಾಯ್ತು-ಇಷ್ಟಲಿಂಗವಾಯ್ತು, ಪೊರಗು-ಬಾಹ್ಯದಲ್ಲಿರ್ಪ ಇಷ್ಟಲಿಂಗವೇ, ಒಳಗಾಯ್ತು-ಪ್ರಾಣಲಿಂಗವಾಯ್ತು, ಪೊರಗು ಒಳಗು ಎಂಬ-ಇದು ಬಾಹ್ಯವಿದಾಂತರವೆಂಬ, ಅದುಸಂಶಯಂ-ಆ ಸಂದೇಹವು, ಇಲ್ಲದೆಪೋಯ್ತು-ಅಡಗಿತು. ಅದೆಂತೆಂದೊಡೆ-ವಿಶುಷ್ಕಕಾಷ್ಠದೊಳ್-ಒಣಗಿದ ಕಟ್ಟಿಗೆಯಲ್ಲಿ, ಮರೆವಿಡಿದಿರ್ದ್ದ-ಮರೆಯಾಗಿರ್ದ್ದ, ವಹ್ನಿ-ಅಗ್ನಿಯು, ಪೊರಗಾದೊಡೆ-ಬಾಹ್ಯಕ್ಕೆಬಂದಲ್ಲಿ, ಕಾಷ್ಠಂ-ಕಟ್ಟಿಗೆಯು, ತಾಂ-ಅದು, ಒಳಗಾಯ್ತು-ಅಂತಸ್ಥವಾಯಿತು. ಪೊರಗಿಲ್ಲೊಳಗಿಲ್ಲಕಣಾ-ಪೊರಗೆಂಬಕಾಷ್ಠವೂ, ಒಳಗೆಂಬ ಅಗ್ನಿಯೂ ಇಲ್ಲದೆ ಪೋದುದು (ಗುರುಕೃಪೆಯಿಂದ ಚಿತ್ಕಲಾಲಿಂಗಮಂ ಬಾಹ್ಯಕ್ಕೆತಂದುಕೊಂಡು ಆ ಬಾಹ್ಯಲಿಂಗದಲ್ಲಿ ಸತ್ಕ್ರಿಯೋಪಚಾರಮಂ ಮಾಡಿ ಪ್ರಾಣಲಿಂಗಸಂಬಂಧಿಯಾದ ಶರಣನು ಇಷ್ಟಪ್ರಾಣವೆಂಬ ಭಾವವಿಲ್ಲದೆ ಮಹಾಲಿಂಗಸ್ವರೂಪನಾಗಿರ್ಪನೆಂಬುದಭಿಪ್ರಾಯಂ).

ಟಿಪ್ಪಣಿ—ಗುರೂಪದೇಶದಿಂದ ಅಂತರ್ಲಿಂಗವೇ ಇಷ್ಟಲಿಂಗವಾಗಿ ಪರಿಣಮಿಸಿತು ; ಹೊರಗಿನ ಇಷ್ಟಲಿಂಗವೇ ಅಂತರ್ಲಿಂಗವಾಯಿತು. ಎಂದರೆ, ಇದು ಒಳಗು ಇದು ಹೊರಗು ಎಂಬ ಸಂಶಯವು ಅಳಿದುಹೋಯಿತು. ಹೇಗೆಂದರೆ—ಕಟ್ಟಿಗೆಯೊಳಗೆ ಮರೆಯಾಗಿ ಅಡಗಿದ್ದ ಬೆಂಕಿಯನ್ನು ಕಡೆದು ಹೊರಗೆಡಹಿದ ಬಳಿಕ ಆ ಮರವೂ ಬೆಂಕಿಯ ಅಂತಸ್ಥವೇ ಆಗುವುದು. ಅವೆರಡೂ ಒಂದಾದ ಬಳಿಕ, ಇದು ಹೊರಗಾದ ಕಟ್ಟಿಗೆ, ಇದು ಒಳಗಾದ ಬೆಂಕಿಯೆಂಬ ಭೇದವೇ ಇಲ್ಲವಾಗುವುದು. ಅದರಂತೆಯೇ ಗುರುವು ಕೃಪೆಯಿಂದ ಪ್ರಾಣಲಿಂಗವನ್ನು ಬಹಿರ್ಲಿಂಗವನ್ನು ಮಾಡಿಕೊಟ್ಟ ಬಳಿಕ ಅದನ್ನು ಧರಿಸಿ ಉಪಾಸಿಸುವ ಶರಣನು ಇಷ್ಟಲಿಂಗಪ್ರಾಣಲಿಂಗವೆಂಬ ಭೇದವಿಲ್ಲದೆ ಮಹಾಲಿಂಗಸ್ವರೂಪನಾಗಿರುವನು. ||೩೭||

ಅಂತರಸಾಕ್ಷಿ ಚಿದ್ಘನಪರಾಹ್ವಯಲಿಂಗಮ ನಾದಿದೇಶಿಕಂ |
ಚಿಂತಿಸಿ ತಂದು ಬಾಹ್ಯಕರಣ ಕ್ಕುಪದೇಶಮ ನೊಲ್ದು ಮಾಡೆ ಮು ||
ನ್ನೆಂತಿರುತಿರ್ದ್ದ ದಂತುಭಯಸಂಗಶರೀರದೊ ಳೈಕ್ಯಮಾಗಿ ವಿ |
ಶ್ರಾಂತಿಯ ನೆಯ್ದಿದಲ್ಲಿ ಬಳಿ ಕೇನೆನಬರ್ಪುದದಂ ಶಿವಾಧವಾ ||೩೮||

ಟೀಕೆ—ಆದಿದೇಶಿಕಂ-ಎಲ್ಲಕ್ಕೂ ಮೊದಲಿಗನಾದ ಶ್ರೀಗುರುವು, ಅಂತರ ಸಾಕ್ಷಿಚಿದ್ಘನಪರಾಹ್ವಯಲಿಂಗಮಂ-ಅಂತರಸಾಕ್ಷಿ-ಪ್ರಾಣಕ್ಕೆ ಸಾಕ್ಷಿಯಾಗಿ ರ್ಪ್ಪಂಥ, ಚಿದ್ಘನ-ಜ್ಞಾನದಿಂದಟ್ಟಿತ್ತಾದಂಥ, ಪರಾಹ್ವಯಲಿಂಗಮಂ-ಪರಮಾತ್ಮ ನೆಂಬ ಪೆಸರನುಳ್ಳಲಿಂಗವನ್ನು, ಚಿಂತಿಸಿ-ನೆನೆದು, ಬಾಹ್ಯಕರಣಕ್ಕೆ-ಬಾಹ್ಯಕ್ರಿಯೆಗೆ, ತಂದು-ತಂದಾತನಾಗಿ, ಒಲ್ದು-ಪ್ರೀತಿಸಿ, ಉಪದೇಶಮಂಮಾಡೆ-ಕ್ರಿಯಾದೀಕ್ಷೆಯಂ ಮಾಡಲಾಗಿ, ಮುನ್ನ-ಮೊದಲು, ಎಂತಿರುತಿರ್ದುದು-ಹೇಗಿರುತ್ತಿರ್ದುದೋ, ಅಂತೆ-ಹಾಗೆ, ಉಭಯಸಂಗಶರೀರದೊಳ್-ಜ್ಞಾನಕ್ರಿಯಾತ್ಮಕವಾದ ಶರೀರದಲ್ಲಿ, ಐಕ್ಯಮಾಗಿ-ಏಕತ್ವವನ್ನೈದಿ, ವಿಶ್ರಾಂತಿಯನ್ನೈದಿದಲ್ಲಿ-ಕ್ರಿಯಾನಿಷ್ಪತ್ತಿಯನ್ನೈದಿದಲ್ಲಿ, ಬಳಿಕ-ಮರಳಿ, ಅದಂ-ಆಮಾರ್ಗವನ್ನು, ಏನೆನಬರ್ಪುದು-ಎನೆಂದುಪೇಳಬಹುದು ?

ಟಿಪ್ಪಣಿ—ಅನಾದಿಯಾದ ಶ್ರೀಗುರುವು ಜ್ಞಾನಮಯವಾದ ಅಂತರ್ಗತ ಪ್ರಾಣಲಿಂಗವನ್ನು ತನ್ನ ಭಾವಮನೋದೃಷ್ಟಿಗಳಿಂದ ಹೊರಕ್ಕೆ ತಂದು, ಬಾಹ್ಯೇಂದ್ರಿಯ ಗೋಚರವನ್ನಾಗಿಮಾಡಿ, ಕ್ರಿಯಾದೀಕ್ಷೆಯಮೂಲಕ ಅನುಗ್ರಹಿಸಲು, ಅದು ತನ್ನ ಪೂರ್ವಸ್ಥಿತಿಯಂತೆಯೇ ಅಂತರ್ಬಾಹ್ಯ ಶರೀರಗಳೆರಡರಲ್ಲೂ ಒಂದೆಯಾಗಿರುವಕಾರಣ, ಕ್ರಿಯಾವಿಶ್ರಾಂತಿಯನ್ನೈದಿರುವ ಶರಣನ ಮಾರ್ಗವನ್ನು ಏನೆಂದು ಹೇಳಬಹುದು ! ಎಂದರೆ, ಅಂತಪ್ಪ ಶರಣನು ಆಚರಿಸುತ್ತಿರುವ ಕ್ರಿಯೆಗಳೆಲ್ಲವೂ "ಅದ್ವೈತಭಕ್ತಿಯುಕ್ತಸ್ಯಯೋಗಿನಸ್ಸಕಲಾಕ್ರಿಯಾ | ಅಸ್ತೀದಗ್ಧಪಟನ್ಯಾಯಾತ್ಕ್ರಿಯಾಮಾತ್ರಂ ಹಿನಕ್ರಿಯಾ" ಎಂಬ ವೀರಾಗಮ ವಚನಾನುಸಾರವಾಗಿ ದಗ್ಧವಸ್ತ್ರದಂತೆ ತೋರಿಕೆಗಳಾಗಿ ಮಾತ್ರ ಇರುವುವೆಂಬುದರಿಂದ ಆತನು ಕರ್ಮಲೇಪರಹಿತನೆಂದು ಭಾವವು. ||೩೮||

ನೆನೆವುದರಿಂ ನಿರೀಕ್ಷಿಸುವು ದತ್ಯಧಿಕಂ ನೆನಹಿಂ ನಿರೀಕ್ಷೆಯಿಂ |
ದನುದಿವಸಂ ಸಮರ್ಚಿಸುವು ದತ್ಯಧಿಕಂ ನೆನಹಿಂ ನಿರೀಕ್ಷೆಯಿಂ ||
ದನುದಿವಸಂ ಸಮರ್ಚಿಪುದರಿಂ ಶಿವಲಿಂಗಮ ನಂಗದಲ್ಲಿ ಸು |
ಮ್ಮನೆಧರಿಸಿರ್ಪ ದತ್ಯಧಿಕ ಮತ್ಯಧಿಕಂ ನಿರುತಂ ಶಿವಾಧವಾ ||೩೯||

ಟೀಕೆ—ನೆನೆವುದರಿಂ-ಸ್ಮರಿಸುವುದಕ್ಕಿಂತಲೂ, ನಿರೀಕ್ಷಿಸುವುದು-ನೋಡುವುದು, ಅತ್ಯಧಿಕಂ-ಬಲುದೊಡ್ಡದು, ನೆನಹಿಂನಿರೀಕ್ಷೆಯಿಂ-ಸ್ಮರಣದರ್ಶನಗಳಿಗಿಂತಲೂ, ಅನುದಿವಸಂ-ಆವಾಗಳೂ, ಸಮರ್ಚಿಸುವುದು-ಪೂಜಿಸುವುದು, ಅತ್ಯಧಿಕಂ-ಮಿಗೆವೆಗ್ಗಳವು, ನೆನಹಿಂ-ನಿರೀಕ್ಷೆಯಿಂದೆ, ಅನುದಿವಸಂಸಮರ್ಚಿಪುದರಿಂ-ಸ್ಮರಣನಿರೀ

ಕ್ಷಣ ಪ್ರತಿದಿವಸ ಪೂಜೆಗಳಿಗಿಂತಲೂ, ಶಿವಲಿಂಗಮಂ-ಪರಮಮಂಗಲಸ್ವರೂಪವಾದ ಲಿಂಗವನ್ನು, ಅಂಗದಲ್ಲಿ-ಶರೀರದಲ್ಲಿ, ಸುಮ್ಮನೆಧರಿಸಿರ್ಪುದು-ಸಂದೇಹವಿಲ್ಲದೆ ಧರಿಸಿ ರುವುದು, ಅತ್ಯಧಿಕವತ್ಯಧಿಕಂ-ಮಿಗೆದೊಡ್ಡಿತ್ತು ಮಿಗೆದೊಡ್ಡಿತ್ತು, ನಿರುತಂ-ಇದು ನಿಶ್ಚಯವು (ವೇದಾಂತಿಗಳೂ ಕರ್ಮಯೋಗಿಗಳೂ ಸಿದ್ಧಾಂತಿಗಳೂ ಮನನನಿರೀ ಕ್ಷಣಯಜನಾದಿಗಳಿಂ ವಸ್ತುವಸಾಧಿಸುವೆವೆಂಬರು. ಶಿವಶರಣರಾದೊಡೆ ಪ್ರತ್ಯಕ್ಷ ವಾಗಿ ಆ ವಸ್ತುವನೇ ಅಂಗದಮೇಲೆ ಧರಿಸಿ, ಆ ವಸ್ತುಸ್ವರೂಪರಾಗಿರುವಕಾ ರಣ, ಆಮನನನಿರೀಕ್ಷಣಯಜನಾದಿಗಳಿಗಿಂತ ಲಿಂಗಧಾರಣವೇ ವಿಶೇಷವೆಂಬುದ ಭಿಪ್ರಾಯಂ). ||೩೯||

ಟಿಪ್ಪಣಿ—ಪರವಸ್ತುವಾದ ಶಿವಲಿಂಗದ ಸ್ಮರಣೆಗಿಂತಲೂ ದರ್ಶನವು ಅಧಿಕವಾದುದು. ಆ ಸ್ಮರಣದರ್ಶನಗಳೆರಡಕ್ಕಿಂತಲೂ ಸದಾಪೂಜಿಸುವುದು ಶ್ರೇಷ್ಠವು. ಆ ಸ್ಮರಣದರ್ಶನಪೂಜಾದಿಗಳಿ ಗಿಂತಲೂ ಆ ಮಂಗಳಮಯವಾದ ಶಿವಲಿಂಗವನ್ನು ದೇಹದಲ್ಲಿ ನಿಸ್ಸಂಶಯವಾಗಿ ಧರಿಸಿರುವುದು ಅತ್ಯಂತಶ್ರೇಷ್ಠವು. ||೩೯||

ಮನನದ ಕಾಂಕ್ಷೆ ದರ್ಶನಕಳಾಪರಿಣಾಮ ವಿಲೀನಮಾಗಿ ದ |
ರ್ಶನದ ಕಳಾಭಿವಾಂಛೆ ಪರಿಮರ್ಶನಪೂಜನಲೀನಮಾಗಿ ಪೂ ||
ಜನಪರಿಮರ್ಶನಕ್ರಿಯೆಯೆ ಸಂಸ್ಪೃಶಧಾರಣಲೀನಮಾಗಿ ತಾ |
ನೆನಿಸಿದ ಲಿಂಗಸಂಗದ ಗುಣಂ ಪರಮೈಕ್ಯಪದಂ ಶಿವಾಧವಾ ||೪೦||

ಟೀಕೆ—ಮನನದ-ಸ್ಮರಣೆಯಲ್ಲಿಯ, ಕಾಂಕ್ಷೆ-ಬಯಕೆಯು, ದರ್ಶನಕಳಾ ಪರಿಣಾಮವಿಲೀನಮಾಗಿ-ದರ್ಶನ-ನೋಟದ, ಕಳಾ-ಸೊಬಗಿನ, ಪರಿಣಾಮ-ಸುಖ ದಲ್ಲಿ, ವಿಲೀನಮಾಗಿ-ಅಡಗಿ, ದರ್ಶನಕಳಾಭಿವಾಂಛೆ-ಆನೋಟದ ಒಪ್ಪುವಬಯ ಕೆಯು, ಪರಿಮರ್ಶನಪೂಜನಲೀನಮಾಗಿ-ಮುಟ್ಟಿ ಪೂಜಿಸುವಲ್ಲಿ ಅಡಗಲಾಗಿ, ಪೂಜ ನಪರಿಮರ್ಶನಕ್ರಿಯೆ-ಆ ಮುಟ್ಟಿಪೂಜಿಸುವಕ್ರಿಯೆಯು, ಸಂಸ್ಪೃಶಧಾರಣಲೀನಮಾ ಗಿ-ಅಂಗದಲ್ಲಿಸೋಂಕಿ ಧರಿಸುವಲ್ಲಿ ಅಡಗಿ, ತಾನೆನಿಸಿದ-ಆ ಲಿಂಗಧಾರಣವು ತಾನೆ ನಿಸಿದ, ಅಂಗಸಂಗದಗುಣಂ-ಲಿಂಗಾಂಗಸಂಯೋಗದ ಮಾರ್ಗವು, ಪರಮೈಕ್ಯಪದಂ- ಉತ್ಕೃಷ್ಟವಾದ ಘನಲಿಂಗವು. ||೪೦||

ಟಿಪ್ಪಣಿ—ಹೇಗೆಂದರೆ—ಸ್ಮರಿಸುವಿಕೆಯಲ್ಲಿರುವ ಬಯಕೆಯು ದರ್ಶನಮಾತ್ರದಿಂದಡಗಿ ಹೋಗುವುದು. ದರ್ಶನದಲ್ಲಿರುವ ಬಯಕೆಯು ಮುಟ್ಟುವುದರಲ್ಲೂ, ಪೂಜಿಸುವುದರಲ್ಲೂ ಅಡಗಿ ಹೋಗುವುದು. ಆ ಸ್ಪರ್ಶನಪೂಜನಕ್ರಿಯೆಗಳು ಇಷ್ಟಲಿಂಗಧಾರಣದಲ್ಲಿ ಅಡಗಿರುವುವು. ಅದು ಕಾರಣ, ಈ ಲಿಂಗಾಂಗಸಂಗವು ಆ ಸಕಲ ಪರಿಣಾಮವಾಗಿರುವುದರಿಂದ. ಇದೇ ಉತ್ಕೃಷ್ಟವಾದ ಐಕ್ಯಮಾರ್ಗವು. ||೪೦||

ಇದು ಶಿವಧರ್ಮಮಾರ್ಗಮಿದು ವೀರಶಿವಾಗಮತಂತ್ರದರ್ಥಮಿಂ |
ತಿದು ಸಕಲಶ್ರುತಿಸ್ಮೃತಿಪುರಾಣರಹಸ್ಯದ ಸಾರಭೂತ ಮೆಂ ||
ದೊದರಿ ಗುರೂಪದೇಶವಚನಂಗಳೊಡಂಬಡೆ ಪೇಳ್ದ ಲಿಂಗಸಂ |
ಗದ ಪರಮೈಕ್ಯಮಂ ತಿಳಿವುದೇ ಘನಮುಕ್ತಿಪದಂ ಶಿವಾಧವಾ ||೪೧||

ಟೀಕೆ—ಇದು ಶಿವಲಿಂಗಧಾರಣವೆಂಬುದು, ಶಿವಧರ್ಮಮಾರ್ಗಂ-ಶಿವಾಚಾರಪಥವು. ಇದು-ಈ ಶಿವಲಿಂಗಧಾರಣವು, ವೀರಶಿವಾಗಮತಂತ್ರದ-ವೀರಶೈವಾಗಮಸಿದ್ಧಾಂತದ, ಅರ್ಥಂ-ಅಭಿಪ್ರಾಯವು ("ತಂತ್ರಂಪ್ರಧಾನೆಸಿದ್ಧಾಂತೆ" ಎಂದು ನಾನಾರ್ಥಕೋಶವು). ಇಂತಿದು-ಇಂತಪ್ಪ ಲಿಂಗಧಾರಣವು, ಸಕಲಶ್ರುತಿ ಸ್ಮೃತಿ ಪುರಾಣ ರಹಸ್ಯದ-ಸಮಸ್ತವಾದ ಶ್ರುತಿಸ್ಮೃತಿಪುರಾಣಂಗಳ, ಸಾರಭೂತಂ-ಗೂಢವಾದ ಸಾರವು ಎಂದು-ಇಂತೆಂದು, ಗುರೂಪದೇಶವಚನಂಗಳ್-ಶ್ರೀಗುರುನಿರೂಪವಾಕ್ಯಂಗಳು, ಒಡಂಬಡೆ-ಸಮ್ಮತವಾಗಲಾಗಿ, ಒದರಿ-ಬೊಬ್ಬಿಟ್ಟು, ಪೇಳ್ದ-ಹೇಳಿದಂಥ, ಲಿಂಗಸಂಗದ-ಲಿಂಗಾಂಗಸಂಬಂಧದ, ಪರಮೈಕ್ಯಮಂ-ಉತ್ಕೃಷ್ಟವಾದೇಕತ್ವವನು, ತಿಳಿವುದೇ-ಅರಿವುದೇ, ಘನಮುಕ್ತಿಪದಂ-ದೊಡ್ಡಿತಾದ ಮೋಕ್ಷಪದವು.

ಟಿಪ್ಪಣಿ—ಈಲಿಂಗಧಾರಣರೂಪಧರ್ಮವೇ ಶಿವಾಚಾರವು. ಇದೇ ವೀರಶೈವಾಗಮಸಿದ್ಧಾಂತಾರ್ಥವು. ಇದೇ ಸಕಲ ವೇದಶಾಸ್ತ್ರಪುರಾಣಗಳ ರಹಸ್ಯಾರ್ಥವು ಎಂಬುದಾಗಿ ಶ್ರೀಗುರುವು ಘಂಟಾಘೋಷವಾಗಿ ಶಾಸ್ತ್ರಸಮ್ಮತವಾಗಿ ಹೇಳಿದ ಲಿಂಗಾಂಗಸಾಮರಸ್ಯಾರ್ಥವನ್ನು ತಿಳಿದುಕೊಳ್ಳುವುದೇ ಉತ್ಕೃಷ್ಟವಾದ ಮೋಕ್ಷಮಾರ್ಗವು. ||೪೧||

ಗುರುವಚನಂ ಪ್ರಮಾಣ ಮಖಿಲಾರ್ಯಪುರಾತನದಿವ್ಯಸೂಕ್ತಿಗಳ್ |
ನಿರವಧಿಕಂ ಪ್ರಮಾಣ ಮಮಲಾಗಮಶೈವರಹಸ್ಯವಾಕ್ಯತ ||
ತ್ಪರಮತವೇ ಪ್ರಮಾಣ ಮನುವಾಸರ ಮಂಗದ ಲಿಂಗ ದೈಕ್ಯನಿ |
ರ್ಭರಮತವೇ ಪ್ರಮಾಣ ಮೆರ ಡೆಂಬುದು ಬಂಧಕರಂ ಶಿವಾಧವಾ ||೪೨||

ಟೀಕೆ—ಶ್ರೀಗುರುವಚನಂ-ಶ್ರೀಗುರುನಿರೂಪಣವು, ಪ್ರಮಾಣಂ-ಲಿಂಗಧಾರಣವೇ ಮುಖ್ಯವೆಂಬುದಕ್ಕೆ ಪ್ರಮಾಣವು ಅಖಿಲಾರ್ಯಪುರಾತನ ದಿವ್ಯಸೂಕ್ತಿಗಳ್-ಅಖಿಲ-ಸಮಸ್ತವಾದ, ಆರ್ಯ-ಹಿರಿಯರುಗಳಾದ, ಪುರಾತನ-ಬಸವಾದಿ ಪುರಾತನರ, ದಿವ್ಯ-ಮನೋಹರವಾದ, ಸೂಕ್ತಿಗಳ್-ಶುಭವಾದ ವಾಕ್ಯಗಳು ನಿರವಧಿಕಂ-ವೆಗ್ಗಳವಾಗಿ, ಪ್ರಮಾಣಂ-ಪ್ರಮಾಣವು ಅಮಲಾಗಮಶೈವರಹಸ್ಯ ವಾಕ್ಯತತ್ಪರಮತವೇ-ಅಮಲ-ನಿರ್ಮಲವಾದ, ಆಗಮ-ಶಿವಾಗಮಂಗಳಲ್ಲಿಯ, ಶೈವರಹಸ್ಯ-ಶಿವರಹಸ್ಯದಲ್ಲಿಯ, ವಾಕ್ಯನಿರೂಪಣದಲ್ಲಿ, ತತ್ಪರ-ಎರಕವುಳ್ಳವರುಗಳ, ಮತವೇ-ಮಾರ್ಗವೇ, ಪ್ರಮಾಣಂ-ಪ್ರಮಾಣವು ಅನುವಾಸರಂ-ಆವಾಗಲೂ, ಅಂಗದಲಿಂಗ

ದ್ವೈಕ್ಯನಿರ್ಭರಮತವೇ-ಲಿಂಗಾಂಗಸಂಬಂಧದಲ್ಲಿ ನಿಷ್ಠೆಯುಳ್ಳವರಮತವೇ, ಪ್ರಮಾಣಂ-ಪ್ರಮಾಣವು ಎರಡೆಂಬುದು-ಈ ಲಿಂಗಧಾರಣವಲ್ಲದೆ ಬೇರೊಂದುಂಟೆಂಬುದು, ಬಂಧಕರಂ-ಸಂಸಾರಬಂಧವಂಮಾಳ್ಪುದು. ||೪೩||

ಟಿಪ್ಪಣಿ—ಲಿಂಗಧಾರಣವು ಆವಶ್ಯಕವೆಂಬುದಕ್ಕೆ ಶ್ರೀಗುರುವಚನವೊಂದು ಪ್ರಮಾಣವು, ಮತ್ತೂ ಹಿರಿಯರಾದ ಬಸವಾದಿಪ್ರಮಥರುಗಳ ವಚನಗಳು ಉತ್ಕೃಷ್ಟ ಪ್ರಮಾಣಗಳು. ಇವಲ್ಲದೆ ಶಿವಾಗಮಶಾಸ್ತ್ರವಾಕ್ಯದಂತೆ ಆಚರಿಸುವವರ ಸನ್ಮಾರ್ಗವೇ ಪ್ರಮಾಣವು. ಮತ್ತೂ ಲಿಂಗಾಂಗಸಂಬಂಧದಲ್ಲಿ ನಂಬುಗೆಯಿಟ್ಟು ಆಚರಿಸುವ ಶಿವಸಮಯವೇ ಮಹಾಪ್ರಮಾಣವು. ಇದಲ್ಲದೆ ಬೇರೆಯುಂಟೆಂದು ಹೇಳಲ್ಪಡುವುದು ಸಂಸಾರಬಂಧಕರವಾದುದು. ||೪೩||

ಅವತಾರಿಕೆ—ತತ್ತ್ವಮಸ್ಯಾದಿಮಹಾವಾಕ್ಯಂಗಳು ಲಿಂಗಾಂಗ ಸಂಬಂಧವನ್ನೇ ಪ್ರತಿಪಾದಿಸುತ್ತಿರ್ಪವೆಂದು ಪೇಳುತ್ತಿರ್ದಪಂ.—

ಆದಿಗುರೂಪದೇಶವಚನಾರ್ಥಮ ನೊರ್ಮೆ ವಿವೇಕದೃಷ್ಟಿಯಿಂ |
ಭೇದಿಸಿ ನೋಡೆ ತತ್ತ್ವಮಸಿಯೆಂದುದಲಾ ವ್ಯತಿರೇಕಬುದ್ಧಿಯಿಂ ||
ವಾದಿಸಿ ಕಾಣ್ಬ ನಿಶ್ಚಯ ಮಿದೇಂ ಸ್ವಯಮೇವ ಶಿವಾತ್ಮಲಿಂಗವೆಂ |
ದೋದುವುದೇ ನಿಜೈಕ್ಯಪದಸಿದ್ಧಿಗೆ ಕಾರಣಿಕಂ ಶಿವಾಧವಾ ||೪೪||

ಟೀಕೆ—ಆದಿಗುರೂಪದೇಶವಚನಾರ್ಥಮಂ-ಆದಿಗುರು-ಎಲ್ಲಕ್ಕೂ ಮೂಲನಾದ ಶ್ರೀಗುರುವಿನ, ಉಪದೇಶವಚನಾರ್ಥಮಂ-ನಿರೂಪಣವಾಕ್ಯಾರ್ಥವನ್ನು, ಒರ್ಮೆ-ಒಂದುವೇಳೆ, ವಿವೇಕದೃಷ್ಟಿಯಿಂ-ಜ್ಞಾನದೃಷ್ಟಿಯಿಂದೆ, ಭೇದಿಸಿನೋಡೆ-ಆರೈದುನೋಡಲಾಗಿ, ತತ್ತ್ವಮಸಿಯೆಂದುದಲಾ-ಆ ಪರಬ್ರಹ್ಮವೇ ನೀನೆಂದು ಹೇಳಿತ್ತಲ್ಲವೆ ? ಎಲೈ ದ್ವೈತವಾದಿ ! ವ್ಯತಿರೇಕಬುದ್ಧಿಯಿಂ-ವಿಪರೀತಜ್ಞಾನದಿಂದೆ, ವಾದಿಸಿ-ತತ್ಪದಸ್ವರೂಪಬ್ರಹ್ಮದಧೀನಂ ತ್ವಂಪದಮೆಂದು ವಾದಿಸಿ, ಕಾಣ್ಬನಿಶ್ಚಯಂ-ನೋಡುವಂಥ ನಿರುಗೆಯು, ಇದೇಂ-ಇದೇನುಪ್ರಯೋಜನವು ? (ಮತ್ತಂ, ಎಲೈ ಅದ್ವೈತವಾದಿ ! ಬಾಹ್ಯಾಂತರಕ್ರಿಯೆ ಹೊರತಾಗಿ ತತ್ಪದರೂಪವಾದ ಬ್ರಹ್ಮವೇ ತ್ವಂಪದವೆಂಬೆ, ಇದೇನು ಪ್ರಯೋಜನ ?) ಸ್ವಯಮೇವ-ತಾನೇ, ಶಿವಾತ್ಮಲಿಂಗಮೆಂದು-ಜ್ಞಾನಕ್ರಿಯಾಸಂಯುಕ್ತ ಶಿವಸ್ವರೂಪಲಿಂಗವೆಂದು, ಓದುವುದೇ-ಪೇಳ್ವುದೇ, ನಿಜೈಕ್ಯಪದಸಿದ್ಧಿಗೆ-ಸ್ವಸ್ವರೂಪಸಾಕ್ಷಾತ್ಕಾರಸಿದ್ಧಿಗೆ, ಕಾರಣಿಕಂ-ಕಾರಣವಾದುದು.

ಟಿಪ್ಪಣಿ—ಅನಾದಿ ಶ್ರೀಗುರುವಾದ ಪರಶಿವನು ಏನುಪದೇಶವಂ ಮಾಡಿರುವನೆಂದು ವಿಚಾರಿಸಿ ನೋಡಿದರೆ, " ತತ್ತ್ವಮಸಿ " (ಆ ಪರಬ್ರಹ್ಮವೇ ನೀನು) ಎಂದು ಹೇಳಿರುವನು. ದ್ವೈತವಾದಿಗಳು ವಿಪರೀತಜ್ಞಾನದಿಂದ ತತ್ಪದವಾಚ್ಯನಾದ ಬ್ರಹ್ಮನಿಗೆ ಈ ತ್ವಂಪದವಾಚ್ಯನಾದ ಜೀವನು ಅಧೀನನೆಂದು ವಾದಮಾಡಿ ಕಡೆಗೆ ಕಾಣುವುದೇನು ? ಮತ್ತೂ ಅದ್ವೈತಿಗಳು ಬಾಹ್ಯಾಂತರ ಕ್ರಿಯೆಗಳ ಬಿಟ್ಟು, ಬ್ರಹ್ಮನಿಗೂ ತನಗೂ ಅಭೇದವೆಂದು ವಾದಿಸುವುದರಿಂದೇನುಪ್ರಯೋಜನ ? ಜ್ಞಾನಕ್ರಿಯಾ

ಸವೇತನಾದ ತಾನು ಶಿವಲಿಂಗಸ್ವರೂಪವೆಂದು ಹೇಳುವ ಮಾರ್ಗವೇ ಸ್ವಸ್ವರೂಪಸಾಕ್ಷಾತ್ಕಾರವಾಗುವುದಕ್ಕೆ ಕಾರಣವು. ||೪೩||

ಗುರು ಕರುಣಾಳು ತತ್ತ್ವಮಸಿ ಯೆಂದುಪದೇಶಿಸಿ ದಿಷ್ಟಲಿಂಗಮಾಂ |
ತರಶಿವಲಿಂಗ ಮುತ್ತರಪದಸ್ಥಿತತೃಪ್ತಿಕಳಾಖ್ಯಲಿಂಗ ಮಾ ||
ಗುರುಚಿರತತ್ಪದತ್ವಮಿತಿಶಬ್ದಪದಾಸಿಪದತ್ರಯಂ ಪ್ರವಿ |
ಸ್ತರಗುಣನಾಮರೂಪವಿಡಿದಿರ್ಪುದೆ ದೀಕ್ಷೆ ಕಣಾ ಶಿವಾಧವಾ ||೪೪||

ಟೀಕೆ—ಕರುಣಾಳು-ಕೃಪಾಶಾಲಿಯಾದ, ಗುರು-ಶ್ರೀಗುರುವು, ತತ್ತ್ವಮಸಿಯೆಂದು-ತತ್ತ್ವಮಸಿಯೆಂದು, ಉಪದೇಶಿಸಿದ-ಪೇಳಿದಂಥ, ಇಷ್ಟಲಿಂಗಂ-ಸ್ಥೂಲತನುವಿನಲ್ಲಿರ್ಪ ಇಷ್ಟಲಿಂಗವು, ಆಂತರಶಿವಲಿಂಗಂ-ಪ್ರಾಣದಲ್ಲಿರ್ಪಶಿವಲಿಂಗವು, ಉತ್ತರಪದಸ್ಥಿತತೃಪ್ತಿಕಳಾಖ್ಯಲಿಂಗಂ-ಉತ್ತರಪದಸ್ಥಿತ-ಕಾರಣತನುವಿನಲ್ಲಿರ್ಪ, ತೃಪ್ತಿಕಳಾಖ್ಯಲಿಂಗಂ-ಪರಿಣಾಮಸ್ವರೂಪವಾದ ಭಾವಲಿಂಗವು, ಉರು-ದೊಡ್ಡದಾದ, ಚಿರ-ನಿತ್ಯವಾದ, ತತ್ಪದತ್ವಮಿತಿಶಬ್ದಪದಾಸಿಪದತ್ರಯಂ-ತತ್ಪದ ತ್ವಂಪದ ಅಸಿಪದವೆಂಬಮೂರು, ಆಗಿ-ಸಿದ್ಧವಾಗಿ, ಪ್ರವಿಸ್ತರಗುಣನಾಮರೂಪವಿಡಿದಿರ್ಪುದೆ-ಪ್ರವಿಸ್ತರಗುಣ-ಸಕಲಶಾಸ್ತ್ರಪ್ರಸಿದ್ಧವಾದ ಲಿಂಗತ್ರಯಂಗಳ ಕ್ರಿಯೆಯು, ನಾಮ-ಆಲಿಂಗತ್ರಯಗಳ ಪೆಸರು, ರೂಪ-ಆಲಿಂಗತ್ರಯಂಗಳಕುರುಹು, ಇವುಗಳನ್ನು, ಪಿಡಿದಿರ್ಪುದೆ-ತಾಳಿರ್ಪುದೇ, ದೀಕ್ಷೆ ಕಣಾ-ದೀಕ್ಷೆಯಲಾ. ||೪೪||

ಟಿಪ್ಪಣಿ—ದಯಾಶಾಲಿಯಾದ ಶ್ರೀಗುರುವು ಉಪದೇಶಿಸಿದ " ತತ್ತ್ವಮಸಿ " ಯೆಂಬ ಮಹಾವಾಕ್ಯದಲ್ಲಿನ ತತ್ ಪದವು ಸ್ಥೂಲಶರೀರದಲ್ಲಿರುವ ಇಷ್ಟಲಿಂಗವು, ತ್ವಂಪದವು ಸೂಕ್ಷ್ಮಶರೀರದಲ್ಲಿರುವ ಪ್ರಾಣಲಿಂಗವು, ಅಸಿಪದವು, ಕಾರಣಶರೀರದಲ್ಲಿರುವ ಶಿವಲಿಂಗವು ಎಂದು ಸಿದ್ಧವಾಗಲು, ಆಲಿಂಗತ್ರಯಗಳ, ನಾಮರೂಪಕ್ರಿಯೆಗಳ ಜ್ಞಾನವನ್ನು ಪಡೆದುಕೊಳ್ಳುವುದೇ ದೀಕ್ಷೆಯು ||೪೪||

ಅನ್ಯ ಮನನ್ಯ ಮಾತ್ಮಪದ ಮೆಂಬ ತನುತ್ರಯಮಿಶ್ರಮಾಗಿ ನಿ |
ಷ್ಪನ್ನಮೆನಿಪ್ಪ ತತ್ತ್ವಮಸಿವಾಕ್ಯಪದಾರ್ಥಮೆ ಸದ್ಗುರೂಕ್ತಿಯಿಂ ||
ಭಿನ್ನಸಮಾನರೂಪಪದಲಕ್ಷಣಭಾವಮ ನೆಯ್ದಿ ತೋರ್ಪುದಂ |
ತನ್ನೊಳು ತಾನೆ ನೋಡೆ ಬಳಿಕಾವುದಸಾಧ್ಯತರಂ ಶಿವಾಧವಾ ||೪೫||

ಟೀಕೆ—ಅನ್ಯಂ-ತ್ಯಾಗಾಂಗವು, ಅನನ್ಯಂ-ಬೋಗಾಂಗವು, ಆತ್ಮಪದಮೆಂಬ-ಯೋಗಾಂಗವೆಂಬ, ತನುತ್ರಯಮಿಶ್ರಮಾಗಿ-ತನುತ್ರಯದೊಡನೆ ಕೂಡಿ, ನಿಷ್ಪನ್ನಮೆನಿಪ್ಪ-ಆದುದೆಂಬ, ತತ್ತ್ವಮಸಿವಾಕ್ಯಾರ್ಥಪದಮೆ-ತತ್ತ್ವಮಸಿಯೆಂಬ ಮಹಾವಾಕ್ಯದರ್ಥವೇ, ಸದ್ಗುರೂಕ್ತಿಯಿಂ-ಶ್ರೀಗುರೂಪದೇಶದಿಂದ, ಭಿನ್ನಸಮಾನರೂಪಪದಲಕ್ಷಣಭಾವಮಂ-ಭಿನ್ನ-ಭೇದಸ್ವರೂಪವಾದ, ಸಮಾನರೂಪ-ಅಭೇದರೂಪವಾದ

ಪದಲಕ್ಷಣಭಾವಮಂ-ಶಬ್ದಸ್ವರೂಪವಹತನವನ್ನು, ಎಯ್ದಿ-ಪೊರ್ದಿ, ತೋರ್ಪುದಂ-ಕಾಣಿಸುವುದನ್ನು, ತನ್ನೊಳು-ತನ್ನಂತರಂಗದಲ್ಲಿ, ತಾನೆ, ನೋಡೆ-ವಿಚಾರಿಸಿ ತಿಳಿಯಲು, ಬಳಿಕ-ಮರಳಿ, ಅಸಾಧ್ಯತರಂ-ಅಸಾಧ್ಯವಾದುದು, ಆವುದು-ಏನಿದ್ದೀತು! (ತತ್ತ್ವಮಸ್ಯಾದಿ ಮಹಾವಾಕ್ಯಂಗಳು ಕೇವಲ ಭೇದಪರವೂ ಅಲ್ಲ, ಅಭೇದಪರವೂ ಅಲ್ಲ ; ಭೇದಾಭೇದಸ್ವರೂಪವಾದ ವಿಶಿಷ್ಟಾದ್ವೈತಪರವೆಂಬುದಭಿಪ್ರಾಯಂ) ||೪೫||

ಟಿಪ್ಪಣಿ—ಒಂದಂಗವೇ ತ್ಯಾಗಾಂಗ-ಭೋಗಾಂಗ-ಯೋಗಾಂಗವೆಂದು ತ್ರಿವಿಧವಾಗಿ, ಅವುಗಳಲ್ಲಿ ಒಂದು ಲಿಂಗವೇ ಗುರೂಪದಿಷ್ಟವಾದ ತತ್-ತ್ವಂ-ಅಸಿ ಎಂಬ ಮೂರುಪದಗಳ ವಾಚ್ಯವಾದ ಇಷ್ಟ-ಪ್ರಾಣ-ಭಾವವೆಂಬ ತ್ರಿವಿಧಲಿಂಗಗಳಾಗಿ ಕೂಡಿರುವುವೆಂದು ಅವುಗಳ ಭೇದಾಭೇದವನ್ನು ತನ್ನಲ್ಲಿ ತಾನು ವಿಚಾರಮಾಡಿ ತಿಳಿದ ಬಳಿಕ, ಅಂತಪ್ಪ ಅರಿವುಳ್ಳವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ||೪೫||

ಅವತಾರಿಕೆ—ಅನಾ ನನ್ಯಾತ್ಮಕಶಬ್ದಾರ್ಥಮಂ ಸಯುಕ್ತಿಕವಾಗಿ ಪೇಳುತ್ತಿರ್ದಪಂ.—

ತತ್ಪದ ಮನ್ಯಮಾಗಿ ಮಿಗೆ ತೋರ್ಪುದರಿಂ ಬಹಿರಿಷ್ಟಲಿಂಗ ಮು |
ದ್ಯತ್ಪ್ರಥಿತಾಂತರಂಗಶಿವಲಿಂಗ ಮನನ್ಯಪದತ್ವಮರ್ಥಸಂ ||
ವಿತ್ಪರಿಣಾಮಮೂರ್ತಿ ವಿಮಳಾತ್ಮಪದಾಹ್ವಯತೃಪ್ತಿಭಾವ ಶ |
ಶ್ವತ್ಪರಮಾಣುರೂಪಘನಲಿಂಗ ಮಸಿಪ್ರಪದಂ ಶಿವಾಧವಾ ||೪೬||

ಟೀಕೆ—ತತ್ಪದಂ-ತತ್ಪದವೇ, ಅನ್ಯಮಾಗಿ-ಕ್ರಿಯಾನಿಮಿತ್ತಂಬೇರಾಗಿ, ಮಿಗೆ-ಚೆನ್ನಾಗಿ, ತೋರ್ಪುದರಿಂ, ಬಹಿರಿಷ್ಟಲಿಂಗಂ-ಸ್ಥೂಲಾಂಗದಲ್ಲಿ ಇಷ್ಟಲಿಂಗವಾದುದು, ಉದ್ಯತ್ಪ್ರಥಿತಾಂತರಂಗಶಿವಲಿಂಗಂ-ಉದ್ಯತ್-ಪ್ರಕಾಶಿಸುತಿರ್ಪ, ಪ್ರಥಿತ-ಪ್ರಸಿದ್ಧವಾದ, ಅಂತರಂಗ-ಪ್ರಾಣದಲ್ಲಿಯ, ಶಿವಲಿಂಗಂ-ಶಿವಲಿಂಗವು, ಅನನ್ಯಪದತ್ವಮರ್ಥಸಂವಿತ್ಪರಿಣಾಮಮೂರ್ತಿ-ಅನನ್ಯಪದ-ಬೇರೊಂದು ಶಬ್ದವಲ್ಲೆಂಬ, ತ್ವಮರ್ಥ-ತ್ವಂಪದಾರ್ಥದಲ್ಲಿಯ, ಸಂವಿತ್ಪರಿಣಾಮ-ಜ್ಞಾನದಲ್ಲಿ ಪರಿಣಮಿಸುವ, ಮೂರ್ತಿ-ಮೂರ್ತಿಯು, ವಿಮಳಾತ್ಮಪದಾಹ್ವಯತೃಪ್ತಿಭಾವಶಶ್ವತ್ಪರಮಾಣುರೂಪಘನಲಿಂಗಂ-ವಿಮಳ-ನಿರ್ಮಳವಾದ, ಆತ್ಮಪದಾಹ್ವಯ-ಪರಮಾತ್ಮನೆಂಬ ಪೆಸರುಳ್ಳ, ತೃಪ್ತಿಭಾವ-ಪರಿಣಾಮಸ್ವರೂಪವಾದ, ಶಶ್ವತ್-ನಿತ್ಯಮಾದ, ಪರಮಾಣುರೂಪ-ಅತಿಸೂಕ್ಷ್ಮವಾದ, ಘನಲಿಂಗಂ-ಭಾವಲಿಂಗವು, ಅಸಿಪ್ರಪದಂ-ಅಸಿಯೆಂಬ ಶಬ್ದಾರ್ಥವು. ||೪೬||

ಟಿಪ್ಪಣಿ—ತತ್ ಎಂಬ ಪದವು ಕ್ರಿಯಾನಿಮಿತ್ತವಾಗಿ ಪೂಜ್ಯಭಾವದಿಂದ ತನಗೆ ಭಿನ್ನವಾಗಿ ತೋರುವುದರಿಂದ, ಅದು ಸ್ಥೂಲಶರೀರದಲ್ಲಿರುವ ಇಷ್ಟಲಿಂಗ ವಾಚಕವಾಯಿತು. ತ್ವಂಪದವು ಬೇರೊಂದಿಲ್ಲವೆಂಬ ಜ್ಞಾನದಲ್ಲಿ ಪರಿಣಮಿಸುವ ಕಾರಣ, ಅಂತರಂಗವಾದ ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗವಾಚಕವಾಯಿತು. ಅಸಿಪದವು ನಿರ್ಮಲಪರಮಾತ್ಮನಾಮಕವಾದ ಅತ್ಯಂತ ಸೂಕ್ಷ್ಮವಾದ ತೃಪ್ತಿಭಾವವುಳ್ಳುದಾದ ಕಾರಣ, ಕಾರಣಶರೀರದಲ್ಲಿರುವ ಭಾವಲಿಂಗದ ವಾಚಕವಾಯಿತು. ||೪೬||

ಲಿಂಗಮೆ ತತ್ಪದಂ ತ್ವಮಿತಿ ಶಬ್ದಪದಂ ಮಿಮಳಾಂಗ ಮಾದ್ವಿಧಾ |
ಸಂಗ ಮಸಿಪ್ರಮಾಣಪದಮೆಂದು ವಿವೇಕಪರಾನುಭೂತಿಯಿಂ ||
ದಂ ಗುರು ಪೇಳ್ದ ತತ್ತ್ವಮಸಿವಾಕ್ಯಪದಾರ್ಥಮ ನಿಂತುಯೋಜಿಪಾ |
ತಂ ಗುಳಿದಾಗಮಂ ಬಯಲ ಮಾತಿನ ಮಾಲೆಕಣಾ ಶಿವಾಧವಾ ||೪೭||

ಟೀಕೆ—ತತ್ಪದಂ-ತತ್ಪದವು, ಲಿಂಗಮೆ-ಇಷ್ಟಲಿಂಗವೇ, ತ್ವಮಿತಿಶಬ್ದಪದಂ-ತ್ವಂ ಎಂಬ ಶಬ್ದಾರ್ಥವು, ವಿಮಳಾಂಗಂ-ನಿರ್ಮಲವಾದ ಅಂಗಸ್ಥಲವು, ಅಸಿಪ್ರಮಾಣಪದಂ-ಅಸಿ ಎಂದು ಕುರುಹಿಡುವ ಪದವು, ಆದ್ವಿಧಾಸಂಗಂ-ಆಯೆರಡರ ಸಂಬಂಧವು, ಎಂದು-ಹೀಗೆಂದು, ಗುರು-ಶ್ರೀಗುರುವು, ಪೇಳ್ದ-ನಿರೂಪಿಸಿದ, ತತ್ತ್ವಮಸಿವಾಕ್ಯಪದಾರ್ಥಮಂ-ತತ್ತ್ವಮಸಿಯೆಂಬ ಮಹಾವಾಕ್ಯದರ್ಥಮಂ, ಇಂತು-ಈ ಪ್ರಕಾರದಿಂದ, ವಿವೇಕಪರಾನುಭೂತಿಯಿಂದಂ-ವಿಂಗಡಿಸುವಲ್ಲಿ ಮಹಾಜ್ಞಾನದಿಂದ ಯೋಜಿಪಾತಂಗೆ-ತಿಳಿಸುವಾತಂಗೆ, ಉಳಿದಾಗಮಂ-ಭಿನ್ನಾಗಮಂಗಳು, ಬಯಲ ಮಾತಿನಮಾಲೆಕಣಾ-ವ್ಯರ್ಥದಾಲಾಪಮಾತ್ರವಲಾ ? (ಈ ಅರ್ಥದಲ್ಲಿ—" ಲಿಂಗಂ ತತ್ಪದಮಾಖ್ಯಾತಮಂಗಂತ್ವಂಪದಮೀರಿತಂ | ಸಂಯೋಗೋಽಸಿಪದಂಪ್ರೋಕ್ತಮನಯೊರಂಗಲಿಂಗಯೋಃ " ಎಂದು ಶಿವಸಿದ್ಧಾಂತತಂತ್ರವುಂಟು). ||೪೭||

ಟಿಪ್ಪಣಿ—ಇಷ್ಟಲಿಂಗವೇ ತತ್‌ಪದದ ಅರ್ಥವು, ಅಂಗವೇ (ಜೀವನೇ) ತ್ವಂಪದದ ಅರ್ಥವು. ಇವೆರಡರ ಸಂಬಂಧವೇ ಅಸಿಪದದರ್ಥವು, ಎಂಬುದಾಗಿ ಶ್ರೀಗುರುವು ನಿರೂಪಿಸಿದ ತತ್ತ್ವಮಸಿ ಮಹಾವಾಕ್ಯದ ಅರ್ಥವನ್ನು ತಿಳಿದು, ಅದನ್ನು ಸ್ವಾನುಭವ ಮಾಡಿಕೊಂಡವನಿಗೆ ಇನ್ನುಳಿದ ಶಾಸ್ತ್ರಾರ್ಥವು ವ್ಯರ್ಥವಾದ ಮಾತುಗಳಾಗಿರುವುವಲ್ಲವೆ ? ||೪೭||

ಲಿಂಗ ಮಿದಂಗರೂಪ ಮಿದು ಸಂಗಮಿದೆಂದು ಗುರೂಪದಿಷ್ಟವಾ |
ಕ್ಯಂಗಳ ನೋಡಿ ಕೇಳಿ ತದನೂನಸಮಾನಪದಂಗಳಂ ಪದಾ ||
ರ್ಥಂಗಳ ನಾಪ್ರಸಾದಪರಿಪೂರ್ಣನಿಜಾನುಭವೋಕ್ತಬುದ್ಧಿಯಿಂ |
ಮಂಗಳಮಾಗಿ ಖಂಡಿಸ ಲಖಂಡಿತ ನಪ್ಪ ನಲಾ ಶಿವಾಧವಾ ||೪೮||

ಟೀಕೆ—ಲಿಂಗಮಿದು-ಲಿಂಗಸ್ವರೂಪವಿದು, ಅಂಗರೂಪಮಿದು-ಅಂಗಸ್ಥಳವಿದು, ಸಂಗಮಿದು-ಸಂಬಂಧವಿದು, ಎಂದು-ಹೀಗೆಂದು, ಗುರೂಪದಿಷ್ಟವಾಕ್ಯಂಗಳಂ-ಶ್ರೀಗುರುಸ್ವಾಮಿಯಿಂ ನಿರೂಪಿಸಲ್ಪಟ್ಟ ವಚನಂಗಳನ್ನು, ಓದಿ-ಪಠಿಸಿ, ಕೇಳಿ-ಆಲಿಸಿ, ತದನೂನಸಮಾನಪದಂಗಳಂ-ತತ್-ಆ ಲಿಂಗಾಂಗಸಂಬಂಧದಲ್ಲಿ, ಅನೂನ-ಕೊರತೆಯಿಲ್ಲದ, ಸಮಾನಪದಂಗಳಂ-ಅಭೇದಮಂಪೇಳ್ವ ತತ್ತ್ವಮಸಿವಾಕ್ಯಂಗಳನು, ಪದಾರ್ಥಂಗಳಂ-' ತತ್ತ್ವಮಸಿ ' ಎಂಬ ಪದಂಗಳ ವಾಚ್ಯಾರ್ಥ ಲಕ್ಷ್ಯಾರ್ಥಂಗಳನ್ನು, ಆ ಪ್ರಾಸಾದಪರಿಪೂರ್ಣನಿಜಾನುಭವೋಕ್ತಬುದ್ಧಿಯಿಂ-ಆ ಪ್ರಸಾದ-

ಆ ಆಚಾರ್ಯಾನುಗ್ರಹದಿಂದ, ಪರಿಪೂರ್ಣ-ತುಂಬಲ್ಪಟ್ಟ, ನಿಜಾನುಭವ-ಸಹಜ ಜ್ಞಾನದಿಂದ, ಉಕ್ತ-ಪೇಳಲ್ಪಟ್ಟ, ಬುದ್ಧಿಯಿಂ-ತತ್ತ್ವನಿಶ್ಚಯದಿಂದ, ಮಂಗಳ ಮಾಗಿ-ಮುಕ್ತಸ್ವರೂಪನಾಗಿ, ಖಂಡಿಸಲ್-ಭೇದಿಸಲು, ಅಖಂಡಿತಂ-ಅಭೇದ್ಯನಾಗಿ ಅಪ್ಪನಲಾ-ಇರುವನಲ್ಲವೆ ? ||೪೮||

ಟಿಪ್ಪಣಿ—ಇದು ಲಿಂಗವು, ಇದು ಅಂಗವು, ಇದು ಅವುಗಳ ಸಂಬಂಧವು ಎಂದು ಗುರುವು ನಿರ್ದೇಶಿಸಿ ಅಪ್ಪಣೆಕೊಡಿಸಿದ ವಾಕ್ಯವನು ಓದಿ, ಕೇಳಿ, ಆ ಲಿಂಗ, ಅಂಗ, ಸಂಬಂಧ ರೂಪವಾದ ತ್ರಿಪದಾರ್ಥಗಳಲ್ಲೂ ಅಭೇದವನ್ನು ಪೇಳುವ ತತ್ತ್ವಮಸಿಯೆಂಬ ಛಾಂದೋಗ್ಯ ಮಹಾವಾಕ್ಯದ ಅಭಿಪ್ರಾಯವನ್ನು ಶ್ರೀಗುರುಪ್ರಸಾದಲಬ್ಧವಾದ ಸ್ವಾನುಭವದಿಂ ಹುಟ್ಟಿದ ಬುದ್ಧಿಯಿಂದ ತಿಳಿದು ಮಂಗಳಮಯನಾಗಿರುವವನು ಅಖಂಡಸ್ವರೂಪನಾಗಿರುವನು. ||೪೮||

ತತ್ತ್ವಮಸೀತಿವಾಕ್ಯಪದಮಪ್ಪ ಮಹಾಘನಮೂಲಲಿಂಗ ಮೊಂ |
ದೇ ತ್ರಿವಿಧಪ್ರಭಿನ್ನಮುಖಮಾಗಿ ಲಸದ್ಗುರುದೀಕ್ಷೆಯಿಂ ಶರೀ ||
ರತ್ರಯದೊಳ್ಪ್ರವರ್ತಿಸಿ ವಿಭೇದದ ತೀರ್ಕಡೆಯೊಳ್ಬಳಿಕ್ಕ ಮಾ |
ತತ್ತ್ವಮಸೀತಿವಾಕ್ಯಪದಮಪ್ಪುದು ತಪ್ಪದಲಾ ಶಿವಾಧವಾ ||೪೯||

ಟೀಕೆ—ತತ್ತ್ವಮಸೀತಿವಾಕ್ಯಪದಮಪ್ಪ-ತತ್ತ್ವಮಸಿ ಎಂಬ ವಾಕ್ಯದಿಂ ಪೇಳಲ್ಪಟ್ಟ, ಮಹಾಘನಮೂಲಲಿಂಗಂ-ಮಹಾಪೂಜ್ಯವಾದ ಅನಾದಿಲಿಂಗವು, ಒಂ ದೇ-ತಾನೇಕಸ್ವರೂಪವಾಗಿಯೆ, ತ್ರಿವಿಧಪ್ರಭಿನ್ನಮುಖಮಾಗಿ-ಮೂರಾಗಿ ಬೇರ್ಪಟ್ಟ ತೆರನುಳ್ಳುದಾಗಿ, ಲಸದ್ಗುರುದೀಕ್ಷೆಯಿಂ-ಲಸತ್-ಒಪ್ಪುತ್ತಿರ್ಪ, ಗುರು-ಶ್ರೀಗುರು ವಿನ, ದೀಕ್ಷೆಯಿಂ-ವೇಧಾಮಂತ್ರಕ್ರಿಯೆಗಳೆಂಬ ದೀಕ್ಷೆಗಳಿಂದೆ, ಶರೀರತ್ರಯದೊ ಳ್-ಅಂಗತ್ರಯದಲ್ಲಿ, ಪ್ರವರ್ತಿಸಿ-ಸಂಬಂಧವಾದುದಾಗಿ, ವಿಭೇದದತೀರ್ಕಡೆಯೊ ಳ್-ಭೇದವಡಗಿದಕಡೆಯಲ್ಲಿ, ಬಳಿಕ್ಕಂ-ಮರಳಿ, ಆ ತತ್ತ್ವಮಸೀತಿವಾಕ್ಯಪದಮಪ್ಪು ದು-ಆತತ್ತ್ವಮಸಿ ಎಂಬ ಮಹಾವಾಕ್ಯಮಪ್ಪುದು, ತಪ್ಪದಲಾ-ಓಸರಿಸುವುದಿಲ್ಲಲಾ!

ಟಿಪ್ಪಣಿ—ತತ್ತ್ವಮಸಿಯೆಂಬ ಮಹಾವಾಕ್ಯದಿಂ ಪೇಳಲ್ಪಟ್ಟ ಮಹಾಲಿಂಗವೊಂದೇ ಇಷ್ಟ ಪ್ರಾಣಭಾವವೆಂಬ ತ್ರಿವಿಧಲಿಂಗವಾಗಿ, ಶ್ರೀಗುರುವು ಮಾಡಿದ ವೇಧಾದೀಕ್ಷೆ ಮಂತ್ರದೀಕ್ಷೆ ಕ್ರಿಯಾ ದೀಕ್ಷೆಗಳಿಂದ ಸ್ಥೂಲ ಸೂಕ್ಷ್ಮ ಕಾರಣವೆಂಬ ಶರೀರಗಳಲ್ಲಿ ಸಂಬಂಧಿಸಿ, ಕಡೆಗೆ ಭೇದಭಾವವಳಿದ ಬಳಿಕ, ಆ ಮೂರುಲಿಂಗವೂ ಒಂದೇ ಆಗಿ ತತ್ತ್ವಮಸಿಯೆಂಬ ವಾಕ್ಯದರ್ಥವೇ ಆಗಿರುವ ಅನಾದಿ ಲಿಂಗವಾಗಿರುವುದು. ||೪೯||

ಅವತಾರಿಕೆ—ಇಂತು ತತ್ತ್ವಮಸ್ಯಾದಿಮಹಾವಾಕ್ಯಾರ್ಥಂಗಳಂ ಪ್ರತಿಪಾದಿಸಿದನಂತರದಲ್ಲಿ ಕರ್ಮಮಾರ್ಗವಾದ ಪೂರ್ವಯೋಗಪಂಚಕಮಂ ಖಂಡಿಸಿ, ಉತ್ತರಮಾರ್ಗಮಪ್ಪ ಯೋಗತ್ರಯಂ ಗಳಂ ಪ್ರತಿಪಾದಿಸುತ್ತಿರ್ಪಂ.

ಯಮನಿಯಮಾದಿಕಾಷ್ಟವಿಧಯೋಗದೊ ಳುತ್ತರಭಾಗಪೂರ್ವಭಾ |
ಗಮ ನನುಮಾನದೃಷ್ಟವಿಮಳಶ್ರುತದಿಂ ದರಿದಲ್ಲಿ ಪೂರ್ವಭಾ ||

ಗಮ ನುಳಿ ದುತ್ತರಾರ್ಧಶಿವಯೋಗಸಮಾಹಿತಭಕ್ತಿಸತ್ಕ್ರಿಯಾ |
ಶ್ರಮಪರಮಾರ್ಥಮಂ ಪಿಡಿದು ವರ್ತಿಸುವರ್ ಶರಣರ್ ಶಿವಾಧವಾ ||೫೦||

ಟೀಕೆ—ಶರಣರ್-ಶಿವಶರಣರು, ಯಮನಿಯಮಾದಿಕಾಷ್ಟವಿಧಯೋಗದೊಳ್-ಯಮನಿಯಮಾದಿಕ-ಯಮನಿಯಮವೊದಲಾಗುಳ್ಳ, ಅಷ್ಟವಿಧ-ಎಂಟುತೆರನಾದ, ಯೋಗದೊಳ್-ಶಿವಯೋಗಂಗಳಲ್ಲಿ, ಉತ್ತರಭಾಗಪೂರ್ವಭಾಗಮಂ-ಇದು ಉತ್ತರಭಾಗ ಇದು ಪೂರ್ವಭಾಗವೆಂಬುದನ್ನು, ಅನುಮಾನದೃಷ್ಟವಿಮಳಶ್ರುತದಿಂದೆ-ಶ್ರುತಿದೃಷ್ಟಾನುಮಾನಂಗಳಿಂ, ಅರಿದು-ತಿಳಿದು, ಅಲ್ಲಿ-ಅವೆರಡರಲ್ಲಿ, ಪೂರ್ವಭಾಗಮಂ-ಕರ್ಮಪರವಾಗಿ ಪೂರ್ವಭಾಗವಾದ ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಂಗಳನ್ನು, ಉಳಿದು-ಬಿಟ್ಟು, ಉತ್ತರಾರ್ಧಶಿವಯೋಗಸಮಾಹಿತಭಕ್ತಿ ಸತ್ಕ್ರಿಯಾಶ್ರಮಪರಮಾರ್ಥಮಂ-ಉತ್ತರಾರ್ಧ-ಉತ್ತರಭಾಗವಾದ, ಶಿವಯೋಗ-ಧ್ಯಾನಧಾರಣಸಮಾಧಿಯೆಂಬ ಶಿವಯೋಗಂಗಳಲ್ಲಿ, ಸಮಾಹಿತ-ಸಮಾಧಾನಿಯಾಗಿ, ಭಕ್ತಿ-ಶಿವಭಕ್ತಿಯೆಂಬ, ಸತ್ಕ್ರಿಯಾ-ಸತ್ಕ್ರಿಯೆಯೇ, ಆಶ್ರಮ-ನೆಲೆಯಾಗುಳ್ಳ, ಪರಮಾರ್ಥಮಂ-ಸಹಜಮಾರ್ಗವನ್ನು, ಪಿಡಿದು-ಅಂಗೀಕರಿಸಿ, ವರ್ತಿಸುವರ್-ಆಚರಿಸುವರು ||೫೦||

ಟಿಪ್ಪಣಿ—ಶಿವಶರಣರು ಯಮಾದಿ ಸಮಾಧ್ಯಂತವಾದ ಅಷ್ಟಯೋಗಗಳಲ್ಲಿ ಮೊದಲ ಯಮ-ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರಗಳೆಂಬೈದು ಪೂರ್ವಭಾಗವು, ಧ್ಯಾನ-ಧಾರಣ-ಸಮಾಧಿಯೆಂಬೀ ಮೂರು ಉತ್ತರ ಭಾಗವು, ಎಂಬುದನ್ನು ಶಾಸ್ತ್ರವಚನಪ್ರತ್ಯಕ್ಷಾನುಮಾನಾದಿಪ್ರಮಾಣಗಳಿಂದ ತಿಳಿದುಕೊಂಡು, ಮೊದಲಿನ ಐದನ್ನು ಬಿಟ್ಟು, ಕಡೆಯ ಮೂರುಯೋಗಗಳಲ್ಲಿ ಚಿತ್ತವಿಟ್ಟು, ಶಿವಭಕ್ತಿಯನ್ನಗಲದ ಸಹಜ ಮಾರ್ಗದಲ್ಲಿ ನಡೆಯುವರು ||೫೦||

ಉತ್ತರಪೂರ್ವಮೆಂಬುಭಯಭಾಗಮ ನಷ್ಟವಿಧಾಂಗಯೋಗದೊ |
ಳ್ತಾತ್ವಿಕಮಾಗಿ ನಿಶ್ಚಯಿಸಿ ಪೇಳ್ದ ಗುರೂಕ್ತಿಗಳಲ್ಲಿ ಧಾರಣಾ ||
ದಿತ್ರಯ ಮುತ್ತರಂ ಯಮಪುರೋಗಮಪಂಚಕ ಮಾಗ ಪೂರ್ವಮಿ |
ನ್ನೆತ್ತಣಮಾತು ವೀರಶಿವಯೋಗಪರಾಯಣರೊಳ್ ಶಿವಾಧವಾ ||೫೧||

ಟೀಕೆ—ಅಷ್ಟವಿಧಾಂಗಯೋಗದೊಳ್-ಎಂಟುತೆರನಾದ ಯೋಗಂಗಳಲ್ಲಿ, ಉತ್ತರ ಪೂರ್ವಮೆಂಬ-ಇದುಪೂರ್ವ ಇದುಉತ್ತರವೆನಿಸುವ, ಉಭಯಭಾಗಮಂ-ಎರಡುಭಾಗವನ್ನು, ತಾತ್ವಿಕಮಾಗಿ-ಯಥಾರ್ಥಮಾಗಿ, ನಿಶ್ಚೈಸಿ-ನಿರ್ಧರಿಸಿ, ಪೇಳ್ದ-ನಿರೂಪಿಸಿದ, ಗುರೂಕ್ತಿಗಳಲ್ಲಿ-ಗುರುವಾಕ್ಯಂಗಳಲ್ಲಿ, ಧಾರಣಾದಿತ್ರಯಂ-ಧಾರಣಧ್ಯಾನಸಮಾಧಿಗಳೆಂಬಮೂರು, ಉತ್ತರಂ-ಉತ್ತರಭಾಗವು, ಯಮಪುರೋಗಮಪಂಚಕಮಾಗ-ಯಮಮೊದಲಾದೈದುಯೋಗಂಗಳೇ, ಪೂರ್ವಂ-ಪೂರ್ವಭಾಗಂಗ

ಳು, ಶಿವಯೋಗಪರಾಯಣರೊಳ್-ವೀರಶೈವಯೋಗತತ್ಪರರಲ್ಲಿ, ಇನ್ನೆತ್ತಣಮಾತು-ಯಮಾದಿಯೋಗ ಪಂಚಕಪ್ರಸಂಗವಿನ್ನೆಲ್ಲಿಯದು ? ||೫೧||

ಟಿಪ್ಪಣಿ—ಅಷ್ಟಾಂಗಯೋಗಗಳಲ್ಲಿ ಮೊದಲಐದು ಪೂರ್ವವೆಂದೂ, ಕಡೆಯಮೂರು ಉತ್ತರವೆಂದೂ ಶ್ರೀಗುರುವು ಯಥಾರ್ಥವಾಗಿ ನಿರ್ಧರಿಸಿ ಉಪದೇಶಿಸಿರುವಾಗ, ಇನ್ನು ಧ್ಯಾನ ಧಾರಣ ಸಮಾಧಿರೂಪವಾದ ಶಿವಯೋಗದೊಳಾಸಕ್ತರಾದ ವೀರಶೈವರೊಳಗೆ ಕರ್ಮಮಾರ್ಗವಾದ ಮೊದಲ ಐದು ಯೋಗಗಳಾಚರಣೆಯು ಎಲ್ಲುಂಟು ? ||೫೧||

ಅವತಾರಿಕೆ—ವೀರಶೈವನು ಆಚರಿಸುವ ಧ್ಯಾನ-ಧಾರಣ-ಸಮಾಧಿಯೆಂಬ ತ್ರಿವಿಧ ಶಿವಯೋಗಗಳ ಲಕ್ಷಣವಂ ಪೇಳುವನು.

ಧ್ಯಾನ ಮದಂತರಂಗಯಜನಂ ಬಹಿರಂಗದ ಪೂಜೆ ಧಾರಣಂ |
ತಾನೆ ಸಮಾಧಿ ಯುಜ್ಜ್ವಲತರಪ್ರಥಿತಾರ್ಚನ ಮಾತ್ಮಲಿಂಗಸಂ ||
ಧಾನಸಮಾಹಿತಕ್ರಿಯೆ ಯಥಾಕ್ರಮ ವೀಪರಿ ಯೆಂದು ಶಾಂಭವ |
ಜ್ಞಾನದಿನಿಟ್ಟಿಸ ಲ್ನಿಜಪದಂ ಕರಬಿಲ್ವಫಲಂ ಶಿವಾಧ್ವಾ ||೫೨||

ಟೀಕೆ—ಅಂತರಂಗಯಜನಂ-ಪ್ರಾಣಲಿಂಗಪೂಜೆಯು, ಅದು-ಅದುತಾನೆ, ಧ್ಯಾನಂ-ಧ್ಯಾನಯೋಗವು. ಬಹಿರಂಗದಪೂಜೆ-ಇಷ್ಟಲಿಂಗದಲ್ಲಿಯಪೂಜೆಯು, ಧಾರಣಂ-ಧಾರಣಯೋಗವು. ಉಜ್ಜ್ವಲತರಪ್ರಥಿತಾರ್ಚನಂ-ಉಜ್ಜ್ವಲತರ-ಅತ್ಯಂತಪ್ರಕಾಶಿಸುತ್ತಿರ್ಪ, ಪ್ರಥಿತ-ಪ್ರಸಿದ್ಧವಾದ, ಅರ್ಚನಂ-ಪೂಜಾರೂಪವಾದ, ಆತ್ಮಲಿಂಗಸಂಧಾನಸಮಾಹಿತಕ್ರಿಯೆ—ಆತ್ಮಲಿಂಗ-ಭಾವಲಿಂಗದ, ಸಂಧಾನ—ಸ್ಮರಣೆಯಲ್ಲಿ, ಸಮಾಹಿತ-ಸಾವಧಾನವಾದ, ಕ್ರಿಯೆ-ವ್ಯಾಪಾರವು, ತಾನೆ-ಅದುತಾನೆ, ಸಮಾಧಿ-ಸಮಾಧಿಯೋಗವು. ಯಥಾಕ್ರಮಂ-ಇವರಪರಿವಿಡಿಯು, ಈ ಪರಿಯೆಂದು-ಈ ರೀತಿಯೆಂದು, ಶಾಂಭವಜ್ಞಾನದಿಂ-ಶಿವಸಂಬಂಧವಾದ ಜ್ಞಾನದಿಂದ, ನಿಟ್ಟಿಸಲ್-ನೋಡಲಾಗಿ, ನಿಜಪದಂ-ಮುಕ್ತಿಯಪದವು, ಕರಬಿಲ್ವಫಲಂ-ಅಂಗೈಯೊಳಗಣಬೆಲ್ಲವತ್ತದ ಕಾಯಿಯಹಾಗೆ, (ಎಲ್ಲರ್ಗೆಯುಂತಿಳಿಯಬರ್ಪುದೆಂಬುದರ್ಥ) ಈ ಅರ್ಥದಲ್ಲಿ-'' ಅಥಾಷ್ಟಧಾರ್ಚನಂಕುರ್ಯಾದಿಷ್ಟಲಿಂಗಸ್ಯ ಪೂಜನಂ | ತಲ್ಲಿಂಗಂಮನುತೇಯಸ್ತು ಪ್ರಾಣಲಿಂಗಸ್ಯಪೂಜನಂ || ಮನೋಲಯಂತುನಿರ್ಲೇಪ ಭಾವಲಿಂಗಸ್ಯ ಪೂಜನಂ '' ಇಂತೆಂದು ಶಿವರಹಸ್ಯವುಂಟು ||೫೨||

ಟಿಪ್ಪಣಿ—ಶರಣನು ಆಚರಿಸುವ ಅಂತರ್ಲಿಂಗ (ಪ್ರಾಣಲಿಂಗ) ದ ಪೂಜೆಯೇ ಧ್ಯಾನವು. ಹೊರಗಣ ಇಷ್ಟಲಿಂಗದ ಪೂಜೆಯೇ ಧಾರಣವು. ಭಾವಲಿಂಗದಸ್ಮರಣವು ತೈಲಧಾರೆಯಂತೆ ಎಡೆಬಿಡದಿರ್ಪುದೇ ಆ ಭಾವಲಿಂಗದ ಪ್ರಸಿದ್ಧವಾದ ಪೂಜೆಯೆನಿಸಿಕೊಳ್ಳುವುದು. ಅದೇ ಸಮಾಧಿಯು. ಈ ವಿಧಯೋಗಲಕ್ಷಣವನ್ನು ಹೀಗೆಂದು ಶಿವಜ್ಞಾನದಿಂದರಿದು ನಡೆದರೆ, ಅಂಗೈಯೊಳಗಣ ಬಿಲ್ವಫಲದಂತೆ ಮೋಕ್ಷವು ಕರಗತವಾಗುವುದು ||೫೨||

ಧ್ಯಾನ ಮದಿಷ್ಟಲಿಂಗಮು ನಹರ್ನಿಶಮುಂ ನೆನೆ ವೇಕನಿಷ್ಠೆ ತದ್ |
ಜ್ಞಾನಪರಾಯಣಾಮಳಮನೋಲಯಮೇ ಸುಸಮಾಧಿ ತಲ್ಲಯ ||
ಸ್ಥಾನ ಮೆನಿಪ್ಪ ಲಿಂಗಮು ನನಾರತ ಮಂಗದ ಮೇಲೆ ಭಕ್ತಿಸ |
ನ್ಮಾನವಿಧಾನದಿಂ ಧರಿಸೆ ಧಾರಣಮೆಂಬ ಪದಂ ಶಿವಾಧವಾ ||೫೩||

ಟೀಕೆ—ಇಷ್ಟಲಿಂಗಮಂ-ಇಷ್ಟಲಿಂಗವನ್ನು, ಅಹರ್ನಿಶಮುಂ-ಪಗಲಿರುಳೂ, ನೆನೆವ-ಸ್ಮರಿಸುವ, ಏಕನಿಷ್ಠೆ-ಏಕಭಾವನೆ, ಧ್ಯಾನಂ-ಧ್ಯಾನಯೋಗವು. ತದ್ಜ್ಞಾನ ಪರಾಯಣಾಮಳಮನೋಲಯಮೆ, ತತ್-ಆಇಷ್ಟಲಿಂಗದಲ್ಲಿಯ, ಜ್ಞಾನ-ಜ್ಞಾನ ದಲ್ಲಿ, ಪರಾಯಣ-ಎರಕವುಳ್ಳ, ಅಮಳ-ನಿರ್ಮಳವಾದ, ಮನೋಲಯಮೆ-ಮನವ ಲಯಿಸುವುದೇ, ಸುಸಮಾಧಿ-ಒಳ್ಳಿತ್ತಾದಸಮಾಧಿಯೋಗವು. ತಲ್ಲಯಸ್ಥಾನಮೆ ನಿಪ್ಪ-ಆ ಮನೋಲಯಕ್ಕೆ ಸ್ಥಾನವೆನಿಸುವಂಥ, ಲಿಂಗಮಂ-ಇಷ್ಟಲಿಂಗವನ್ನು, ಅನಾರತಂ-ಎಡೆವಿಡದೆ, ಅಂಗದಮೇಲೆ-ಶರೀರದಮೇಲೆ, ಭಕ್ತಿಸನ್ಮಾನವಿಧಾನದಿಂ-ಭಕ್ತಿಯಉಪಚಾರಕ್ರಿಯೆಗಳಿಂದೆ, ಧರಿಸೆ-ಧರಿಸಲಾಗಿ, ಧಾರಣಮೆಂಬಪದಂ-ಧರಿಸು ವಂಥಯೋಗವು ||೫೩||

ಟಿಪ್ಪಣಿ—ಹಗಲಿರುಳೂ ಇಷ್ಟಲಿಂಗವನ್ನು ಸ್ಮರಿಸುವ ಭಾವನೆಯೊಂದಿರುವುದೇ ಧ್ಯಾನಯೋಗವು. ಆ ಇಷ್ಟಲಿಂಗದ ಅರಿವಿನಲ್ಲಿ ಎರಕವಾಗಿ ಮನಸ್ಸನ್ನು ಲಯಗೊಳಿಸುವುದೇ ಸಮಾಧಿಯೋಗವು. ಆ ಮನಸ್ಸಿನ ಲಯಕ್ಕೆ ಆಶ್ರಯಸ್ಥಾನವಾದ ಇಷ್ಟಲಿಂಗವನ್ನು ಭಕ್ತಿಕ್ರಿಯೆಯನ್ನಾಚರಿಸುತ್ತ ಎಡೆವಿಡದೆ ಶರೀರದಮೇಲೆ ಧರಿಸಿರುವುದೇ ಧಾರಣಯೋಗವು. ||೫೩||

ಸೂನೃತ ಮಿಷ್ಟಲಿಂಗ ಮಮಳಾಂತರಜೀವಕಳಾಖ್ಯಲಿಂಗ ಮಾ |
ಹ್ವಾನವಿಸರ್ಜನಾಗಮ ಸಮಾಧಿವಿಕಲ್ಪವಿಹೀನತೃಪ್ತಿಭಾ ||
ವಾನುಭವಪ್ರಸಿದ್ಧಘನಲಿಂಗಮ ನೀಕ್ಷಿಸೆ ತಾನೆ ಧಾರಣ |
ಧ್ಯಾನಸಮಾಧಿಗಳ್ತ್ರಿವಿಧಲಕ್ಷಣಸಮ್ಮತಿಯಿಂ ಶಿವಾಧವಾ ||೫೪||

ಟೀಕೆ—ಸೂನೃತಂ-ಸತ್ಯಸ್ವರೂಪವಾದ, ಇಷ್ಟಲಿಂಗಂ-ಇಷ್ಟಲಿಂಗವು, ಅಮಳಾಂತರಜೀವಕಳಾಖ್ಯಲಿಂಗಂ-ಅಮಳ-ನಿರ್ಮಳವಾದ, ಅಂತರ-ಪ್ರಾಣವೆಂಬ, ಜೀವಕಳಾಖ್ಯ-ಜೀವಚೈತನ್ಯವೆಂಬ ಪೆಸರುಳ್ಳ, ಲಿಂಗಂ-ಲಿಂಗವು, ಆಹ್ವಾನವಿಸರ್ಜನಾಗಮ ಸಮಾಧಿವಿಕಲ್ಪವಿಹೀನತೃಪ್ತಿಭಾವಾನುಭವ ಪ್ರಸಿದ್ಧಘನಲಿಂಗಮಂ-ಆಹ್ವಾನ ವಿಸರ್ಜನ-ಆಹ್ವಾನವಿಸರ್ಜನಗಳು, ಆಗಮ-ಭಿನ್ನಕ್ರಿಯೆಗಳು, ಸಮಾಧಿ-ಮನಸ್ಸಮಾಧಾನವು, ವಿಕಲ್ಪ-ಸಂಕಲ್ಪವಿಕಲ್ಪವೆಂಬ ಇವುಗಳು, ವಿಹೀನ-ಇಲ್ಲದಂಥ, ತೃಪ್ತಿಭಾವ-ಪರಿಣಾಮಸ್ವರೂಪವಾದ, ಅನುಭವ-ಜ್ಞಾನದಿಂದೆ, ಪ್ರಸಿದ್ಧ-ಪ್ರಕಟವಾದ, ಘನ-ದೊಡ್ಡದಾದ, ಲಿಂಗಮಂ-ಭಾವಲಿಂಗವು ಈ ಮೂರನ್ನು, ತ್ರಿವಿಧಲಕ್ಷಣ

ಸಮ್ಮತಿಯಿಂ-ಪೂಜನಸ್ಮರಣಮನೋಲಯಗಳೆಂಬ ಮೂರುತೆರನಾದ ಲಕ್ಷಣಂಗ ಕೂಟದಿಂದ, ಈಕ್ಷಿಸೆ-ನೋಡಲಾಗಿ, ತಾನೆ-ಅದುತಾನೆ, ಧಾರಣಧ್ಯಾನಸಮಾ ಗಳ್-ಧಾರಣಧ್ಯಾನಸಮಾಧಿಗಳೆಂಬ ತ್ರಿವಿಧಯೋಗಂಗಳು. ||೫೪||

ಟಿಪ್ಪಣಿ—ಸತ್ಯಸ್ವರೂಪವಾದ ಇಷ್ಟಲಿಂಗವನ್ನು ಪೂಜಿಸುವುದು, ಅಂತರ್ಗತ ಜೀವಕಳೆಯ ಪ್ರಾಣಲಿಂಗವನ್ನು ಸ್ಮರಿಸುವುದು, ಆಹ್ವಾನವಿಸರ್ಜನೆ ಮೊದಲಾದ ಬಹಿಃಕ್ರಿಯೆಗಳೂ ಮನಸ್ಸಿ ಸಂಕಲ್ಪವಿಕಲ್ಪಗಳೂ ಸಹ ಇಲ್ಲದಿರುವ-ತೃಪ್ತಿಪರಿಣಾಮಿಯಾದ-ಅನುಭವೈಕಗೋಚರವಾದ-ಭಾ ಲಿಂಗದಲ್ಲಿ ಮನೋಲಯಗೊಳಿಸುವುದು-ಇವೇ ಕ್ರಮವಾಗಿ ಧ್ಯಾನ ಧಾರಣ ಸಮಾಧಿಗಳೆನಿಸಿಕೊ ವುವು. ||೫೪||

ಧ್ಯಾನಮೆ ಧಾರಣಂ ವಿಮಲಧಾರಣಮೇ ಸುಸಮಾಧಿ ಯಾಸಮಾ |
ಧಾನಮೆ ತಾನೆ ಧಾರಣ ಮದೇ ವಪುರಂತರಮಪ್ಪ ನಿರ್ಮಳ ||
ಧ್ಯಾನ ಮಿವೊಂದ ನೊಂದು ಬಿಡದಾಶ್ರಯಿಸಿರ್ಪುದೆ ಯೋಗಮೆಂಬ ಸು |
ಜ್ಞಾನವಿಚಾರವೇ ಗುರುಸದುಕ್ತ್ಯುಪದೇಶಗುಣಂ ಶಿವಾಧವಾ ||೫೫||

ಟೀಕೆ—ಧ್ಯಾನಮೆ-ಧ್ಯಾನಯೋಗವೇ, ಧಾರಣಂ-ಧಾರಣಯೋಗವು, ವಿಮ ಳಧಾರಣಮೇ-ಆ ನಿರ್ಮಲವಾದ ಧಾರಣಯೋಗವೇ, ಸುಸಮಾಧಿ-ಶೋಭನವಾ ಸಮಾಧಿಯೋಗವು (ಇದು ಅನುಲೋಮದಿಂದೆ ನೋಡುವಕ್ರಮವು). ಆಸಮಾಧಾ ನಮೆ-ಆ ಸಮಾಧಿಯೋಗವೇ, ತಾನೆ, ಧಾರಣಂ-ಧಾರಣಯೋಗವು. ಅದೇ-ಆಧಾ ರಣಯೋಗವೇ, ವಪುರಂತರಮಪ್ಪ-ಪ್ರಾಣಲಿಂಗಸಂಬಂಧವಾದ, ನಿರ್ಮಳ-ಕಳಂಕ ಲ್ಲದ, ಧ್ಯಾನಂ-ಧ್ಯಾನಯೋಗವು (ಇದು ಪ್ರತಿಲೋಮ) ಇವು-ಈ ಯೋಗಂಗಳು, ಒಂದನೊಂದು ಬಿಡದೆ-ಒಂದಕ್ಕೊಂದನ್ಯೋನ್ಯವಾಗಿ, ಆಶ್ರಯಿಸಿರ್ಪುದೆ-ಬೆರಸಿರ್ಪು ದೇ, ಯೋಗಮೆಂಬ-ಶಿವಯೋಗವೆನಿಸುವ, ಸುಜ್ಞಾನವಿಚಾರವೇ-ಮಹಾಜ್ಞಾನದ ವಿವೇಕವೇ, ಗುರುಸದುಕ್ತ್ಯುಪದೇಶಗುಣಂ-ಗುರು-ಶ್ರೀಗುರುವಿನ, ಸದುಕ್ತಿ-ಒಳ್ಳೆ ತಾದ ವಚನದ, ಉಪದೇಶಗುಣಂ-ಬೋಧೆಯಗುಣವು. ||೫೫||

ಟಿಪ್ಪಣಿ—ಅನುಲೋಮಕ್ರಮವಾಗಿ ಧ್ಯಾನವೇ ಧಾರಣವಾಗಿಯೂ, ಆ ಧಾರಣವೇ ಸಮಾ ಧಿಯಾಗಿಯೂ, ವಿಲೋಮಕ್ರಮವಾಗಿ ಸಮಾಧಿಯೇ ಧಾರಣವಾಗಿಯೂ, ಧಾರಣವೇ ಧ್ಯಾನವಾಗಿ ಯೂ, ಹೀಗೆ ಇವು ಒಂದನ್ನೊಂದು ಎಡೆಬಿಡದೆ ಆಶ್ರಯಿಸಿಕೊಂಡಿರುವಿಕೆಯೇ ಶಿವಯೋಗವಾಗಿ ಯೂ ಇರುವುದೆಂಬ ವಿಚಾರವುಂಟಾಗುವುದೇ ಶ್ರೀಗುರುವಿನ ಉಪದೇಶದ ಫಲವು. ||೫೫||

ಅವತಾರಿಕೆ—ಶಿವಶರಣಂ ಸಂಸಾರದೊಳಿರ್ದೊಡಂ ಆತಂಗಾಸಂಸಾರವು ಬಂಧಕವಾಗಲಾ ಯದೆಂದು ಪೇಳುತಿರ್ದಪಂ.—

ಸ್ಫಟಿಕಮಣಿ ಸ್ವಭಾವವಿಮಲಂ ಪರಮಾರ್ಥದಿ ನೀಕ್ಷಿಪಲ್ಲಿ ಸಂ |
ಘಟಿಸಿದುಪಾಧಿಯಿಂ ಮಲಿನವಾಸನೆಯಾದೊಡೆ ದೋಷಮೇಂ ಪರಿ ||

ಸ್ಫುಟತರಚಿತ್ಪ್ರಕಾಶಘನಮೂರ್ತಿಯೆನಿಪ್ಪ ಶಿವಾತ್ಮಯೋಗಿಯಂ |
ಪಟುಬಹಿರಾವೃತಪ್ರಚುರಸಂಸೃತಿ ಪೊರ್ದ್ದಿದೊಡೇಂ ಶಿವಾಧವಾ ||೫೬||

ಟೀಕೆ—ಸ್ಫಟಿಕಮಣಿ-ಪಳುಕಿನಮಣಿಯು, ಸ್ವಭಾವವಿಮಲಂ-ಸಭಾವದಿಂದೆ ನಿರ್ಮಲವು, ಪರಮಾರ್ಥದಿಂ-ಯಥಾರ್ಥದಿಂದೆ, ಈಕ್ಷಿಪಲ್ಲಿ-ನೋಡುವಲ್ಲಿ, ಸಂಘಟಿಸಿದ-ಪ್ರಾಪ್ತವಾದ, ಉಪಾಧಿಯಿಂ, ಮಲಿನವಾಸನೆಯಾದೊಡೆ-ಮಸುಳಿಸಿದ ನಿಜಸ್ವರೂಪವನುಳ್ಳುದಾದೊಡೆ, ದೋಷಮೇಂ-ದೂಷ್ಯವೇನು ? ಪರಿಸ್ಫುಟತರಚಿತ್ಪ್ರಕಾಶಘನಮೂರ್ತಿಯೆನಿಪ್ಪ-ಪರಿಸ್ಫುಟತರ-ಅತ್ಯಂತ ವ್ಯಕ್ತವಾದ, ಚಿತ್ಪ್ರಕಾಶ-ಜ್ಞಾನಪ್ರಕಾಶದಿಂ, ಘನಮೂರ್ತಿಯೆನಿಪ್ಪ-ದಿವ್ಯವಿಗ್ರಹವನುಳ್ಳಾತನೆನಿಸುವ, ಶಿವಾತ್ಮಯೋಗಿಯಂ-ಶಿವಸ್ವರೂಪನಾದ ಯೋಗೀಶ್ವರನನು, ಪಟುಬಹಿರಾವೃತಪ್ರಚುರಸಂಸೃತಿ-ಪಟು-ಸಮರ್ಥವಾದ, ಬಹಿರಾವೃತ-ಬಾಹ್ಯದಲ್ಲಿ ಮುಸುಕಿದ, ಪ್ರಚುರ-ಬಹಳವಾದ ಸಂಸೃತಿ-ಸಂಸಾರವು, ಪೊರ್ದಿದೊಡೇಂ-ಸಂಬಂಧಿಸಿದೊಡೇನು (ಆ ಸ್ಫಟಿಕದಂತೆ ನಿರ್ಲೇಪನೆಂಬುದರ್ಥಂ) ? ಈ ಅರ್ಥದಲ್ಲಿ "ಸಮಸ್ತಜಗದಾತ್ಮಾಪಿ ಸಂವಿದ್ರೂಪೋ ಮಹಾಮತಿಃ | ಲಿಪ್ಯತೇ ನೈವಸಂಸಾರೈರ್ಯಥಾಧೂಮಾದಿಭಿರ್ನಭಃ" ಎಂಬುದು ಪ್ರಮಾಣವು. ||೫೬||

ಟಿಪ್ಪಣಿ—ಸ್ಫಟಿಕದ ಮಣಿಯು ಸ್ವಭಾವತಃ ನಿರ್ಮಲವಾದುದು. ಅದು ತನ್ನ ಬಳಿಯಲ್ಲಿಡಲ್ಪಟ್ಟ ಬೇರೆಬಣ್ಣದ ವಸ್ತುಗಳ ಸಂಬಂಧದಿಂದ ತಾನೂ ಅವುಗಳ ಬಣ್ಣವುಳ್ಳುದಾಗಿಯೇ ಕಾಣುವುದು. ಆದಮಾತ್ರಕ್ಕೇ ಸ್ವತಸ್ಸಿದ್ಧವಾದ ಅದರ ನೈರ್ಮಲ್ಯವು ಹೋಗಲಿಲ್ಲ. ಅದರಂತೆಯೇ ಜ್ಞಾನಪ್ರಕಾಶದಿಂದ ಅಪ್ರಾಕೃತಶರೀರಿಯಾದ ಶಿವಯೋಗೀಶ್ವರನು ಹೊರಗೆ ಸಂಸಾರಸಂಬಂಧವುಳ್ಳವನಾಗಿ ತೋರಿದರೂ ಸ್ವಭಾವತಃ ಅವನು ಸಂಸಾರಬಂಧರಹಿತನಾಗಿಯೇ ಇರುವನು. ||೫೬||

ಜ್ಞಾನಿಯೊ ಕರ್ಮಿಯೋ ಭವಿಯೊ ಭಕ್ತನೊ ಬದ್ಧನೊ ಮುಕ್ತನೋ ಶಿವಂ |
ತಾನೊ ವಿವೇಕದಿಂ ತಿಳಿದುನೋಡೆ ಮಹಾಘನಲಿಂಗಯೋಗಿ ಯಿ ||
ನ್ನೇನಹನೋ ನಿರೂಪಿಸುವೊಡಾನರಿಯೆಂ ಪರಮೈಕ್ಯತತ್ವವಿ |
ದ್ಯಾನಿಧಿತಾನೆ ಬಲ್ಲ ನಿತರರ್ಗರಿಯಲ್ಬಹುದೇ ಶಿವಾಧವಾ ||೫೭||

ಟೀಕೆ—ಮಹಾಘನಲಿಂಗಯೋಗಿ-ಅಧಿಕವಾದ ಶಿವಲಿಂಗದಲ್ಲಿ ಏಕತ್ವವನುಳ್ಳ ಶರಣನು, ಜ್ಞಾನಿಯೊ-ಜ್ಞಾನವುಳ್ಳವನೊ ? ಕರ್ಮಿಯೊ-ಕ್ರಿಯೆಯುಳ್ಳವನೊ? ಭವಿಯೊ-ಲಿಂಗವಿಲ್ಲದ ಭವಿಯೊ ? ಭಕ್ತನೊ-ಶಿವಭಕ್ತನೊ ? ಬದ್ಧನೊ-ಸಂಸಾರಪಾಶಬದ್ಧನೊ ? ಮುಕ್ತನೋ-ಸಂಸಾರಪಾಶದಿಂ ಮುಕ್ತನಾದಾತನೊ ? ಶಿವಂ ತಾನೊ-ಶಿವನೇತಾನೊ ? ವಿವೇಕದಿಂ ತಿಳಿದುನೋಡೆ-ವಿಚಾರದಿಂದಾರೈದುನೋಡಲಾಗಿ, ಇನ್ನೇನಹನೊ-ಇನ್ನೇನು ರೂಪಾಗುವನೊ ? ನಿರೂಪಿಸುವೊಡೆ-ಹೇಳು

ವೊಡೆ, ಆನರಿಯೆಂ–ನಾನರಿಯೆನು, ಪರಮೈಕ್ಯತತ್ವವಿದ್ಯಾನಿಧಿ–ಪರಮೈಕ್ಯ–ಲಿಂಗೈಕ್ಯದ, ತತ್ವ–ಸ್ವರೂಪದ, ವಿದ್ಯಾ–ಜ್ಞಾನಕ್ಕೆ, ನಿಧಿ–ಸ್ಥಾನವಾದ ಶರಣನು–ತಾನ ಬಲ್ಲಂ–ತಾನೆ ತಿಳಿದವನು, ಇತರರ್ಗರಿಯಲ್ಬಹುದೆ–ಬೇರೊಬ್ಬರಿಂದ ತಿಳಿಯಲಾಗುವುದೆ ? ಅರಿಯಲಾಗದೆಂಬುದರ್ಥಂ (ಶರಣಂ ಸಂಸಾರಿಯಾಗಿರ್ದೂ ನಿರ್ಲೇಪನಾಪ್ಪುದು ಆರಿಗೂ ತಿಳಿಯದೆಂಬುದಭಿಪ್ರಾಯಂ). ||೫೭||

ಟಿಪ್ಪಣಿ—ಸರ್ವಾಂಗಲಿಂಗಸಂಗಿಯಾಗಿರುವ ಶಿವಯೋಗಿಯು ಜ್ಞಾನಸಂಪನ್ನನೋ ! ಕರ್ಮಸಂಪನ್ನನೋ ! ಲಿಂಗಹೀನನೋ ! ಲಿಂಗಯುಕ್ತನಾದ ಭಕ್ತನೋ ! ಸಂಸಾರಬದ್ಧನೋ ! ಅಥವ ಮುಕ್ತನೋ ! ತಾನೇ ಶಿವನೋ ! ಇಲ್ಲವೆ ಇನ್ನಾವರೂಪಾಗಿರುವನೋ ! ಅದನ್ನು ವಿವರಿಸುವುದಕ್ಕೆ ನಾಶಕ್ತನಲ್ಲ. ಲಿಂಗಾಂಗಸಾಮರಸ್ಯವಿದ್ಯಾವಿಚಕ್ಷಣನಾದ ಶರಣನೇ ಅದನ್ನು ಅರಿಯಬಲ್ಲನಲ್ಲದೆ ಇತರರಿಗೆ ಅದು ತಿಳಿಯಲಶಕ್ಯವು. ||೫೭||

ಅವತಾರಿಕೆ—ಶರಣನು ಸರ್ವಾಂಗಲಿಂಗಸಂಬಂಧಿಯಾಗಿರ್ಪನೆಂಬುದಂ ಪೇಳುತಿರ್ದಪಂ–

ಅಂಗಮೆ ಲಿಂಗಮಿಂದ್ರಿಯಮೆ ಜಂಗಮಮೆಂಬ ಕೃತಾರ್ಥಬುದ್ಧಿಪಾ |
ರಂಗತಮಾಗಿತಾತ್ವಿಕವಿಚಾರವಿವೇಕಮ ನೆಯ್ದಿ ನಿಷ್ಠೆಯಿಂ ||
ಪಿಂಗದೆ ತದ್ದ್ವಿಧಾರ್ಪಣಕಳಾಮಣಿಯಾಗಿಹ ಶಕ್ತಿ ದೇಶಿಕಾ |
ಪಾಂಗಕೃಪಾಸುಧಾರಸಪರಿಪ್ಲುತಯುಕ್ತಿಕಣಾ ಶಿವಾಧವಾ ||೫೮||

ಟೀಕೆ— ಅಂಗಮೆ–ಅಂಗಸ್ಥಲವೇ, ಲಿಂಗಂ–ಲಿಂಗವು, ಇಂದ್ರಿಯಮೆ–ಪಂಚೇಂದ್ರಿಯಂಗಳೇ, ಜಂಗಮಮೆಂಬ–ಪ್ರಾಣಲಿಂಗವೆಂಬ, ಕೃತಾರ್ಥಬುದ್ಧಿ–ಧನ್ಯವಾದ ಬುದ್ಧಿಯು, ಪಾರಂಗತಮಾಗಿ–ಸಾಂಗಮಾಗಿ, ತಾತ್ವಿಕವಿಚಾರವಿವೇಕಮ ನೆಯ್ದಿ–ತಾತ್ವಿಕ–ಯಥಾರ್ಥವಾದ, ವಿಚಾರ–ಜ್ಞಾನವೆಂಬ, ವಿವೇಕಮನೆಯ್ದಿ–ಪೃಥಕ್ಕರಿಸುವ ಭಾವನೆಯನ್ನು ಹೊಂದಿ, ನಿಷ್ಠೆಯಿಂ–ದೃಢತ್ವದಿಂದ, ಪಿಂಗದೆ–ತೊಲಗದೆ, ತದ್ದ್ವಿಧಾರ್ಪಣಕಳಾಮಣಿಯಾಗಿಹ–ತತ್–ಆ ಇಷ್ಟಪ್ರಾಣಲಿಂಗಂಗಳಲ್ಲಿಯ, ದ್ವಿಧಾರ್ಪಣ–ರೂಪರುಚ್ಯರ್ಪಣಂಗಳ, ಕಳಾ–ಕಳಾಜ್ಞಾನದಿಂದ, ಮಣಿಯಾಗಿಹ ಪ್ರಕಾಶಮಯವಾದಂಥ, ಶಕ್ತಿ–ಆಶರಣನಸಾಮರ್ಥ್ಯವು, ದೇಶಿಕಾಪಾಂಗಕೃಪಾಸುಧಾರಸಪರಿಪ್ಲುತಯುಕ್ತಿಕಣಾ–ದೇಶಿಕ–ಶ್ರೀಗುರುವಿನ, ಅಪಾಂಗ–ಕಡೆಗಣ್ಣನೋಟದ, ಕೃಪಾಸುಧಾರಸ–ಕರುಣಾಮೃತರಸದಲ್ಲಿ, ಪರಿಪ್ಲುತ–ನೆನೆಯಲ್ಪಟ್ಟ, ಯುಕ್ತಿಕಣಾ–ಬುದ್ಧಿಯಲಾ ! ||೫೮||

ಟಿಪ್ಪಣಿ—ಅಂಗವೇ ಲಿಂಗ, ಇಂದ್ರಿಯವೇ ಜಂಗಮ ವೆಂಬ ಉತ್ತಮಬುದ್ಧಿಯನ್ನು ಸಮಗ್ರವಾಗಿ ಪಡೆದು, ಈ ರೂಪವಾದ ತತ್ವಾರ್ಥವಿಚಾರದ ಜ್ಞಾನದಿಂದ ದೃಢನಿಷ್ಠೆಗೊಂಡು, ಆ ಲಿಂಗ ಜಂಗಮರುಗಳಿಗೆ ರೂಪ ರುಚಿಗಳನ್ನು ಅನುಸಂಧಾನಕ್ರಮದಿಂದರ್ಪಿಸುವ ಜ್ಞಾನದಿಂದ ಕೂಡಿದ ಶಿವಶರಣನ ಶಕ್ತಿಯು, ಶ್ರೀಗುರುವಿನ ಕರುಣಾಕಟಾಕ್ಷದಿಂದ ಲಭಿಸತಕ್ಕುದು ||೫೮||

ಇಂದ್ರಿಯ ಮಿಂದ್ರಿಯಪ್ರಕರದಲ್ಲಿ ಮನಂ ಮನದಲ್ಲಿ ಬುದ್ಧಿ ತ |
ತ್ಸಾಂದ್ರಸುಬುದ್ಧಿಯಲ್ಲಿ ವಿಷಯಂ ವಿಷಯವ್ರಜದಲ್ಲಿ ಸಂದುನಿ ||
ಸ್ತಂದ್ರನಿರಂಗನಿರ್ಮಳ ನಿರಾವರಣತ್ವಮ ನೆಯ್ದಿಭಕ್ತಿಯೋ |
ಗೀಂದ್ರಪದಪ್ರಸಿದ್ಧ ಶರಣಂ ಪರಿರಂಜಿಸುವಂ ಶಿವಾಧವಾ ||೪೯||

ಟೀಕೆ—ಇಂದ್ರಿಯಂ-ಶರಣನ ಅಂಗೇಂದ್ರಿಯಂಗಳು, ಇಂದ್ರಿಯಪ್ರಕರದಲ್ಲಿ-ಲಿಂಗೇಂದ್ರಿಯಸಮೂಹದಲ್ಲಿ, ಮನಂ-ಶರಣನಮನವು, ಮನದಲ್ಲಿ-ಲಿಂಗದಮನದಲ್ಲಿ, ಬುದ್ಧಿ-ಶರಣನಬುದ್ಧಿಯು, ತತ್ಸಾಂದ್ರಸುಬುದ್ಧಿಯಲ್ಲಿ-ಆಲಿಂಗದ ದಟ್ಟತ್ತಾದಬುದ್ಧಿಯಲ್ಲಿ, ವಿಷಯಂ-ಶರಣನವಿಷಯಂಗಳು, ವಿಷಯವ್ರಜದಲ್ಲಿ-ಲಿಂಗವಿಷಯಸಮೂಹದಲ್ಲಿ, ಸಂದು-ಬೆರೆದು, ಭಕ್ತಿಯೋಗೀಂದ್ರಪದಪ್ರಸಿದ್ಧಶರಣಂ-ಭಕ್ತಿಯೋಗೀಂದ್ರ-ಭಕ್ತಿಯಕೂಟದಲ್ಲಿ ಶ್ರೇಷ್ಠರಾದ ಶರಣರ, ಪದ-ಪದದಲ್ಲಿ, ಪ್ರಸಿದ್ಧ-ಪ್ರಖ್ಯಾತನಾದ, ಶರಣಂ-ಶರಣನು, ನಿಸ್ತಂದ್ರನಿರಂಗನಿರ್ಮಳನಿರಾವರಣತ್ವಮಂ-ನಿಸ್ತಂದ್ರ-ಮಾಯಾಜಾಡ್ಯವಿಲ್ಲದಂಥ, ನಿರಂಗ-ನಿರ್ದೇಹವಾದ, ನಿರ್ಮಳ-ಸ್ವಚ್ಛವಾದ, ನಿರಾವರಣತ್ವಮಂ-ಮಾಯಾವರಣವಿಲ್ಲದಿಹತನವನು, ಎಯ್ದಿ-ಪೊರ್ದಿ, ಪರಿರಂಜಿಸುವಂ-ಮಿಗೆಬಪ್ಪುತ್ತಿರ್ಪನು ||೪೯||

ಟಿಪ್ಪಣಿ—ಶರಣನ ದೇಹ ಕರಣ ಮನ ಬುದ್ಧಿ ವಿಷಯಾದಿಗಳೆಲ್ಲವೂ ಲಿಂಗ ದೇಹೇಂದ್ರಿಯ ಮನ ಬುದ್ಧಿ ವಿಷಯಾದಿಗಳಲ್ಲಿ ಐಕ್ಯವಾಗಿರುವ ಕಾರಣ, ಶಿವಮಯನಾದ ಆ ಶಿವಯೋಗಿಯು ಬಂಧಕಾರಣಭೂತಗಳಾದ ರಾಗದ್ವೇಷಾದಿಮಾಯಾವರಣಗಳೊಂದೂ ಇಲ್ಲದೆ ನಿರ್ಲೇಪನಾಗಿರುವನು ||

ನುಡಿವೆಡೆಯಲ್ಲಿ ನೋಡುವೆಡೆಯಲ್ಲಿ ರಮಿಪ್ಪೆಡೆಯಲ್ಲಿ ವಸ್ತುವಂ |
ಪಿಡಿವೆಡೆಯಲ್ಲಿ ಭೋಗಿಪೆಡೆಯಲ್ಲಿ ಸುಖಂಬಡೆವಲ್ಲಿ ದೇಹಮಂ ||
ಬಿಡುವೆಡೆಯಲ್ಲಿ ಲಿಂಗಕಳೆ ಲಿಂಗಗುಣಂ ಘನಲಿಂಗಯೋಗಮಾ |
ದೊಡೆ ಬಳಿಕಾಮಹಾತ್ಮನ ನಡೇ ನೆನಬರ್ಪುದದಂ ಶಿವಾಧವಾ ||೫೦||

ಟೀಕೆ—ನುಡಿವೆಡೆಯಲ್ಲಿ-ಮಾತನಾಡುವೆಡೆಯಲ್ಲಿಯೂ, ನೋಡುವೆಡೆಯಲ್ಲಿ-ನೋಡುವಕಾಲದಲ್ಲಿಯೂ, ರಮಿಪ್ಪೆಡೆಯಲ್ಲಿ-ಸುರತಗೋಷ್ಠಿಯಲ್ಲಿಯೂ, ವಸ್ತುವಂ ಪಿಡಿವೆಡೆಯಲ್ಲಿ-ಒಂದುಪದಾರ್ಥಮಂಪಿಡಿವಬಳಿಯಲ್ಲಿಯೂ, ಭೋಗಿಪೆಡೆಯಲ್ಲಿ-ವಿಷಯಭೋಗದಲ್ಲಿಯೂ, ಸುಖಂಬಡೆವಲ್ಲಿ-ಪರಿಣಮಿಸುವಲ್ಲಿಯೂ, ದೇಹಮಂಬಿಡುವೆಡೆಯಲ್ಲಿ-ದೇಹಾವಸಾನಕಾಲದಲ್ಲಿಯೂ, ಲಿಂಗಕಳೆ-ಲಿಂಗಚೈತನ್ಯವು, ಲಿಂಗಗುಣಂ-ಲಿಂಗಸನ್ಮಾರ್ಗವು, ಘನಲಿಂಗಯೋಗಂ-ಆ ಮಹಾಲಿಂಗದಲ್ಲಿಸಂಬಂಧವು, ಆದೊಡೆ-ಉಂಟಾದೊಡೆ, ಬಳಿಕ-ಮರಳಿ, ಆಮಹಾತ್ಮನಂ-ಆಶರಣನನ್ನು, ಅದಂ-ಆಶರಣನ ಮಾರ್ಗವನು, ಅದೇನೆನಬರ್ಪುದು-ಅದೇನೆಂದುಪೇಳಬಹುದು ! ಅಶಕ್ಯವೆಂಬುದರ್ಥಂ

(ಈ ಅರ್ಥದಲ್ಲಿ "ಇಂದ್ರಿಯಾದಾಗತಂಕಿಂಚಿ ದ್ಯತ್ಸುಖಂತಚ್ಛಿವಾರ್ಪಿತಂ || ತತ್ಪ್ರ ಸಾದಂಚಭೋಕ್ತವ್ಯಂ ತದಿಂದ್ರಿಯಮುಖೇನಚ" ಎಂದು ವಾತುಲತಂತ್ರವಚ ವುಂಟು) ||೬೦||

ಟಿಪ್ಪಣಿ—ಮಾತನಾಡುವಾಗ, ನೋಡುವಾಗ, ಕ್ರೀಡಿಸುವಾಗ, ಪದಾರ್ಥವಂ ಗ್ರಹಿಸುವಾಗ, ವಿಷಯಮಂ ಭೋಗಿಸುವಾಗ, ಸುಖವನ್ನನುಭವಿಸುವಾಗ, ದೇಹವನ್ನಳಿಯುವಾಗ, ಇಂಥ ಎಲ್ಲ ಸಮಯಗಳಲ್ಲೂ ಮಹಾಲಿಂಗವೇ ಕರ್ತೃವಲ್ಲದೆ ಅಲ್ಲಿ ತನ್ನಸಂಬಂಧವೇನೂ ಇಲ್ಲವಾಗಿ, ಆ ಲಿಂ ಪ್ರಸಾದ ಸುಖವನ್ನನುಭವಿಸುತ್ತಿರುವ ಮಹಾತ್ಮನನ್ನು ಏನೆಂದು ವರ್ಣಿಸಲಾದೀತು। ||೬೦||

ತ್ರಿವಿಧಪದಾರ್ಥಮಂ ತ್ರಿವಿಧಲಿಂಗಮುಖಾರ್ಪಿತಮಂ ಗುರೂಪದೇ |
ಶವಿಧಿವಿಧಾನದಿಂ ದರಿದು ಮಾಡಿ ತದೀಯಪದಾರ್ಥಜಾತವಾ ||
ಸ್ತವನಿಜಮಪ್ಪ ರೂಪರುಚಿ ತೃಪ್ತಿ ವಿಶೇಷಮಹಾಪ್ರಸಾದಮಂ |
ಸವಿದು ತದೈಕ್ಯಸೌಖ್ಯಪದದೊಳ್ಮೆರೆವರ್ ಶರಣರ್ ಶಿವಾಧವಾ ||೬೧||

ಟೀಕೆ—ಶರಣರ್-ಶಿವಶರಣರು, ಗುರೂಪದೇಶವಿಧಿವಿಧಾನದಿಂದೆ-ಗುರೂಪ ದೇಶವಿಧಿ-ಶ್ರೀಗುರುವಚನವೆಂಬವಿಧಿವಾಕ್ಯದ, ವಿಧಾನದಿಂದೆ-ನಡಸುವುದರಿಂದೆ, ತ್ರಿವಿ ಧಪದಾರ್ಥಮಂ-ಅಂಗಪ್ರಾಣಭಾವವೆಂಬ ಮೂರುಪದಾರ್ಥವನು, ತ್ರಿವಿಧಲಿಂಗ ಮುಖಾರ್ಪಿತಮಂ-ಇಷ್ಟಪ್ರಾಣಭಾವವೆಂಬ ಮೂರುಲಿಂಗದಮುಖದಲ್ಲಿ ಅರ್ಪಿತ ವನು, ಅರಿದು-ತಿಳಿದು, ಮಾಡಿ-ಸಮರ್ಪಣೆಯಂಮಾಡಿ, ತದೀಯಪದಾರ್ಥಜಾತ ವಾಸ್ತವನಿಜಮಪ್ಪ-ತದೀಯ-ಆಲಿಂಗಸಂಬಂಧವಾದ, ಪದಾರ್ಥಜಾತ-ಪದಾರ್ಥಸ ಮೂಹದ, ವಾಸ್ತವ-ವಸ್ತುಸಂಬಂಧದಿಂದ, ನಿಜಮಪ್ಪ-ಸಹಜವಹ, ರೂಪರುಚಿ ತೃಪ್ತಿವಿಶೇಷಮಹಾಪ್ರಸಾದಮಂ-ರೂಪರುಚಿತೃಪ್ತಿ-ರೂಪರುಚಿತೃಪ್ತಿಯೆಂಬ ವಿಶೇ ಷಮಹಾಪ್ರಸಾದಮಂ-ನಿರತಿಶಯವಾದ ಮಹಾಪ್ರಸಾದವನು, ಸವಿದು-ಭೋ ಗಿಸಿ, ತದೈಕ್ಯಸೌಖ್ಯಪದದೊಳ್-ಆ ಪ್ರಸಾದದಲ್ಲಿಕೂಡಿರ್ಪ ಪರಿಣಾಮಪದದಲ್ಲಿ ಮೆರೆವರ್-ಪ್ರಕಾಶಿಸುವರು (ಈ ಅರ್ಥದಲ್ಲಿ "ಇಷ್ಟಲಿಂಗಾರ್ಪಿತಂಚಾನ್ನಂಪ್ರಾಣ ಲಿಂಗಾರ್ಪಿತಂಮನಃ || ಭಾವಲಿಂಗಾರ್ಪಿತಂ ತೃಪ್ತಿರಿತಿಭೇದಂವರಾನನೆ" ಎಂದು ಶಿವರಹಸ್ಯವುಂಟು). ||೬೧||

ಟಿಪ್ಪಣಿ—ಶಿವಶರಣರು, ಶ್ರೀಗುರುವು ಉಪದೇಶಿಸಿದರೀತಿಯನ್ನನುಸರಿಸಿ, ಇಷ್ಟಲಿಂಗಕ್ಕೆ ದೇಹವನ್ನರ್ಪಿಸಿ ಆ ಲಿಂಗದ ರೂಪಪ್ರಸಾದವನ್ನೂ, ಪ್ರಾಣಲಿಂಗಕ್ಕೆ ಪ್ರಾಣವನ್ನರ್ಪಿಸಿ ಆ ಲಿಂಗದ ರುಚಿಪ್ರಸಾದವನ್ನೂ, ಭಾವಲಿಂಗಕ್ಕೆ ಭಾವವನ್ನರ್ಪಿಸಿ ಆ ಲಿಂಗದ ತೃಪ್ತಿಪ್ರಸಾದವನ್ನೂ ಅನುಭ ವಿಸಿ, ತತ್ಪರಿಣಾಮಿಯಾಗಿ ಒಪ್ಪುತ್ತಿರುವರು. ||೬೧||

ಅವತಾರಿಕೆ—ಶರಣನ ಲಿಂಗಸಂಬಂಧವು ಸ್ವಭಾವಸಿದ್ಧವೆಂದು ಪೇಳುತ್ತಿರ್ದಪಂ.—

ಶರನಿಧಿ ರತ್ನಮಂ ಧರಿಸಿದಂತೆ ಮಹಾನಗ ಮೌಷಧೌಘಮಂ |
ಧರಿಸಿಹ ಮಾಳ್ಕೆ ಲಿಂಗಮ ನನಾದಿಮಯಂ ಶರಣಂ ಸ್ವಭಾವದಿಂ ||
ಧರಿಸಿಹನ್ನೈಸೆ ತನ್ನ ಮಹಿಮಾಗುಣವೈಭವಮಂ ಪ್ರಕಾಶಿಸಲ್ |
ಶರಣನ ಲಿಂಗದಂತರಮ ನಿನ್ನು ವಿಚಾರಿಪುದೇಂ ಶಿವಾಧವಾ ||೬೨||

ಟೀಕೆ—ಅನಾದಿಮಯಂ ಶರಣಂ-ಅನಾದಿಲಿಂಗಸ್ವರೂಪನಾದ ಶರಣನು, ಲಿಂಗಮಂ-ಶಿವಲಿಂಗವನು, ತನ್ನ ಮಹಿಮಾಗುಣವೈಭವಮಂ-ತನ್ನ ಮಹತ್ವವೆಂಬ ಗುಣದ ಪೆರ್ಚುಗೆಯನು, ಪ್ರಕಾಶಿಸಲ್-ಪ್ರಕಟವಮಾಡಲಿಕ್ಕಾಗಿ, ಶರನಿಧಿ-ಸಮುದ್ರವು, ರತ್ನಮಂಧರಿಸಿದಂತೆ-ರತ್ನವನ್ನು ಧರಿಸಿದಹಾಗೆ, ಮಹಾನಗಂ-ದೊಡ್ಡಿತ್ತಾದ ಪರ್ವತವು, ಔಷಧೌಘಮಂ-ಮೂಲಿಕಾಸಮೂಹವನ್ನು, ಧರಿಸಿದಮಾಳ್ಕೆ-ಧರಿಸಿದಂತೆ, ಸ್ವಭಾವದಿಂ-ಸಹಜದಿಂದೆ, ಧರಿಸಿಹನ್ನೈಸೆ-ಧರಿಸಿಹನಷ್ಟೆ ? ಶರಣನಲಿಂಗದಂತರಮಂ-ಶರಣನು ಲಿಂಗವು ಎಂಬ ತಾರತಮ್ಯವನ್ನು, ಇನ್ನು ವಿಚಾರಿಪುದೇಂ-ಇನ್ನು ವಿಚಾರಿಸುವುದೇನು ? ||೬೨||

ಟಿಪ್ಪಣಿ—ಸಮುದ್ರವು ಸ್ವಭಾವಸಿದ್ಧವಾಗಿ ರತ್ನಗಳನ್ನು ಧರಿಸಿರುವಂತೆಯೂ, ಪರ್ವತವು ಮೂಲಿಕೆಗಳನ್ನು ಒಳಕೊಂಡಿರುವಂತೆಯೂ, ಅನಾದಿಮಹಾಲಿಂಗಸ್ವರೂಪನಾದ ಶಿವಶರಣನು ತನ್ನ ಮಹತ್ವ ವೈಭವವನ್ನು ಪ್ರಕಾಶಗೊಳಿಸುವುದಕ್ಕಾಗಿ, ಶಿವಲಿಂಗವನ್ನು ಸಹಜವಾಗಿ ಧರಿಸಿಕೊಂಡಿರುವನು. ಆ ಶರಣನ ಮತ್ತೂ ಲಿಂಗದ ಸಂಬಂಧವು ಹಾಗೆ ಸ್ವಭಾವಸಿದ್ಧವಾಗಿರುವಾಗ ಅವರೀರ್ವರ ತಾರತಮ್ಯವನ್ನು ಇನ್ನು ವಿಚಾರಿಸುವುದೇನಿದೆ ? ||೬೨||

ಎಲ್ಲಿ ಮನಕ್ಕೆ ವಿಶ್ರಮಣ ಮಲ್ಲಿ ಸುಖಂ ರತಿಯೆಲ್ಲಿ ನೋಳ್ಪೊಡ |
ಲ್ಲಲ್ಲಿಯೆ ಲಿಂಗಸಿದ್ಧಿ ಘನಲಿಂಗಪದಸ್ಥಿತಿ ಲಿಂಗಪೂಜೆ ಮ ||
ತ್ತೆಲ್ಲಿಯುಮಿಲ್ಲನಿಶ್ಚಯ ಮಿದೇ ಪರಮಾರ್ಥ ಮಿದಲ್ಲ ದನ್ಯ ಮ |
ಪ್ಪೆಲ್ಲಮುಮಾತ್ಮ ದುಃಖಕರಮ್ಮೈಸೆ ವಿಚಾರ ಮದೇಂ ಶಿವಾಧವಾ ||೬೩||

ಎಲ್ಲಿ-ಆವತಾವಿನಲ್ಲಿ, ಮನಕ್ಕೆ-ಮನಸ್ಸಿಗೆ, ವಿಶ್ರಮಣಂ-ವಿಶ್ರಾಂತಿಯಹುದು ಎಲ್ಲಿ-ಆವತಾಣದಲ್ಲಿ, ಸುಖಂ-ಸುಖವುಂಟು, ಎಲ್ಲಿ-ಆವಸ್ಥಳದಲ್ಲಿ, ರತಿ-ರತಿಯಪ್ಪುದು, ನೋಳ್ಪೊಡೆ-ವಿಚಾರಿಸಲಾಗಿ, ಅಲ್ಲಲ್ಲಿಯೆ-ಆಯಾಯತಾಣದಲ್ಲಿಯೇ, ಲಿಂಗಸಿದ್ಧಿ-ಲಿಂಗಸ್ವರೂಪವು ಸಿದ್ಧಿಸುವುದು. ಘನಲಿಂಗಪದಸ್ಥಿತಿ-ಅಲ್ಲಿಯೇ ಮಹಾಲಿಂಗಸ್ಥಳದನಿಲುಕಡೆ, ಲಿಂಗಪೂಜೆ-ಅಲ್ಲಿಯೇಲಿಂಗಾರ್ಚನೆ, ಮತ್ತೆಲ್ಲಿಯುಮಿಲ್ಲ-ಮತ್ತಾವ ಮಾರ್ಗದಲ್ಲಿಯುಮಿಲ್ಲ, ಇದೇನಿಶ್ಚಯಂ-ಇದೀಗಸತ್ಯ, ಪರಮಾರ್ಥಂ-ಇದೀಗ ಉತ್ಕೃಷ್ಟವಾದರ್ಥವು, ಇದಲ್ಲದೆ-ಈ ಪೇಳಿದರ್ಥಮಲ್ಲದೆ, ಅನ್ಯಮಪ್ಪೆಲ್ಲಮುಂ-ಉಳಿದುದೆಲ್ಲವೂ, ಆತ್ಮದುಃಖಕರಮ್ಮೈಸೆ-ಮನೋದುಃಖಸಂಪಾದಕಮಷ್ಟೆ ? ವಿಚಾರಮ

ದೇಂ-ಅಲ್ಲಿವಿಚಾರವೇನುಂಟು ? (ಶರಣನ ಚಿತ್ತವಿಶ್ರಾಂತಿಯೂ, ಶರಣನ ಸುಖವೂ ಶರಣನ ರತಿಕ್ರೀಡೆಯೂ, ಲಿಂಗಸಿದ್ಧಿ ಲಿಂಗಸ್ಥಿತಿ ಲಿಂಗಪೂಜೆಗಳಾಗಿರ್ಪುವು. ಇದಕ್ಕೆ ಚೇರಮರಾಯ ಕುಮಾರಪಾಲ ಗೂರ್ಜರರಾಯ ನಂಬಿಯಣ್ಣ ಸತ್ಯಣ್ಣ ಮೊದಲಾದವರೇ ಸಾಕ್ಷಿ). ||೬೩||

ಟಿಪ್ಪಣಿ—ಎಲ್ಲಿ ಮನಸ್ಸು ವಿಶ್ರಾಂತಿಗೊಳ್ಳುವುದೋ ಅಲ್ಲೇ ಲಿಂಗಸ್ವರೂಪಸಿದ್ಧಿ, ಎಲ್ಲಿ ಮನಸ್ಸು ಸುಖಿಸುವುದೋ ಅಲ್ಲೇ ಲಿಂಗದ ನಿಲುಕಡೆ, ಎಲ್ಲಿ ಮನಸ್ಸು ಕ್ರೀಡಿಸುವುದೋ ಅಲ್ಲೇ ಲಿಂಗಪೂಜೆಯಾಗಿ, ಹೀಗೆ ಮನೋವ್ಯಾಪಾರವೆಲ್ಲವೂ ಲಿಂಗವಿಷಯಕವಲ್ಲದೆ ಅನ್ಯವಿಧವಾಗಿಲ್ಲದಿರುವುದೇ ಸತ್ಯವಾದ ಪರಮಾರ್ಥವು. ಇದರ ಹೊರತು ಅನ್ಯಮಾರ್ಗವರ್ತನವೆಲ್ಲವೂ ಮನೋದುಃಖ ಸಂಪಾದಕವಾದುವುಗಳು. ||೬೩||

ಎಂತಿರುತಿರ್ದೊಡಂತೆ ಶಿವಪೂಜೆ ಶಿವಾರ್ಪಣ ಮೈಕ್ಯಸಂಪದಂ |
ಸಂತತ ಮನ್ಯಯುಕ್ತಿ ವಿಪರೀತವಿಶೇಷಮ ನೆಯ್ದೆ ಚಿತ್ತವಿ ||
ಭ್ರಾಂತಿಗೆಕಾರಣಂ ನಿರುತ ಮೆಂದರಿ ದಾಚರಿಪರ್ಗುರೂಕ್ತಿಯಿಂ |
ದಂತಿಳಿದಾತ್ಮನಿಷ್ಠ ರೆನಿಸಿರ್ಪ್ಪ ಮಹಾಶರಣರ್ ಶಿವಾಧವಾ ||೬೪||

ಟೀಕೆ—ಆತ್ಮನಿಷ್ಠರೆನಿಸಿರ್ಪ-ಪರಮಾತ್ಮಲಿಂಗದಲ್ಲಿ ನಿಷ್ಠೆಯುಳ್ಳಂಥ, ಮಹಾಶರಣರ್-ಅಧಿಕವಾದಶಿವಶರಣರು, ಗುರೂಕ್ತಿಯಿಂದೆ-ಶ್ರೀಗುರೂಪದೇಶದಿಂದ, ತಿಳಿದು-ಅರಿದು, ಸಂತತಂ-ಆವಾಗಲೂ, ಎಂತಿರುತಿರ್ದೊಡೆ-ಹೇಗಿರುತಿರ್ದೊಡೆಯೂ ಅಂತೆ-ಹಾಗೆ, ಶಿವಪೂಜೆ-ರತಿಯೇಶಿವಪೂಜೆ, ಶಿವಾರ್ಪಣಂ-ಸುಖವೇ ಶಿವಾರ್ಪಣವು ಐಕ್ಯಸಂಪದಂ-ಚಿತ್ತವಿಶ್ರಾಂತಿಯೇ ಶಿವಲಿಂಗೈಕ್ಯಸಂಪತ್ತು, ಅನ್ಯಯುಕ್ತಿ-ಬೇರೊಂದುಯುಕ್ತಿಯು, ವಿಪರೀತವಿಶೇಷಮಂ-ಮನಸ್ಸಿಗೆಬಂದಂತೆಮಾಡುವುದನ್ನು, ಎಯ್ದೆ-ಪೊರ್ದಲಾಗಿ, ಚಿತ್ತವಿಭ್ರಾಂತಿಗೆ-ಮನೋಭ್ರಮಣೆಗೆ, ಕಾರಣಂ-ಕಾರಣವು, ನಿರುತಮೆಂದು-ನಿಶ್ಚಯಮೆಂದು, ಅರಿದು-ತಿಳಿದು, ಆಚರಿಸುವರ್-ನಡೆವರು (ಈಪೇಳ್ದೆರಡು ಪದ್ಯಂಗಳರ್ಥದಲ್ಲಿ "ಅಭಾವೇಭಾವಮಾಸಾದ್ಯಹ್ಯಸ್ಥಾನೇಸ್ಥಾನಮಾಚರೇತ್ | ಏತದ್ದ್ವಯಪರಿಜ್ಞಾನೀಪ್ರಸಾದೀಸಾವಧಾನತಃ" ಇಂತೆಂದು ಶಿವರಹಸ್ಯಮುಂಟು).

ಟಿಪ್ಪಣಿ—ಆತ್ಮಲಿಂಗನಿಷ್ಠಾಸಂಪನ್ನರಾದ ಶಿವಶರಣರು, ಯಾವಾಗಲೂ ಹೇಗೆ ಇದ್ದರೂ (ಎಂದರೆ—ಅವರು ಕ್ರೀಡಿಸುತ್ತಿದ್ದರೂ, ಸುಖಿಸುತ್ತಿದ್ದರೂ ಮನೋವಿಶ್ರಾಂತಿಗೊಂಡರೂ) ಅದೇ ಶಿವಪೂಜೆ, ಅದೇ ಶಿವಾರ್ಪಣ, ಅದೇ ಲಿಂಗೈಕ್ಯವಾಗಿರುವುದು. ಇದರ ಹೊರತು ಬೇರೆ ಮಾರ್ಗವೆಂಟೆಂದು ಹೇಳುವುದಲ್ಲಾ ನಿಜವಾಗಿ ಮನಸ್ಸಿನಭ್ರಮೆಗೆ ಕಾರಣವು ಎಂದು ಶ್ರೀಗುರೂಪದೇಶದಿಂದ ಅರಿತು, ಮೇಲೆ ಹೇಳಿದ ರೀತಿಯಿಂದವರಾಚರಿಸುತ್ತಿರುವರು. ||೬೪||

ಅರ್ಪಿತದ ಪ್ರಸಾದದ ಸುಸೂಕ್ಷ್ಮಕಳಾವ್ಯವಧಾನಯೋಗ ಮೆಂ |
ತಿರ್ಪುದೊ ವಾಙ್ಮನಕ್ಕ ಸುಪಮಂ ಗುರುವಾಕ್ಯನಿರೂಪಣಾ ಕರಂ ||

ತೋರ್ಪು ದನನ್ಯಭಾವ ಮನುಭೂತಿಪದೈಕಸುಸಾಧ್ಯ ಮಾತ್ಮವಿ |
ತ್ಕರ್ಪುರವಹ್ನಿಯಂತೆಸೆವ ಲಿಂಗನಿಜೈಕ್ಯತೆಯಿಂ ಶಿವಾಧವಾ ||೭೫||

ಟೀಕೆ—ಅರ್ಪಿತದ-ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತದ, ಪ್ರಸಾದದ-ಶುದ್ಧಸಿದ್ಧಪ್ರಸಿದ್ಧಪ್ರಸಾದದ, ಸುಸೂಕ್ಷ್ಮಕಳಾವ್ಯವಧಾನಯೋಗಂ-ಸುಸೂಕ್ಷ್ಮ-ಅತ್ಯಂತಗೋಪ್ಯವಾದ, ಕಳಾ-ಜ್ಞಾನದಿಂದ, ವ್ಯವಧಾನ-ವಿಶೇಷವಾದ ಅವಧಾನವನುಳ್ಳ, ಯೋಗಂ-ಲಿಂಗಾಂಗಸಾಮರಸ್ಯವು, ಎಂತಿರ್ಪುದೊ-ಹೇಗಿಹುದೋ, ವಾಙ್ಮನಕ್ಕನುಪಮಂ-ವಾಕ್ಕಿಗೂ ಮನಸ್ಸಿಗೂ ಉಪಮಿಸಬಾರದು, ಆತ್ಮವಿತ್ಕರ್ಪುರವಹ್ನಿಯಂತೆ, ಆತ್ಮವಿತ್-ಆತ್ಮಜ್ಞಾನಸ್ವರೂಪವಾದ, ಕರ್ಪುರವಹ್ನಿಯಂತೆ-ಶಿಖಿಕರ್ಪೂರಪ್ರಕಾಶಿಪಂತೆ, ಎಸೆವ-ಒಪ್ಪುವ, ಲಿಂಗನಿಜೈಕ್ಯತೆಯಿಂ-ಘನಲಿಂಗೈಕ್ಯದಿಂದೆ, ಅನನ್ಯಭಾವಂ-ಅಭೇದಭಾವಮಾಗಿ, ಅನುಭೂತಿಪದೈಕಸುಸಾಧ್ಯಂ-ಅನುಭೂತಿಪದೈಕ-ಜ್ಞಾನೈಶ್ವರ್ಯವೊಂದರಿಂದಲೇ, ಸುಸಾಧ್ಯಂ-ಒಳ್ಳಿತಾಗಿ ಸಾಧಿಸಲ್ತಕ್ಕುದಾಗಿ, ಗುರುವಾಕ್ಯನಿರೂಪದಿಂ-ಗುರುವಚನೋಪದೇಶದಿಂದೆ ಕರಂ-ಚೆನ್ನಾಗಿ, ತೋರ್ಪುದು-ಕಾಣಿಸುವುದು. ||೭೫||

ಟಿಪ್ಪಣಿ—ಲಿಂಗಗಳ ಮುಖಗಳನ್ನರಿತು ಅವುಗಳಿಗೆ ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತಗಳನ್ನು ಮಾಡುವುದರ ಮತ್ತೂ ಅವುಗಳ ಶುದ್ಧಸಿದ್ಧಪ್ರಸಿದ್ಧಪ್ರಸಾದವನ್ನು ಸ್ವೀಕರಿಸುವುದರ ರಹಸ್ಯಜ್ಞಾನವನ್ನರಿತು ಅವಧಾನಿಯಾಗಿರುವ ಶಿವಶರಣನ ಲಿಂಗಾಂಗಸಾಮರಸ್ಯವು ಹೇಗಿರುವುದೋ ಅದನ್ನು ಹಾಗೆ ಹೀಗೆ ಇರುವುದೆಂದು ಹೇಳುವುದಕ್ಕೂ ಊಹಿಸುವುದಕ್ಕೂ ಸಹ ವಾಕ್ಕಿಗೂ ಮನಸ್ಸಿಗೂ ಅಸಾಧ್ಯವು. ಸ್ವಸ್ವರೂಪಸಾಕ್ಷಾತ್ಕಾರದಿಂದ ಅಗ್ನಿಕರ್ಪೂರಗಳ ಸಂಯೋಗದಂತೆ ಒಪ್ಪುವ ಲಿಂಗಾಂಗ ಸಾಮರಸ್ಯವನ್ನು ಪಡೆದುಕೊಂಡರೆ ಮಾತ್ರ ಸ್ವಾನುಭವೈಕವೇದ್ಯವಾದ ಆ ಅದ್ವಯಭಾವವು ಶ್ರೀಗುರೂಪದೇಶದಿಂದ ಚೆನ್ನಾಗಿ ಗೋಚರವಾಗುವುದು ||೭೫||

ಅಂಗನೆ ತನ್ನ ಚಿತ್ತರಮಣಂಗೆ ಮಹಾರತಿಯಿಂ ಪ್ರಿಯಾಂಗದಾ |
ಲಿಂಗನಮಂ ಸಮರ್ಪಿಸಿ ತದೀಯವಿಶಿಷ್ಟಸುಖಪ್ರಸಾದಮಂ ||
ಪಿಂಗದೆ ಭೋಗಿಪಲ್ಲಿಯ ಕಳಾವ್ಯವಧಾನದಹಾಗೆ ಲಿಂಗಸಂ |
ಗಾಂಗ ಸುಖೋಪಭೋಗ ವತಿಸೂಕ್ಷ್ಮತರಂ ಶುಭದಂ ಶಿವಾಧವಾ ||೭೬||

ಟೀಕೆ—ಅಂಗನೆ-ಸ್ತ್ರೀಯು, ತನ್ನ ಚಿತ್ತರಮಣಂಗೆ-ತನ್ನ ಪ್ರಾಣವಲ್ಲಭಂಗೆ, ಮಹಾರತಿಯಿಂ-ಅತ್ಯಂತಸಂತೋಷದಿಂದ, ಪ್ರಿಯಾಂಗದ-ಪ್ರೀತಿಗಾಸ್ಪದವಾದ ಶರೀರದ, ಆಲಿಂಗನಮಂ-ಅಪ್ಪುಗೆಯನ್ನು, ಸಮರ್ಪಿಸಿ-ಕೊಟ್ಟು, ತದೀಯವಿಶಿಷ್ಟಸುಖಪ್ರಸಾದಮಂ, ತದೀಯ-ಆ ಆಲಿಂಗನೆಯ ಸಂಬಂಧವಾದ, ವಿಶಿಷ್ಟ-ವೆಗ್ಗಳಮಾದ ಸುಖಪ್ರಸಾದಮಂ-ಸುಖಪರಿಣಾಮವನ್ನು, ಪಿಂಗದೆ-ತೊಲಗದೆ, ಭೋಗಿಪಲ್ಲಿಯ-

ಅನುಭವಿಸುವಲ್ಲಿನ, ಕಳಾವ್ಯವಧಾನದ ಹಾಗೆ-ಕಳಾ-ಷೋಡಶಕಲೆಗಳ, ವ್ಯವಧಾ
ದಹಾಗೆ-ವಿಶೇಷವಾದ ಅವಧಾನದಹಾಂಗೆ, ಲಿಂಗಾಂಗಸುಖೋಪಭೋಗಂ-ಲಿ
ದಲ್ಲಿ ಸಂಬಂಧವಾದಂಗದ ಸುಖವನನುಭವಿಸುವುದು, ಅತಿಸೂಕ್ಷ್ಮತರಂ-ಅತ್ಯ
ಗೋಪ್ಯವಾದಂತಿಹುದು. ಶುಭದಂ-ಮಂಗಳವಕೊಡುವುದು, ಪರಿಣಾಮವಕೊ
ವುದೆಂಬುದರ್ಥಂ. ||೬

ಟಿಪ್ಪಣಿ—ಸ್ತ್ರೀಯು ತನ್ನ ಮನೋವಲ್ಲಭನಿಗೆ ಅತಿ ಪ್ರೀತಿಯಿಂದ ತನ್ನ ದೇಹವನ್ನು ಆಲಿಂಗನೆಗಾಗಿ ಅರ್ಪಿಸಿ, ಆಪರಸ್ಪರ ಸಂಗದಿಂದುಂಟಾವ ಸುಖಾತಿಶಯವನ್ನು ತಾನು ಅನುಭವಿ ವಾಗ ಯಾವರೀತಿಯು ಕಳಾವಧಾನವಿರುವುದೋ ಹಾಗೆ ಲಿಂಗಾಂಗಸಂಯೋಗಸೌಖ್ಯಾನುಭವವು ಅತ್ಯಂತ ರಹಸ್ಯವಾಗಿ ಶುಭಪ್ರದವಾಗಿರುವುದು ||೬

ಲೌಕಿಕವೃತ್ತಿಯೇ ಮರಳಿ ಭಾಕ್ತಿಕವರ್ತನಮಾಗಿ ಭಾಕ್ತಿಕಂ |
ಲೌಕಿಕಮಾಗಿ ತನ್ನೊಳಗೆ ತಾ ನೆರಡಿಲ್ಲದೆ ಕೂಡಿ ಸಂಶಯಂ ||
ಪೋಕೆಡೆಗೆಟ್ಟು ನಿಂದು ಬಯಲಾದ ಬಳಿಕ್ಕದನೇನ ನೆಂದಪೆಂ |
ವ್ಯಾಕುಲಮಿಲ್ಲದಿರ್ಪ ಪರಮಾಚರಣಸ್ಥಿತಿಯಿಂ ಶಿವಾಧವಾ ||೭

ಟೀಕೆ—ಲೌಕಿಕವೃತ್ತಿಯೇ-ಲೋಕವರ್ತನೆಯೇ, ಮರಳಿ-ಬಳಿಕ, ಭಾಕ್ತಿ
ವರ್ತನಮಾಗಿ-ಭಕ್ತಿಸಂಬಂಧವಾದವರ್ತನವಾಗಿ, ಭಾಕ್ತಿಕಂ-ಆ ಭಕ್ತಿವರ್ತನವೆ
ಲೌಕಿಕಮಾಗಿ-ಲೌಕಿಕವ್ಯವಹಾರವಾಗಿ, ತನ್ನೊಳಗೆತಾನೆರಡಿಲ್ಲದೆ-ಲಿಂಗಸ್ವರೂ
ನಾದ ತನ್ನಲ್ಲಿ ಭಿನ್ನವಿಲ್ಲದೆ, ಕೂಡಿ-ಸಂಬಂಧವಾಗಿ, ಸಂಶಯಂ-ಸಂದೇಹವು, ಪೋ
ಡೆಗೆಟ್ಟು-ಪಲಾಯನವಾಗಿ, ವ್ಯಾಕುಲಮಿಲ್ಲದಿರ್ಪ-ಚಿಂತೆಯಿಲ್ಲದಿಹ, ಪರಮಾಚರ
ಸ್ಥಿತಿಯಿಂ-ಉತ್ಕೃಷ್ಟವಾದ ಶರಣಮಾರ್ಗದ ನಿಲುಕಡೆಯಿಂದೆ, ನಿಂದು-ಸ್ಥಿರವಾಗಿ
ಬಯಲಾದಬಳಿಕ-ಚಿದಾಕಾಶಸ್ವರೂಪವಾದ ಮಹಾಲಿಂಗವಾದಬಳಿಕ, ಅದು
ಆ ಮಾರ್ಗವನ್ನು ಏನನೆಂದಪೆಂ-ಏನೆಂದುಹೇಳಲಿ ! ||೭

ಟಿಪ್ಪಣಿ—ತಾನು ಲಿಂಗಾಂಗಸಂಗಿಯಾದುದರಿಂದ ತನ್ನ ಲೌಕಿಕವ್ಯಾಪಾರವೇ ಭಕ್ತಿಸಂಬಂಧ ವ್ಯಾಪಾರವಾಗಿ, ಆಭಕ್ತಿವ್ಯಾಪಾರವೇ ಲೌಕಿಕವ್ಯಾಪಾರವಾಗಿ, ಹೀಗೆ ಭಿನ್ನಭಾವವಿಲ್ಲದಿರು ಕ್ರಿಯೆಯಿಂದ ಕೂಡಿರುವ ಕಾರಣ, ತನ್ನ ಮನೋವಿಕಲ್ಪವು ಅಳಿದು, ನಿಶ್ಚಿಂತತೆಯಿಂದ ಉತ್ಕೃಷ್ಟವಾದ ಆಚರಣೆಯಲ್ಲಿದ್ದು ಮಹಾಲಿಂಗಮಯನಾದ ಶರಣನ ರೀತಿಯನ್ನು ಏನೆಂದು ಹೇಳಬಹುದು। ||೭

ಪ್ರಿಯತಮೆಯಪ್ಪ ಜಾಯೆ ನಿಜವಲ್ಲಭನಂ ರತಿಕೇಳಿಯೊಳ್ಮನಂ |
ಬಯಸಿದ ಹಾಗೆ ತರ್ಜನವಿಡಂಬನಗರ್ಹಣತಾಡನಾದಿಯಂ ||
ನಯಿಸ ಲದೇಂ ವಿರೋಧಮೊ ಸುಖಾಸ್ಪದಮೋ ಶರಣಂ ಸ್ವಕೀಯಲಿಂ |
ಗಯುಜನದಲ್ಲಿ ಲೀಲೆವಿಡಿ ದೇನ ನೊಡರ್ಚಿದೊಡೇಂ ಶಿವಾಧವಾ ||೮

ಟೀಕೆ—ಪ್ರಿಯತಮೆಯಪ್ಪ-ಅತ್ಯಂತಪ್ರಿಯಳಾದ, ಜಾಯೆ-ಪತ್ನಿಯು, ನಿಜ ವಲ್ಲಭನಂ-ತನ್ನಪತಿಯನ್ನು, ರತಿಕೇಳಿಯೊಳ್-ಕಾಮಕ್ರೀಡೆಯಲ್ಲಿ, ಮನಂಬಯಸಿದ ಹಾಗೆ-ಮನಸ್ಸುಬಂದಂತೆ, ತರ್ಜನವಿಡಂಬನಗರ್ಹಣತಾಡನಾದಿಯಂ-ತರ್ಜನ-ಅಂಜಿಸುವುದು, ವಿಡಂಬನ-ಅಣಕವಾಡುವುದು, ಗರ್ಹಣ-ನಿಂದಿಸುವುದು, ತಾಡನ-ಪಂಚಾಂಗುಲಿನ್ಯಾಸ, ಆದಿಯಂ-ಇವುಮೊದಲಾದುವನ್ನು, ನಯಿಸಲ್-ಮಾಡಲು, ಅದೇಂವಿರೋಧವೊ-ಅದೇನುಹಗೆತನವೋ ? ಸುಖಾಸ್ಪದಮೊ-ಆನಂದಕ್ಕೆ ಆಸ್ಪದವೊ ? (ಆನಂದವೇತಪ್ಪದೆಂದರ್ಥ.) ಶರಣಂ-ಶಿವಜ್ಞಾನಸಂಪನ್ನನಾದ ಶರಣನು, ಸ್ವಕೀಯಲಿಂಗಯಜನದಲ್ಲಿ-ತನ್ನಸಂಬಂಧವಾದಲಿಂಗಪೂಜೆಯಲ್ಲಿ, ಲೀಲೆವಿಡಿದು-ವಿಲಾಸವನಂಗೀಕರಿಸಿ, ಏನನೊಡರ್ಚಿದೊಡೇಂ-ಏನನ್ನುಉದ್ಯೋಗಿಸಿದರೇನು ? (ಎಲ್ಲವೂಸಮರ್ಪಕವೆಂಬುದರ್ಥ) ಈ ಅರ್ಥದಲ್ಲಿ—'' ಯಾಯಾಚೇಷ್ಟಾಸಮುತ್ಪನ್ನಾಜಾಯತೇ ಶಿವಯೋಗಿನಾಂ | ಸಾಸಾಪೂಜನಮಿಾಶಸ್ಯ ಸರ್ವಥಾತದ್ಗತಾತ್ಮನಾಂ '' || ಎಂದುಪ್ರಮಾಣಂ ||೬೮||

ಟಿಪ್ಪಣಿ—ಮನೋವಲ್ಲಭೆಯು ಸುರತಸಮಯದಲ್ಲಿ ಮನಸ್ಸಿಗೆ ಬಂದಹಾಗೆ ತನ್ನ ಪತಿಯನ್ನು ಹೆದರಿಸುವುದು ಅಣಕಿಸುವುದು ಹೀಯಾಳಿಸುವುದು ಹೊಡೆಯುವುದು ಮೊದಲಾದ ಕ್ರಿಯೆಗಳನ್ನು ಮಾಡುವುದೆಲ್ಲಾ ಆನಂದಾಭಿವೃದ್ಧಿಗಾಗಿಯೇ ಹೊರತು ವಿರೋಧಕ್ಕಲ್ಲ. ಅದರಂತೆಯೇ ಜ್ಞಾನಿಯಾದ ಶಿವಶರಣನು ಲಿಂಗಪೂಜಾತತ್ಪರನಾಗಿ ಆಕಾಲದಲ್ಲಿ ವಿಲಾಸದಿಂದ ಯಾವ ಕೆಲಸವನ್ನು ಮಾಡಿದರೆ ತಾನೇ ಯೇನು ? ಅದೆಲ್ಲವೂ ಶಿವಪೂಜೆಯೇ ಆಗಿರುವುದು ||೬೮||

ಅವತಾರಿಕೆ—ಸಹಜವಾಗಿ ಮಹತ್ತ್ವಾತಿಶಯದಿಂದೊಪ್ಪುವ ಶರಣಂಗೆ ಉಪಾಧಿವಶದಿಂ ಬಂದ ಮಹತ್ತ್ವವು ರುಚಿಸದೆಂದು ಪೇಳುತ್ತಿರ್ದಪಂ.—

ಇದು ಶರಣಂಗೆ ಲಿಂಗಕರಣಂಗೆ ಚಿದಾಭರಣಂಗೆ ದೊಡ್ಡಿತಾ |
ದುದೆ ಬಿಡು ದೇವ ರಂತೊಲಿದ ರಿಂತೊಲಿದರ್ ನಿಜರೂಪದೋರಿದ ||
ರ್ಸದೆಬಡಿದ ರ್ವಿಭರ್ಜಿ ಸುರೆ ಮೈದೊಡೆದ ರ್ಕನಸಿಂಗೆ ಬಂದ ರ |
ಪ್ಪಿದ ರೊಡನಿರ್ದ್ದ ರೆಂದೆನುತೆ ಕೊರ್ಚುವ ದುರ್ವಚನಂ ಶಿವಾಧವಾ ||೬೯||

ಟೀಕೆ—ದೇವರ್-ಶಿವಸಮಾನತ್ವವನುಳ್ಳಂಥ ಮಹಾಪುರುಷರು, ಅಂತೊಲಿದರ್-ಶಿವನು ಚೋಳಾದಿಗಳ್ಗೆ ಒಲಿದಹಾಂಗೆ, ಒಲಿದರು. ಇಂತೊಲಿದರ್-ಬಸವಾದಿ ಪುರಾತನರಿಗೆ ಒಲಿದಹಾಂಗೆ ಒಲಿದರು, ನಿಜರೂಪದೋರಿದರ್-ತಮ್ಮಸಹಜರೂಪದೋರಿದರು, ಸದೆಬಡಿದರ್-ವಿಶೇಷವಾಗಿಕೊಂದರು, ವಿಭರ್ಜಿಸಿ-ಬೈದು, ಉರೆ-ಚೆನ್ನಾಗಿ, ಮೈದೊಡೆದರ್-ಶರೀರವನೇಒರಸಿದರು, ಕನಸಿಂಗೆ ಬಂದರ್-ಸ್ವಪ್ನಕ್ಕೆ ಬಂದರು, ಅಪ್ಪಿದರ್-ತಕ್ಕೈಸಿದರು, ಒಡನಿರ್ದರ್-ಸಂಗಡಲೇ ಇದ್ದರು. ಎಂದೆ

ನುತೆ-ಹೀಗೆಂದು ನುಡಿಯುತೆ, ಕೊರ್ಚುವ-ಬೊಬ್ಬಿಡುವಂಥ, ದುರ್ವಚನಂ-ಕೆ
ನುಡಿಯು, ಇದು-ತಾನು, ಲಿಂಗಕರಣಂಗೆ-ಲಿಂಗೇಂದ್ರಿಯಸ್ವರೂಪನಾದ, ಚಿದ
ಭರಣಂಗೆ-ಜ್ಞಾನವೇ ಆಭರಣವಾಗುಳ್ಳ, ಶರಣಂಗೆ-ಶಿವಶರಣಂಗೆ, ದೊಡ್ಡಿತಾದು
ಘನವಾಯಿತೆ? ಅಲ್ಲ, ಬಿಡು-ವಿಸರ್ಜಿಸು ||೬೯

ಟಿಪ್ಪಣಿ—ಶಿವಸಮಾನರಾದ ಮಹಾತ್ಮರು ಅವರಿಗೆ ಹಾಗೆ ಒಲಿದರು, ಇವರಿಗೆ ಹೀಗೆ ಒ
ದರು, ಅವರಿಗೆ ಪ್ರತ್ಯಕ್ಷರಾದರು, ಇವರನ್ನು ಬೈದು ಶರೀರವಳಿಸಿದರು, ಸ್ವಪ್ನಕ್ಕೆ ಬಂದರು, ಇ
ರನ್ನು ಆಲಿಂಗಿಸಿದರು, ಎಂದುಮೊದಲಾಗಿ ಹೇಳಿ, ಹಾಗೆ ಮಾಡಿಸಿಕೊಂಡವರನ್ನೆಲ್ಲಾ ಬಲುದೊ
ವರನ್ನಾಗಿ ಹೊಗಳಿ ಡಂಭವನ್ನು ಕೊಚ್ಚಿಕೊಳ್ಳುವರು. ದೇಹೇಂದ್ರಿಯಕರಣಾದಿಗಳೆಲ್ಲಾ ಲಿಂಗ
ಯನಾಗಿರುವ ಶಿವಜ್ಞಾನಿಯಾದ ಶರಣನಾದರೊ ಉಪಾಧಿವಶದಿಂದ ಲಬ್ಧವಾದ ಆ ಫಲಗಳನ್ನೆ
ತುಚ್ಛೀಕರಿಸಿರುವನಲ್ಲದೆ ದೊಡ್ಡದೆಂದು ತಿಳಿಯನು (ಶಿವನು ಪ್ರತ್ಯಕ್ಷನಾಗಿ ವರವನ್ನು ಬೇಡಂ
ಹೇಳಿದರೂ ಅದನ್ನು ಉಪೇಕ್ಷಿಸಿದ ನಿಂಬ್ಯಕ್ಕ ಮೊದಲಾದವರ ವರ್ತನವೇ ಇದಕ್ಕೆ ಉದಾಹರಣ

ದೇವರ ನೆತ್ತ ಬಲ್ಲ ನವರೊತ್ತಿನ ದಿಂಡರ ನೆತ್ತಬಲ್ಲ ನಾ |
ಗೋವರನೆತ್ತಬಲ್ಲ ನವರಾಜೆಯ ಗುಡ್ಡರ ನೆತ್ತಬಲ್ಲ ನು ||
ಚ್ಚಾವಚಮಪ್ಪಕಾಳ್ನುಡಿ ಯದಂತಿರ ಲಂತಿರ ಲೇಕ ಲಿಂಗನಿ |
ಷ್ಠಾಪರನಪ್ಪ ಸತ್ಯಶರಣಂ ಮಹಿಮಾಭರಣಂ ಶಿವಾಧವಾ ||೭೦

ಟೀಕೆ—ಏಕಲಿಂಗನಿಷ್ಠಾಪರನಪ್ಪ-ಶಿವಲಿಂಗವೊಂದರನಿಷ್ಠೆಯಲ್ಲಿ ಶ್ರೇಷ
ನಾದ, ಮಹಿಮಾಭರಣಂ-ಮಹತ್ವವೇ ಆಭರಣವಾಗುಳ್ಳ, ಸತ್ಯಶರಣಂ-ಸಹಜಜ್ಞಾ
ನಿಯಾದ ಶರಣನು, ದೇವರ-ಸಾಯುಜ್ಯಪದಸ್ಥರನ್ನು, ಎತ್ತಬಲ್ಲಂ-ಏನೆಂದು
ಲ್ಲನು? ಅವರೊತ್ತಿನ-ಅವರ ಸಮೀಪದಲ್ಲಿರ್ಪ, ದಿಂಡರಂ-ಸಾರೂಪ್ಯಪದಸ್ಥರನ್ನು
ಎತ್ತಬಲ್ಲಂ-ಏನೆಂದುಬಲ್ಲನು? ಆಗೋವರಂ-ಅವರಬಳಿಯಲ್ಲಿರ್ಪ ಸಾಮೀಪ್ಯ ಪ
ಸ್ಥರನ್ನು, ಎತ್ತಬಲ್ಲಂ-ಏನೆಂದುಬಲ್ಲನು? ಅವರಾಜೆಯಗುಡ್ಡರಂ-ಅವರಿಂದಕಡೆಯ
ಲ್ಲಿರ್ಪ ಸಾಲೋಕ್ಯಪದಸ್ಥರನ್ನು, ಎತ್ತಬಲ್ಲಂ-ಏನೆಂದುಬಲ್ಲನು? ಉಚ್ಚಾವಚಮಪ್ಪ
ಹಿರಿದುಕಿರಿದೆಂದರಿಯುದ, ಕಾಳ್ನುಡಿ-ಹರಟೆಯಮಾತು, ಅದಂತಿರಲಂತಿರಲಿ-ಅದ
ಹಾಂಗಿರಲಿ ಹಾಂಗಿರಲಿ. ||೭೦

ಟಿಪ್ಪಣಿ—ಲಿಂಗಾಂಗಸಂಗಿಯಾಗಿ ಆ ಲಿಂಗನಿಷ್ಠೆಯೊಂದರಲ್ಲೇ ತತ್ಪರನಾಗಿ ಮಹಿಮಾಶ್ರ
ನಾಗಿ ಇರುವ ನಿಜವಾದ ಶರಣನು ಸಾಯುಜ್ಯ-ಸಾರೂಪ್ಯ-ಸಾಮೀಪ್ಯ-ಸಾಲೋಕ್ಯಪದವಿಗಳನ್ನ
ವರುಗಳನ್ನು ಸಹ ಲಕ್ಷೀಕರಿಸುವವನಲ್ಲ. ||೭೦

ಬಿಡುಬಿಡು ಲಿಂಗಭಕ್ತ ನವಸಾನವಿಮುಕ್ತ ನನಾದಿಮುಕ್ತ ನೀ |
ಕಡುಮರುಳಾಟ ದಾಳಿಕೆಯ ತೂಳದ ಮೇಳದ ಮತ್ತಲೀಲೆಯಾ ||

ಗಡದ ಸಮರ್ಥ ನಂತಹವ ನಿಂತಹವಂ ಛಲಶೀಲವಂತ ನೆಂ |
ದಡಿಗಡಿಗುಬ್ಬಿ ಕೊಬ್ಬಿ ನುಡಿವಲ್ಲಿಗೆ ಯೋಗ್ಯನೆ ಪೇಳ್ ಶಿವಾಧವಾ ||೭೧||

ಟೀಕೆ—ಲಿಂಗಭಕ್ತಂ-ಶಿವಲಿಂಗದಲ್ಲಿ ಭಕ್ತಿಯುಳ್ಳಂಥ, ಅವಸಾನವಿಮುಕ್ತಂ-ದೇಹಪಾತವೆಂಬ ಉಪಾಧಿಯಿಲ್ಲದಂಥ, ಅನಾದಿಮುಕ್ತಂ-ಅನಾದಿಮಾಯೆಯಿಂದ ಬಿಡಲ್ಪಟ್ಟ ಶರಣನು, ಆಗಡದಸಮರ್ಥಂ-ವಿಶೇಷವಾದ ಸಾಮರ್ಥ್ಯವುಳ್ಳವನು, ಅಂತಹವಂ-ಚೋಳಾದಿಗಳಂಥವನು, ಇಂತಹವಂ-ಬಸವಾದಿಪುರಾತನರಂಥವನು, ಛಲಶೀಲವಂತಂ-ಛಲಪದವನುಳ್ಳ ಶೀಲವಂತನು, ಎಂದು-ಹೀಗೆಂದು, ಈ ಕಡುಮರುಳಾಟದ-ಈ ವಿಶೇಷವಾದ ಹುಚ್ಚಾಟದಲ್ಲಿ, ಆಳಿಕೆಯ-ಮಗ್ನತೆಯ, ತೂಳದಮೇಳದ-ತೂಳಸಮೂಹದ, ಮತ್ತಲೀಲೆಯ-ಮೈಮರೆದಚೇಷ್ಟೆಯನ್ನು, ಅಡಿಗಡಿಗೆ-ಹೆಜ್ಜೆಹೆಜ್ಜೆಗೆ, ಉಬ್ಬಿ-ಮೈಯುಬ್ಬಿ, ಕೊಬ್ಬಿ-ಗರ್ವಿಸಿ, ನುಡಿವಲ್ಲಿಗೆ-ಹೇಳುವುದಕ್ಕೆ, ಯೋಗ್ಯನೆ ? ಪೇಳ್-ಹೇಳು, ಬಿಡುಬಿಡು-ಅದೆಲ್ಲಾ ಬಿಡುಬಿಡು. ||೭೧||

ಟಿಪ್ಪಣಿ—ಲಿಂಗನಿಷ್ಠನೂ ಅವಿನಾಶಿಯೂ ಮಾಯಾರಹಿತನೂ ಆದ ಶರಣನು, ಮಹಾಸಾಮರ್ಥ್ಯವಂತ, ಅಂಥಮಹಿಮ, ಇಂಥ ಘನತೆಯುಳ್ಳವ, ಛಲವಂತ, ಶೀಲವಂತ ಎಂದು ಮೊದಲಾಗಿ ನಾನಾವಿಧದಿಂದ ವಿಜೃಂಭಿಸಿ ಹೊಗಳಿಸಿಕೊಳ್ಳುವ ಚೇಷ್ಟೆಗಳುಳ್ಳವನಾಗಿರುವನೆ ? ಎಂದಿಗೂ ಇಲ್ಲ. ಅವನ ರೀತಿಯು ಲೋಕದ ಮೆಚ್ಚಿಕೆಗಾಗಿ ಬಾಹ್ಯಾಡಂಬರವಾಗಿರುವುದಿಲ್ಲವೆಂದು ಭಾವ ||

ಅರಿವೆ ಸಮಸ್ತವಸ್ತುವಿಷಯಾಗಮಮುಖ್ಯ ಮದೇ ವಿಮುಕ್ತಿದಂ |
ಪೊರಗಣ ವೇಷದಾಚರಣೆ ಭಾವಿಪೊಡೇವಿಧ ಮಾದೊಡೇಂ ವೃಥಾ ||
ಜರೆವುದು ಬುದ್ಧಿಯೇ ಶರಣ ರೆಂತಿಹ ರೆಂಬುದ ನೊಲ್ದು ನೋಡದೇ |
ಬರಿತನದುಕ್ತಿಚಾಪಲದ ಗೌರವದಿಂ ಫಲಮೇಂ ಶಿವಾಧವಾ ||೭೨||

ಟೀಕೆ—ಸಮಸ್ತವಸ್ತುವಿಷಯಾಗಮಮುಖ್ಯಂ-ಸಮಸ್ತ ವಸ್ತುವಿಷಯ-ಸಮಸ್ತ ಪದಾರ್ಥಗೋಚರವಾಗಿ, ಆಗಮಮುಖ್ಯಂ-ಶೈವಾಗಮಂಗಳಲ್ಲಿ ಪ್ರಧಾನವಾದ, ಅರಿವೆ-ಜ್ಞಾನವೇ, ಅದೇ-ಅದುತಾನೇ, ವಿಮುಕ್ತಿದಂ-ಮೋಕ್ಷವಕೊಡುವಂತಹುದು, ಹೊರಗಣ-ಬಾಹ್ಯದ, ವೇಷದಾಚರಣೆ-ವೇಷದಾಚಾರವು, ಭಾವಿಪೊಡೆ-ವಿಚಾರಿಸುವೊಡೆ, ಏವಿಧಮಾದೊಡೇಂ-ಆವಪ್ರಕಾರವಾದೊಡೇನು ? ಶರಣರ್-ಶಿವಶರಣರು, ಎಂತಿಹರ್-ಹೇಗಿರ್ಪರು, ಎಂಬುದಂ-ಎಂಬುದನ್ನು, ಒಲ್ದು-ಪ್ರೀತಿಸಿ, ನೋಡದೆ, ವೃಥಾ-ವ್ಯರ್ಥವಾಗಿ, ಜರೆವುದು-ದೂಷಿಸುವುದು, ಬುದ್ಧಿಯೆ-ಇದೊಂದು ವಿವೇಕವೆ ? ಈ ಬರಿತನದ-ಈ ವ್ಯರ್ಥವಾದ, ಉಕ್ತಿಚಾಪಲದ-ಉಕ್ತಿ-ನುಡಿಯ, ಚಾಪಲದ-ಚಪಲತೆಯ, ಗೌರವದಿಂ-ಅತಿಶಯದಿಂದೆ, ಫಲವೇಂ-ಪ್ರಯೋ

ಜನವೇನು. (ಮಹಾನುಭವರಾದ ಶರಣರು ಆವವೇಷದಲ್ಲಿರ್ದೊಡೆಯೂ ದೂಷ್ಯ ಲಾಗದೆಂಬುದಭಿಪ್ರಾಯಂ) ? ||೨೨

ಟಿಪ್ಪಣಿ—ಜ್ಞಾನವೆಂಬುದು ಸಕಲಪದಾರ್ಥಸ್ವರೂಪವನ್ನೂ ಅರುಹಿಸತಕ್ಕುದಾಗಿಯೂ ಶಿವಾಗಮಗಳಲ್ಲಿ ಶ್ರೇಷ್ಠವಾದುದೆಂದು ಹೇಳಲ್ಪಟ್ಟುದಾಗಿಯೂ ಇರುವುದಲ್ಲದೆ, ಅದೇ ಮುಕ್ತಿಪ್ರದ ವಾಗಿರುವುದು. ಅಂತಹ ಜ್ಞಾನವನ್ನು ಒಳಗೆ ಪಡೆದುಕೊಂಡಿರುವ ಶರಣರಲ್ಲಿ ಹೊರಗಣವೇಷಾ ರಗಳು ಹೇಗಿದ್ದರೆ ತಾನೇ ಏನು ? ಅವರ ಅಂತಸ್ಸ್ಥಿತಿಯನ್ನು ವಿಚಾರಿಸದೆ ಸುಮ್ಮನೆ ಜರೆ ವುದು ವಿವೇಕವಲ್ಲ. ಬಾಯಿ ಹರಟೆಯ ಮಾತುಗಳಿಂದ ಏನೂ ಫಲವಿಲ್ಲ. ||೬

ಕ್ಷುತ್ತೃಷೆ ನಿದ್ರೆಯಿಲ್ಲದವರೇ ಪಿರಿಯ ರ್ಪರಿಪೂಜ್ಯ ರಾದೊಡೀ |
ಕ್ಷುತ್ತೃಷೆ ನಿದ್ರೆ ಯಿಲ್ಲದಿಹ ಕಲ್ಮರಮಟ್ಟಿಗಳೇ ಸುಪೂಜ್ಯರೇ ||
ಕ್ಷುತ್ತೃಷೆ ನಿದ್ರೆಯೇ ಕೊರತೆಯಲ್ಲ ಮಹತ್ತ್ವಗುಣಕ್ಕೆ ಶುದ್ಧಚಿ |
ನ್ಮಾತ್ರಪವಿತ್ರಗಾತ್ರರ ನದೆಂತರಿವರ್ ಪಶುಗಳ್ ಶಿವಾಧವಾ ||೩೩

ಟೀಕೆ—ಕ್ಷುತ್ತೃಷೆ ನಿದ್ರೆಯಿಲ್ಲದವರೇ-ಹಸಿವು ನೀರಡಿಕೆ ನಿದ್ರೆಯಿಲ್ಲದವ ಪಿರಿಯರ್-ಶ್ರೇಷ್ಠರು, ಪರಿಪೂಜ್ಯರ್-ಮಹಾಪೂಜ್ಯರು, ಆದೊಡೆ-ಹೀಗಾದೊಡೆ ಈ ಕ್ಷುತ್ತೃಷೆನಿದ್ರೆಯಿಲ್ಲದಿಹ-ಈ ಹಸಿವು ನೀರಡಿಕೆ ನಿದ್ರೆಯಿಲ್ಲದಿರ್ಪ, ಕಲ್ಮರಮಟ್ಟಿ ಗಳೇ-ಕಲ್ಲುಮರ ಮಣ್ಣುಗಳೇ, ಸುಪೂಜ್ಯರೇ-ಅತಿಶಯವಾಗಿ ಪೂಜಿಸಲ್ತಕ್ಕುವೆ! ಮಹತ್ತ್ವಗುಣಕ್ಕೆ-ಮಹಿಮಾತಿಶಯಕ್ಕೆ, ಕ್ಷುತ್ತೃಷೆನಿದ್ರೆಯೇ-ಹಸಿವು ನೀರಡಿ ನಿದ್ರೆಯುಂಟಾಗುವುದೇ, ಕೊರತೆಯಲ್ಲ-ಹೀನವಲ್ಲ. ಪಶುಗಳ್-ಅಜ್ಞಾನಿಗಳು, ಶುದ್ಧ ಚಿನ್ಮಾತ್ರಪವಿತ್ರಗಾತ್ರರಂ, ಶುದ್ಧ-ನಿರ್ಮಳವಾದ, ಚಿನ್ಮಾತ್ರ-ಕೇವಲ ಶಿವಜ್ಞಾ ದಿಂದ, ಪವಿತ್ರ-ಪಾವನವಾದ, ಗಾತ್ರರಂ-ಶರೀರವುಳ್ಳವರುಗಳನ್ನು, ಅದೆಂತರಿವರ್- ಅದೇನೆಂದು ಬಲ್ಲರು ? (ಹಸಿವು ತೃಷೆನಿದ್ರೆಯಿಲ್ಲದವರೇ ಪೂಜ್ಯರು, ಇವು ಉಂಟಾ ದವರೇ ಅಪೂಜ್ಯರೆಂದು ಶಿವಶರಣರಂ ನಿಂದಿಸಲಾಗದೆಂಬುದಭಿಪ್ರಾಯಂ) ||೩೩

ಟಿಪ್ಪಣಿ—ಹಸಿವು ನೀರಡಿಕೆ ನಿದ್ರೆಗಳು ಇಲ್ಲದಿದ್ದವರೇ ದೊಡ್ಡವರೂ ಪೂಜ್ಯರೂ ಆಗು ದಾದರೆ, ಆ ಗುಣಗಳಿಲ್ಲದ ಕಲ್ಲು ಮರ ಮಣ್ಣುಗಳೇ ಅತ್ಯಂತ ಪೂಜ್ಯವಾಗುವವೆ ? ಅದುಕಾರ ಹಸಿವು ನೀರಡಿಕೆ ಮೊದಲಾದುವುಗಳಿದ್ದ ಮಾತ್ರದಿಂದ ಶರಣನ ಮಹತ್ತ್ವಕ್ಕೆ ಕುಂದೇನೂ ಇಲ್ಲ ಶಿವಜ್ಞಾನದಿಂದ ಶುದ್ಧ ಶರೀರಿಗಳಾದವರ ಸ್ವರೂಪವನ್ನು ಅಜ್ಞಾನಿಗಳು ಅದು ಹೇಗೆ ತಿಳಿಯುವರು

ತ್ವಗ್ರಸ ರಕ್ತಮಾಂಸಮಯಮಪ್ಪ ಶರೀರದ ಭಾವಮುಂಟು ಕಂ |
ಡಗ್ರಣಿಗ ಳ್ವಿಚಾರಿಸರಲಾ ಕ್ಷುಧೆ ನಿದ್ರೆ ಪಿಪಾಸೆ ಯಿರ್ದೊಡೇಂ ||
ವ್ಯಗ್ರದ ಮಾತದಂತಿರಲಿ ದೇಹಗುಣಂ ಪರಿಮಾಣವಲ್ಲ ಸ |
ಮ್ಯಗ್ರಮಣೀಯಚಿತ್ತಿನ ಗುಣಂ ಪರಿಮಾಣಪದಂ ಶಿವಾಧವಾ ||೩೪

ಟೀಕೆ—ತ್ವಗ್ರಸರಕ್ತಮಾಂಸಮಯಮಪ್ಪ-ಚರ್ಮರಸರುಧಿರಮಾಂಸಮಯವಾದ, ಶರೀರದಭಾವಂ-ದೇಹದಭಾವವು, ಉಂಟುಕಂಡ-ಉಂಟೆಂದುಕಂಡಾ? ಕ್ಷುಧೆನಿದ್ರೆಪಿಪಾಸೆಯಿರ್ದೊಡೇಂ-ಹಸಿವು ನಿದ್ರೆ ನೀರಡಿಕೆಯಿರ್ದೊಡೇನಾಯಿತು ? ಅಗ್ರಣಿಗಳ್-ಶ್ರೇಷ್ಠರು, ವಿಚಾರಿಸರಲಾ-ಲೆಕ್ಕಿಸರಲಾ, ಅದು ವ್ಯಗ್ರದಮಾತು ಅಂತಿರಲಿ. ಪ್ರಾಣಾದಿಧರ್ಮಂಗಳು ಶರಣಂಗುಂಟೇ ಎಂಬ ಅವ್ಯರ್ಥದಮಾತು ಅಂತಿರಲಿ. ದೇಹಗುಣಂ-ದೇಹಧರ್ಮವು, ಪರಿಮಾಣವಲ್ಲ-ಪ್ರಮಾಣವಲ್ಲ. ಸಮ್ಯಗ್ರಮಣೀಯಚಿತ್ತಿನ-ಸಮ್ಯಕ್-ಚೆನ್ನಾಗಿ, ರಮಣೀಯ-ಮನೋಹರವಾದ, ಚಿತ್ತಿನ-ಜ್ಞಾನದ, ಗುಣಂ-ಪ್ರಭಾವವು, ಪರಿಮಾಣಪದಂ-ಪ್ರಮಾಣಸ್ಥಾನವು. ||೭೪||

ಟಿಪ್ಪಣಿ—ದೇಹವು ಚರ್ಮ ರಕ್ತ ಮಾಂಸ ಮೊದಲಾದುವುಗಳ ಸ್ವರೂಪವಾಗಿರುವುದು. ಅಂತಹ ದೇಹಕ್ಕೆ ಹಸಿವು ನೀರಡಿಕೆ ಮೊದಲಾದ ಗುಣಗಳು ಇದ್ದೇ ಇರುವುದು ಸಹಜವೆಂದು ತಿಳಿದ ಮಹನೀಯರು, ಆ ದೇಹ ಗುಣವನ್ನು ವಿಚಾರಮಾಡುವುದಿಲ್ಲ. ಆ ಸಂಬಂಧವಾಗಿ ಆಡುವ ದುಡುಕಿನ ಮಾತು ಹಾಗಿರಲಿ. ಶರಣನ ಮಹತ್ತ್ವವನ್ನು ನಿರ್ಧರಿಸುವುದಕ್ಕೆ ಆ ದೇಹಧರ್ಮವು ಪ್ರಮಾಣವಲ್ಲ ; ಮತ್ತೇನೆಂದರೆ-ಅವನಲ್ಲಿ ಪ್ರಕಾಶಿಸುವ ಶಿವಜ್ಞಾನವೇ ಪ್ರಮಾಣವು. ||೭೪||

ಅವತಾರಿಕೆ—ಇಂತಪ್ಪ ಚಿತ್ಪಭಾವಸಂಪತ್ತಿಯು ದೀಕ್ಷೆಯಿಂದಲ್ಲದೆ ಮತ್ತಾವುದರಿಂದಲೂ ಇಲ್ಲವೆಂದು ಪೇಳುತ್ತಿರ್ದಪಂ—

ಮಸ್ತಕದಲ್ಲಿ ಕರ್ಣಪದದಲ್ಲಿ ಕರಸ್ಥಲದಲ್ಲಿ ದೇಶಿಕಂ |
ಹಸ್ತಸರೋಜಮಂ ಪರಮಮಂತ್ರಮುಮಂ ಶಿವಲಿಂಗಮೂರ್ತಿಯಂ ||
ನ್ಯಸ್ತಮ ನೇಕೆ ಮಾಡಿದ ನಿದೇ ನಿದರರ್ಥವಿಶೇಷ ಮೆಂತುಟೆಂ |
ದಾಸ್ತಿಕಬುದ್ಧಿಯಿಂ ತಿಳಿದೊ ಡಾತನೆ ಮುಕ್ತನಲಾ ಶಿವಾಧವಾ ||೭೫||

ಟೀಕೆ—ದೇಶಿಕಂ-ಶ್ರೀಗುರುವು, ಮಸ್ತಕದಲ್ಲಿ-ಶಿರಸ್ಸಿನಲ್ಲಿ, ಕರ್ಣಪದದಲ್ಲಿ-ಶ್ರುತಿಪುಟದಲ್ಲಿ, ಕರಸ್ಥಲದಲ್ಲಿ-ಕರಾಬ್ಜಪೀಠದಲ್ಲಿ, ಹಸ್ತಸರೋಜಮಂ-ಹಸ್ತಕಮಲವನ್ನು, ಪರಮಮಂತ್ರಮುಮಂ-ಉತ್ಕೃಷ್ಟವಾದಮಂತ್ರವನ್ನೂ, ಶಿವಲಿಂಗಮೂರ್ತಿಯಂ-ಶಿವಲಿಂಗವನ್ನೂ, ನ್ಯಸ್ತಮಂ-ಸಂಬಂಧವನ್ನೂ ಏಕೆಮಾಡಿದಂ? ಇದೇನು-ಇದು ತಾನೇನು ? ಇದರರ್ಥ ವಿಶೇಷವೆಂತುಟು-ಇದರಸ್ವರೂಪದ ವಿಶೇಷ ಹೇಗೆ ? ಎಂದು-ಹೀಗೆಂದು, ಆಸ್ತಿಕಬುದ್ಧಿಯಿಂ-ವಿಶ್ವಾಸಬುದ್ಧಿಯಿಂ, ತಿಳಿದೊಡೆ-ಅರಿದೊಡೆ, ಆತನೆ, ಮುಕ್ತನಲಾ-ಕೃತಾರ್ಥನಲಾ ! ||೭೫||

ಟಿಪ್ಪಣಿ—ಶ್ರೀಗುರುವು ದೀಕ್ಷಾಕಾಲದಲ್ಲಿ ಶಿಷ್ಯನ ತಲೆಯಮೇಲೆ ಕರಕಮಲವನ್ನೂ, ಶಿಷ್ಯನ ಕಿವಿಯಲ್ಲಿ ಶಿವಮಂತ್ರವನ್ನೂ, ಶಿಷ್ಯನ ಕೈಯಲ್ಲಿ ಇಷ್ಟಲಿಂಗವನ್ನೂ, ಏತಕ್ಕೆ ಸಂಬಂಧಗೊಳಿಸಿದನು? ಹೀಗೆ ಸಂಯೋಗಮಾಡಿದುದರ ಅರ್ಥವೇನು ? ಎಂಬುದಾಗಿ ವಿಶ್ವಾಸದಿಂದ ವಿಚಾರಮಾಡಿ, ಅದರೊಡಲನ್ನು ತಿಳಿದುಕೊಂಡರೆ, ಅವನೇ ಮುಕ್ತನಾಗುವನು. ||೭೫||

ಕ್ರಿಯೆ ಬಹಿರಿಷ್ಟಲಿಂಗ ಮಮಳಾಂತರಲಿಂಗಮೆ ಮಂತ್ರ ಮಾದ್ವಿಧಾ |
ಶ್ರಯಘನಭಾವಲಿಂಗಮೆ ಮಹತ್ತರಯೋಗ ಮಿದಂ ಕಳೇವರ ||
ತ್ರಯದೊ ಳಮರ್ಚಿ ಸದ್ಗುರು ಕೃಪಾನಿಧಿ ಮಾಡಿದ ದೀಕ್ಷೆಯರ್ಥನಿ |
ರ್ಣಯಮ ನುಪಾಯದಿಂ ತಿಳಿದೊ ಡಾತನೆ ಮುಕ್ತನಲಾ ಶಿವಾಧವಾ ||೬

ಟೀಕೆ—ಕ್ರಿಯೆ-ಕ್ರಿಯಾದೀಕ್ಷೆಯೇ, ಬಹಿರಿಷ್ಟಲಿಂಗಂ-ಬಾಹ್ಯದಿಷ್ಟ ಗವು, ಅಮಳಾಂತರಲಿಂಗಮೆ-ನಿರ್ಮಳವಾದ ಪ್ರಾಣಲಿಂಗವೆ, ಮಂತ್ರಂ-ಮ ದೀಕ್ಷೆ, ಆದ್ವಿಧಾಶ್ರಯ ಘನಭಾವಲಿಂಗಮೆ-ಆ ಇಷ್ಟಪ್ರಾಣಲಿಂಗಗಳಿಗಾಶ್ರ ವಾದ ಭಾವಲಿಂಗವೆ, ಮಹತ್ತರಯೋಗಂ-ಅಧಿಕತರವಾದ ವೇಧಾದೀಕ್ಷೆ ಇದಂ-ಈ ಲಿಂಗತ್ರಯವನ್ನು, ಕಳೇವರತ್ರಯದೊಳ್-ಅಂಗತ್ರಯದಲ್ಲಿ, ಅಮ ಸಂಬಂಧವಮಾಡಿ, ಕೃಪಾನಿಧಿ-ದಯಾನಿಧಿಯಪ್ಪ, ಸದ್ಗುರು-ಶ್ರೀಗುರುವು ಮಾ ಉಂಟುಮಾಡಿದಂಥ, ದೀಕ್ಷೆಯ-ದೀಕ್ಷಾತ್ರಯಂಗಳ, ಅರ್ಥನಿರ್ಣಯಮಂ-ಅ ನಿಶ್ಚಯವನ್ನು, ಉಪಾಯದಿಂ-ಚಾತುರ್ಯದಿಂದೆ, ತಿಳಿದೊಡೆ-ಅರಿದೊಡೆ, ಆತ ಅವನೇ, ಮುಕ್ತನಲಾ-ಕೃತಾರ್ಥನಲ್ಲವೆ ? ||೬

ಟಿಪ್ಪಣಿ—ಹೊರಗಣ ಸ್ಥೂಲಶರೀರದಲ್ಲಿ ಇಷ್ಟಲಿಂಗ ಸಂಬಂಧವನ್ನು ಮಾಡುವುದೇ ಕ್ರಿ ದೀಕ್ಷೆಯು. ಸೂಕ್ಷ್ಮಶರೀರದಲ್ಲಿ ಪ್ರಾಣಲಿಂಗ ಸಂಬಂಧವನ್ನುಂಟುಮಾಡಿ ಕೊಡುವುದೇ ಮ ದೀಕ್ಷೆಯು. ಆ ಇಷ್ಟಪ್ರಾಣಲಿಂಗಗಳಿಗೆರಡಕ್ಕೂ ಅಧಿಷ್ಠಾನವಾದ ಭಾವಲಿಂಗವನ್ನು ಕಾ ಶರೀರದಲ್ಲಿ ಸಂಬಂಧಿಸುವುದೇ ವೇಧಾದೀಕ್ಷೆಯು. ಶ್ರೀಗುರುವುಮಾಡಿದ ಈ ತ್ರಿವಿಧದೀಕ್ಷೆಯ ಸ್ಯವನ್ನು ವಿವೇಕದಿಂದ ತಿಳಿದುಕೊಂಡವನು ಮುಕ್ತನಾಗುವನು. ||೬

ಕಾರಣದೇಹದೀಕ್ಷೆ ಶಿರದೊ ಳ್ಕರಪದ್ಮವ ನಿಟ್ಟೊಡಾಯ್ತು ವಿ |
ಸ್ತಾರಿತಮಂತ್ರಮಂ ಶ್ರವಣದಲ್ಲಿ ನಿರೂಪಿಸಲಾಯ್ತು ಸೂಕ್ಷ್ಮಶಾ ||
ರೀರಪದೈಕದೀಕ್ಷೆ ತದುಪಾಧಿಬಹಿಸ್ತನುದೀಕ್ಷೆ ಲಿಂಗಮಂ |
ಸೇರಿಸಿ ಕೊಟ್ಟೊಡಾಯ್ತು ಕರದಲ್ಲಿ ಗುರುಪ್ರವರಂ ಶಿವಾಧವಾ ||೭

ಟೀಕೆ—ಗುರುಪ್ರವರಂ-ಶ್ರೀಗುರುನಾಥನು, ಶಿರದೊಳ್-ಶಿರಸ್ಸಿನಲ್ಲಿ, ಕರ ದ್ಮವನಿಟ್ಟೊಡೆ-ಹಸ್ತಕಮಲವನಿಟ್ಟೊಡೆ, ಕಾರಣದೇಹದೀಕ್ಷೆ-ಕಾರಣಶರೀರದ ದೀ ಕ್ಷೆಯು, ಆಯ್ತು-ಆದುದು; ಶ್ರವಣದಲ್ಲಿ-ಕರ್ಣದಲ್ಲಿ, ವಿಸ್ತಾರಿತಮಂತ್ರಮಂ-ವಿಸ್ತ ರಿಸಲ್ಪಟ್ಟ ಮಂತ್ರವನ್ನು, ನಿರೂಪಿಸಲ್-ನಿರೂಪಿಸಲಾಗಿ, ಸೂಕ್ಷ್ಮಶರೀರಪದೈಕ ಕ್ಷೆ-ಸೂಕ್ಷ್ಮಶರೀರಕ್ಕೆ ಚೈತನ್ಯವಾಗಿ ಮುಖ್ಯವಾದ ದೀಕ್ಷೆ, ("ಪದಂವ್ಯವ ತ್ರಾಣಸ್ಥಾನಲಕ್ಷ್ಮಾಂಘ್ರಿವಸ್ತುಷು" ಎಂದು ನಿಘಂಟು) ಆಯ್ತು-ಆದುದು ಕರದಲ್ಲಿ-ಹಸ್ತದಲ್ಲಿ, ಲಿಂಗಮಂ-ಇಷ್ಟಲಿಂಗವನ್ನು, ಸೇರಿಸಿಕೊಟ್ಟೊಡೆ-ಸಂಬಂಧ

ಮಾಡಿಕೊಟ್ಟೊಡೆ, ತದುಪಾಧಿಬಹಿಸ್ತನುದೀಕ್ಷೆ-ಆ ಸೂಕ್ಷ್ಮಕಾರಣಶರೀರಂಗಳ್ಗೆ ಅನ್ಯಮಾದ ಬಾಹ್ಯಶರೀರದೀಕ್ಷೆಯು, ಆಯ್ತು-ಆದುದು. ಈ ಅರ್ಥದಲ್ಲಿ—"ಹಸ್ತ ಮಸ್ತಕಸಂಯೊಗಾಚ್ಛಲಾದ್ವೇಧೇತಿಗೀಯತೇ | ಗುರುಣೋದೀರಿತಾಕರ್ಣೆಯಾಸಾ ಮಾಂತ್ರೀತಿಕಥ್ಯತೆ || ಶಿಷ್ಯಪಾಣಿತಳೇದತ್ತಾಯಾದೀಕ್ಷಾಸಾಕ್ರಿಯಾತ್ಮಿಕಾ" ಎಂದಾಗಮವುಂಟು. ||೭೭||

ಟಿಪ್ಪಣಿ—ಶ್ರೀಗುರುಶ್ರೇಷ್ಠನು ತನ್ನ ಹಸ್ತವನ್ನು ಶಿಷ್ಯನ ಮಸ್ತಕದಮೇಲೆ ಇಡಲಾಗಿ, ಅದು ಕಾರಣಶರೀರದಲ್ಲಿ ಮಾಡಿದ ವೇಧಾದೀಕ್ಷೆಯಾಯ್ತು; ಶಿವಮಂತ್ರವನ್ನು ಶಿಷ್ಯನ ಕಿವಿಯಲ್ಲಿ ಉಪದೇಶಿಸಲಾಗಿ, ಅದು ಸೂಕ್ಷ್ಮಶರೀರದಲ್ಲಿ ಮಾಡಿದ ಮನುದೀಕ್ಷೆಯಾಯ್ತು; ಶಿಷ್ಯನ ಹಸ್ತದಲ್ಲಿ ಇಷ್ಟಲಿಂಗವನ್ನು ಇರಿಸಿಕೊಟ್ಟರೆ, ಅದು ಸ್ಥೂಲಶರೀರದಲ್ಲಿ ಮಾಡಿದ ಕ್ರಿಯಾದೀಕ್ಷೆಯಾಯ್ತು ||೭೭||

ಇದುವಿಮಳಕ್ರಿಯಾಭಿಹಿತಲಿಂಗಮಿದುಜ್ಜ್ವಲಮಂತ್ರಲಿಂಗ ಮಿಂ |
ತಿದು ಪರಯೋಗಲಿಂಗ ಮಿದು ತತ್ತ್ರಿವಿಧಾಹ್ವಯಲಿಂಗಪೂಜೆ ತಾ ||
ನಿದು ಬಹಿರಂತರಾತ್ಮಪದ ಮೆಂಬ ತನುತ್ರಯಯುಕ್ತಿಯೆಂದು ತೋ |
ರಿದೊ ಡದು ವೀರಶೈವದುಪದೇಶವೆ ತಪ್ಪದಲಾ ಶಿವಾಧವಾ ||೭೮||

ಟೀಕೆ—ವಿಮಳಕ್ರಿಯಾಭಿಹಿತಲಿಂಗಂ-ವಿಮಳ-ನಿರ್ಮಳವಾದ, ಕ್ರಿಯಾ-ಕ್ರಿಯೆಯಿಂದ, ಅಭಿಹಿತ-ಪೇಳಲ್ಪಟ್ಟ, ಲಿಂಗಂ-ಇಷ್ಟಲಿಂಗವು, ಇದು-ಇದೀಗ, ಉಜ್ಜ್ವಲಮಂತ್ರಲಿಂಗಂ-ಉಜ್ಜ್ವಲ-ಬೆಳಗುತಿರ್ಪ, ಮಂತ್ರಲಿಂಗಂ-ಪ್ರಾಣಲಿಂಗವು, ಇದು-ಇದೀಗ, ಇಂತು-ಈ ಪ್ರಕಾರದಿಂದೆ, ಪರಯೋಗಲಿಂಗಂ-ಉತ್ಕೃಷ್ಟವಾದ ಭಾವಲಿಂಗವು, ಇದು-ಇದೀಗ, ತತ್ತ್ರಿವಿಧಾಹ್ವಯಲಿಂಗಪೂಜೆ-ಆ ಮೂರುಪೆಸರನುಳ್ಳ ಲಿಂಗದಪೂಜೆಯು, ತಾಂ-ತಾನು, ಇದು-ಇದೀಗ, ಬಹಿರಂತರಾತ್ಮಪದಮೆಂಬ-ಸ್ಥೂಲಸೂಕ್ಷ್ಮಕಾರಣಮೆಂಬ, ತನುತ್ರಯಯುಕ್ತಿ-ತನುಮೂರರ ಸಂಬಂಧದ ವಿಚಾರವು, ಇದು-ಇದೀಗ, ಎಂದು-ಹೀಗೆಂದು, ತೋರಿದೊಡೆ-ಶ್ರೀಗುರುನಾಥನರುಹಿದರೆ, ಅದು-ಅದುತಾನು, ವೀರಶೈವದುಪದೇಶವೆ-ವೀರಶೈವದೀಕ್ಷಾಮಾರ್ಗವೇ, ತಪ್ಪದಲಾ-ಓರೆಯಾಗದಲಾ. ||೭೮||

ಟಿಪ್ಪಣಿ—ಇದು ಕ್ರಿಯಾದೀಕ್ಷೆಯಿಂದ ಸಿದ್ಧಿಸಿದ ಇಷ್ಟಲಿಂಗವು, ಇದು ಮನುದೀಕ್ಷೆಯಿಂದ ಸಿದ್ಧಿಸಿದ ಪ್ರಾಣಲಿಂಗವು, ಇದು ವೇಧಾದೀಕ್ಷೆಯಿಂದ ಸಿದ್ಧಿಸಿದ ಭಾವಲಿಂಗವು ಈ ಮೂರು ಲಿಂಗಗಳೂ ಕ್ರಮವಾಗಿ ಸ್ಥೂಲಾದಿ ಶರೀರಗಳಲ್ಲಿ ಸಂಬಂಧಿಸಿದುವುಗಳು. ಈ ತ್ರಿವಿಧ ಲಿಂಗಗಳನ್ನಾರಾಧಿಸುವ ಕ್ರಮವು ಹೀಗೆ, ಎಂದು ಶ್ರೀಗುರುವು ನಿರ್ದೇಶಿಸಿ ಮಾಡಿದ ಉಪದೇಶವೇ ವೀರಶೈವದೀಕ್ಷಾಕ್ರಮವು. ||೭೮||

ಅವತಾರಿಕೆ—ಶರಣಸತಿಲಿಂಗಪತಿಭಾವಮಂ ವಾಙ್ಮಾತ್ರದಿಂ ನುಡಿದು ಭಿನ್ನಭಾವಿಗಳಾಗಿ ರ್ಪವರಂ ಖಂಡಿಸುತ್ತಿರ್ದಪಂ.—

ಸತಿ ಶರಣಂ ತದೀಯಪತಿ ಲಿಂಗ ಮೆನುತ್ತಿಹ ಲಿಂಗಭಕ್ತ ರಾ |
ಸತಿಪತಿಧರ್ಮಮಂ ತಿಳಿದುನೋಡದೆ ದೂರದ ದಾಸಭಾವಸಂ ||
ಸ್ಥಿತಿಯೊಳೆ ನಿಂದು ಸಂಶಯಜಡಪ್ರತಿಭಾಕ್ರಿಯೆಯಿಂ ಬಳಲ್ದು ನಿ |
ಶ್ಚಿತ ಪರಮೈಕ್ಯಮಂ ತಿಳಿಯದಿರ್ಪ ರಿದೇಂ ಗುಣಮೋ ಶಿವಾಧವಾ ||೬೯||

ಟೀಕೆ—ಶರಣಂ-ಶರಣನು, ಸತಿ-ಪತ್ನಿಯು, ಲಿಂಗಂ-ಲಿಂಗವು, ತದೀಯ ಪತಿ-ಆ ಶರಣಂಗೆ ಪತಿಯುಉ, ಎನುತ್ತಿಹ-ಹೀಗೆಂಬ, ಲಿಂಗಭಕ್ತರ್-ಲಿಂಗಭಕ್ತರು ಆ ಸತಿಪತಿಧರ್ಮಮಂ-ಆ ಶರಣಸತಿಲಿಂಗಪತಿಮಾರ್ಗವನ್ನು, ತಿಳಿದುನೋಡದೆ-ಅರಿ ದುನೋಡದೆ, ದೂರದದಾಸಭಾವಸಂಸ್ಥಿತಿಯೊಳೆ-ಬೇರಾದ ಭೃತ್ಯಭಾವದ ನಿಲುಕ ಯಲ್ಲಿಯೇ, ನಿಂದು-ನಿಂತು, ಸಂಶಯಜಡಪ್ರತಿಭಾಕ್ರಿಯೆಯಿಂ-ಸಂದೇಹವಾ ಅಜ್ಞಾನವ್ಯಾಪಾರದಿಂದೆ, ಬಳಲ್ದು-ಆಯಾಸಂಬಟ್ಟು, ನಿಶ್ಚಿತಪರಮೈಕ್ಯಮಂ-ನಿಶ್ಚ ಸಲ್ಪಟ್ಟ ಉತ್ಕೃಷ್ಟವಾದ ಘನಲಿಂಗೈಕ್ಯವನ್ನು, ತಿಳಿಯದಿರ್ಪರ್-ಅರಿಯದಿರ್ಪರು ಇದೇಂಗುಣಮೋ-ಇದೇನು ಗುಣವೊ! ಅಜ್ಞಾನಗುಣಮೆಂಬುದರ್ಥಂ. ||೬೯||

ಟಿಪ್ಪಣಿ—ತಾನು ಸತಿ ಲಿಂಗಪತಿಯೆಂಬುದಾಗಿ ಬಾಯಿಂದ ಹೇಳುತ್ತಿರುವ ಲಿಂಗಭಕ್ತರು ಆ ಸತಿಪತಿಧರ್ಮವನ್ನು ವಿಚಾರದಿಂದ ತಿಳಿದು ಅನುವರ್ತಿಸದೆ, ಸಮರಸಭಕ್ತಿ ಮಾರ್ಗಕ್ಕೆ ದೂ ವಾದ ಭೃತ್ಯಭಾವದಲ್ಲೇ ಇದ್ದು, ಸಂಶಯಬುದ್ಧಿಯಿಂದ ಕೂಡಿದ ಆಚರಣೆಯನ್ನು ಮಾಡುತ್ತ ಆಯಾಸಗೊಂಡು, ಶಾಸ್ತ್ರಗುರುವಾಕ್ಯಗಳಿಂದ ನಿಶ್ಚಿತವಾದ ಲಿಂಗಾಂಗಸಾಮರಸ್ಯ ಸ್ಥಿತಿಯನ್ನು ಅ ಯದೆ ಇರುವರು ಇದರಿಂದೇನು ಫಲ ? ||೬೯||

ಶರಣನೆ ಪತ್ನಿ ಕಂಡ ಶಿವಲಿಂಗವೆ ತತ್ಪತಿ ಕಂಡ ಭೂಮಿಗ |
ಚ್ಚರಿಯೆನಬಾರದೇ ನುಡಿವ ಠೀವಿಯೊ ಳಾನುಡಿ ಗಟ್ಟಿಯಾಗಿ ಬಿ ||
ತ್ತರಿಸಿದ ತಾತ್ವಿಕಾಚರಣೆಯುಳ್ಳೊಡೆ ಮತ್ತದು ತಾನೆ ಮುಕ್ತಿಶಾಂ |
ಕರಿಯೆನಬಾರದೇ ಬಯಲಮಾತಿನ ಬಣ್ಣಮದೇಂ ಶಿವಾಧವಾ ||೭೦||

ಟೀಕೆ—ಶರಣನೆ, ಪತ್ನಿಕಂಡ-ಸತಿಯಂತೆಗಡಾ, ಶಿವಲಿಂಗವೆ-ಮಾಂಗಲ್ಯ ವಾದ ಲಿಂಗವೆ, ತತ್ಪತಿಕಂಡ-ಆ ಶರಣಂಗೆ ಪತಿಯಂತೆಗಡಾ, ನುಡಿವಠೀವಿಯೊಳ್- ಹೀಗೆಂದು ನುಡಿವ ಸಘಾಟಿಕೆಯಲ್ಲಿ, ಭೂಮಿಗೆ-ಜಗತ್ತಿಗೆ, ಅಚ್ಚರಿಯೆನಬಾರದೇ- ಆಶ್ಚರ್ಯವೆನ್ನಬಾರದೇ (ಆಶ್ಚರ್ಯವೆನ್ನಬಹುದು)? ಆನುಡಿ-ಆನುಡಿದ ನುಡಿ, ಗಟ್ಟಿಯಾ ಗಿ-ದೃಢವಾಗಿ, ಬಿತ್ತರಿಸಿದ-ವಿಶಾಲಮಂಮಾಡಿದ, ತಾತ್ವಿಕಾಚರಣೆ-ಸಹಜವಾದ ಆಚರಣೆ, ಉಳ್ಳೊಡೆ-ಉಂಟಾದೊಡೆ, ಮತ್ತೆ-ಮರಳಿ, ಅದುತಾನೆ-ಅದೀಗತಾನೆ ಮುಕ್ತಿಶಾಂಕರಿಯೆನಬಾರದೆ-ಮೋಕ್ಷಸ್ವರೂಪವಾದ ಚಿತ್ತೆನಬಾರದೆ (ಎನ್ನಬಹು

ದು)? ಬಯಲಮಾತಿನಬಣ್ಣಂ-ವ್ಯರ್ಥವಾದ ನುಡಿಯೊಪ್ಪವು, ಅದೇಂ-ಅದೇನು ಪ್ರಯೋಜನವು ? ||೮೦||

ಟಿಪ್ಪಣಿ—ಶರಣನೇ ಸತಿ, ಲಿಂಗವೇ ಪತಿಯಂತೆ! ಈ ಭಾವವು ಲೋಕಕ್ಕಾಶ್ಚರ್ಯಕರವಲ್ಲವೆ? ಈ ವಿಧದ ಸತಿಪತಿತ್ವವು ಬಾಯಿಂದ ನುಡಿವಂತೆಯೇ ದೃಢವಾದ ಸಹಜಾಚರಣೆಯಲ್ಲಿಯೂ ಇದ್ದರೆ ಆದೇ ಚಿದ್ವ್ಯಕ್ತಿರೂಪವಾದ ಮುಕ್ತಿಯು. ಅಂತಹ ಸಹಜಾಚರಣೆಯಲ್ಲಿ ಸತಿಪತಿತ್ವವಿಲ್ಲದೆ ಬರಿಯಮಾತಿನಲ್ಲಿದ್ದರೆ ಪ್ರಯೋಜನವೇನು? ||೮೦||

ಅವತಾರಿಕೆ—ಶರಣನ ತನುಕರಣೇಂದ್ರಿಯಂಗಳ್ಗೆ ಲಿಂಗಸಂಬಂಧದಿಂ ಭೌತಿಕವರ್ತನವಿಲ್ಲವೆಂದು ಪೇಳುತ್ತಿರ್ದಪಂ.—

ಕಾಯಮುಮಿಂದ್ರಿಯಪ್ರಕರಮುಂ ಶಿವಲಿಂಗಕಳಾಪ್ರಸಾದಪೂ |
ರಾಯಪುನೀತಚಿತ್ಪರಮಲಕ್ಷಣಭಾವಮನೈದಿದಲ್ಲಿದೋ ||
ಷಾಯತನಪ್ರಪಂಚಗುಣಮಿಲ್ಲ ವಿಚಾರಿಸೆ ದಗ್ಧವಸ್ತ್ರದ |
ನ್ಯಾಯದಹಾಂಗೆ ತಪ್ಪದು ಗುರೂಕ್ತಿನಿರೂಪಣದಿಂ ಶಿವಾಧವಾ ||೮೧||

ಟೀಕೆ—ಕಾಯಮುಂ-ಶರಣನ ದೇಹವೂ, ಇಂದ್ರಿಯಪ್ರಕರಮುಂ-ಇಂದ್ರಿಯಸಮೂಹವೂ, ಶಿವಲಿಂಗಕಳಾಪ್ರಸಾದಪೂರಾಯಪುನೀತಚಿತ್ಪರಮಲಕ್ಷಣಭಾವಮಂ-ಶಿವಲಿಂಗ-ಪರಮ ಮಂಗಲಸ್ವರೂಪವಾದ ಲಿಂಗದ, ಕಳಾ-ಚೈತನ್ಯದ, ಪ್ರಸಾದ-ಪ್ರಸನ್ನತೆಯಿಂದ, ಪೂರಾಯ-ತುಂಬಲ್ಪಟ್ಟ, ಪುನೀತ-ಪವಿತ್ರವಾದ, ಚಿತ್-ಜ್ಞಾನದ, ಪರಮಲಕ್ಷಣ-ಉತ್ಕೃಷ್ಟವಾದ ಕುರುಹಿನ, ಭಾವಮಂ-ಸ್ವರೂಪವನ್ನು, ಐದಿದಲ್ಲಿ-ಸಂಬಂಧಿಸಿದಲ್ಲಿ, ದೋಷಾಯತನಪ್ರಪಂಚಗುಣಂ-ದೋಷಾಯತನ-ದೋಷಂಗಳ್ಗೆ ಸ್ಥಾನವಾದ, ಪ್ರಪಂಚಗುಣಂ-ತನುಕರಣೇಂದ್ರಿಯಂಗಳ ಪ್ರಪಂಚಗುಣವು, ಇಲ್ಲ-ಉಂಟಾಗಿರದು, ಗುರೂಕ್ತಿನಿರೂಪಣದಿಂ-ಶ್ರೀಗುರುವಚನೋಪದೇಶದಿಂದೆ, ವಿಚಾರಿಸೆ-ಅರೈದುನೋಡಲಾಗಿ, ದಗ್ಧವಸ್ತ್ರದ ನ್ಯಾಯದಹಾಂಗೆ-ಬೆಂದಬಟ್ಟೆಯ ನ್ಯಾಯದಹಾಂಗೆ, ತಪ್ಪದು-ತಪ್ಪುವುದಿಲ್ಲ ||೮೧||

ಟಿಪ್ಪಣಿ—ಗುರೂಪದೇಶದಿಂ ವಿಚಾರಮಾಡಿ ನೋಡಲಾಗಿ, ಶರಣನ ದೇಹೇಂದ್ರಿಯಗಳೆಲ್ಲಾ ಲಿಂಗಚೈತನ್ಯಂಗೊಂಡು, ತಲ್ಲಿಂಗಪ್ರಸಾದ ಪರಿಪೂರ್ಣತೆಯಿಂದ ಪರಿಶುದ್ಧವಾದ ಶಿವಜ್ಞಾನದ ಚಿಹ್ನವನ್ನು ಹೊಂದಿರುವಾಗ, ಆ ತನುಕರಣಗಳಲ್ಲಿ ಸ್ವಭಾವಸಿದ್ಧವಾದ ದೋಷಗುಣಗಳು ಎಲ್ಲಿರುವುವು? "ಅದ್ವೈತಭಕ್ತಿಯುಕ್ತಸ್ಯ ಯೋಗಿನಸ್ಸಕಲಕ್ರಿಯಾ | ಅಸ್ತೇದಗ್ಧಪಟನ್ಯಾಯಾ ತ್ಕ್ರಿಯಾಮಾತ್ರಾಹಿನಕ್ರಿಯಾ" ಎಂಬ ಪ್ರಮಾಣದಂತೆ ಶರಣನ ತನುಕರಣಾದಿಗಳ ಕ್ರಿಯೆಗಳೆಲ್ಲವೂ ಫಲಕಾಮುಪ್ರಯುಕ್ತಗಳಲ್ಲದ ಕಾರಣ ಅವು ಸುಟ್ಟಬಟ್ಟೆಯಂತೆ ತೋರಿಕೆಗೆಮಾತ್ರ ಇರುವುವೇ ಹೊರತು, ಬಂಧಕಗಳಾದ ಗುಣವುಳ್ಳುವುಗಳಾಗಿರುವುದಿಲ್ಲವೆಂದು ಪ್ರಮಾಣವುಂಟು ||೮೧||

ಅವತಾರಿಕೆ—ಲಿಂಗದಲ್ಲಿ ಸಮರಸಭಾವವನುಳ್ಳ ಶರಣನು ಫಲಪದಂಗಳ್ಗೆ ಕಾರಣವಾದ ಭಿನ್ನಕ್ರಿಯೆಯನಾಚರಿಸುವವನಲ್ಲವೆಂದು ಪೇಳುತ್ತಿರ್ದಪಂ.—

ಪತಿಹಿತಧರ್ಮಚಾರಿಣಿ ಯೆನಿಪ್ಪ ಮಹಾಸತಿ ವೇಸಿಮಾಳ್ಪವೋಲ್ |
ಚತುರತೆ ರೀತಿ ಧಾತು ಕಡುಜಾಣ್ಮೆ ಮೃದೂಕ್ತಿ ಬಹೂಪಚಾರಸಂ ||
ಗತಿಯ ನದೆತ್ತಬಲ್ಲಳು ಶಿವೈಕಸಮರ್ಪಿತಚಿತ್ತದಿಂ ದೃಢ |
ವ್ರತ ನೆನಿಸಿರ್ಪ ಭಕ್ತ ನುಳಿದಂಗಮ ನೆಂತರಿವಂ ಶಿವಾಧವಾ ||೮೩||

ಟೀಕೆ—ಪತಿಹಿತಧರ್ಮಚಾರಿಣಿಯೆನಿಪ್ಪ-ಪತಿಹಿತ-ಪುರುಷಂಗೆ ಹಿತವಾದ ಧರ್ಮಚಾರಿಣಿಯೆನಿಪ್ಪ-ವ್ರತವನಾಚರಿಸುವಾಕೆಯಾದ, ಮಹಾಸತಿ-ಮಹಾಪತಿವ್ರತೆ ವೇಸಿ-ಸೂಳೆಯು, ಮಾಳ್ಪವೋಲ್-ಮಾಡುವಹಾಂಗೆ, ಚತುರತೆ.....ಸಂಗತಿಯಂ-ಚತುರತೆ-ಚಾತುರ್ಯವನ್ನು, ರೀತಿ-ನಯವನ್ನು, ಧಾತು-ಆ ಪುರುಷನ ಪ್ರಕೃತಿಯನ್ನು, ಕಡುಜಾಣ್ಮೆ-ಬಹಳವಾದ ಜಾಣತನವನ್ನು, ಮೃದೂಕ್ತಿ-ಮೆಲ್ನುಡಿಯನ್ನು, ಬಹೂಪಚಾರಸಂಗತಿಯಂ-ಅನೇಕ ಸನ್ಮಾನವಮಾಡುವುದನ್ನು, ಅದೆತ್ತ ಬಲ್ಲಳು-ಅದೇನೆಂದುಬಲ್ಲಳು (ಏನನ್ನೂ ಅರಿಯಳೆಂಬುದರ್ಥಂ)? ದೃಢವ್ರತನೆನಿಸಿರ್ಪ-ದೃಢವಾದ ಸಾಮರಸ್ಯವ್ರತಿಯಾದ, ಭಕ್ತಂ-ಭಕ್ತನು, ಶಿವೈಕಸಮರ್ಪಿತಚಿತ್ತದಿಂ-ಶಿವಲಿಂಗವೊಂದರಲ್ಲಿಯೇ ಇರಿಸಲ್ಪಟ್ಟ ಚಿತ್ತದಿಂದೆ, ಉಳಿದಂಗಮಂ-ಬಾಹ್ಯವಾದ ಕಪಟಾಚಾರವನ್ನು, ಎಂತರಿವಂ-ಏನೆಂದುಬಲ್ಲನು (ಅರಿಯನೆಂಬುದರ್ಥ).

ಟಿಪ್ಪಣಿ—ತನ್ನ ಪತಿಯೊಬ್ಬನಿಗೇ ಹಿತವಾದ ಕಾರ್ಯವನ್ನು ಮಾಡುವುದರಲ್ಲಿ ತತ್ಪರಳಾದ ಮಹಾಪತಿವ್ರತೆಯು, ಸೂಳೆಯಂತೆ ಚಾತುರ್ಯ ಬೆಡಗು ಹಲವು ಮಂದಿಗಳ ರೀತಿಗನುಸಾರವಾದ ನಡೆ ಮೆಲ್ಮಾತು ವಿವಿಧೋಪಚಾರ ಮೊದಲಾದುವುಗಳ ಮಾಡುವುದನ್ನು ಬಲ್ಲಳೆ? ಆದರಂತೆಯೇ ಶಿವನಿಗೆ ತನ್ನ ಚಿತ್ತವನ್ನೆಲ್ಲಾ ಅರ್ಪಿಸಿ ಶಿವೈಕವ್ರತತತ್ಪರನಾದ ಶಿವಶರಣನು ಬಹಿರಾಡಂಬರದ ಕಪಟಾಂತರಾಚಾರಗಳನ್ನು ನಡೆಯಿಸುವುದುಂಟೆ? ||೮೩||

ಅವತಾರಿಕೆ—ಲಿಂಗಾಂಗಸಂಬಂಧಿಗಳಾದ ಶರಣರು ಎಂದೆಂದೂ ಶಿವಭಕ್ತರಾಗಿಯೇ ಇರ್ಪರು, ಲಿಂಗವಿಹೀನರಾದ ಭವಿಗಳು ಎಂದೆಂದೂ ಭವಿಗಳಾಗಿಯೇ ಇರ್ಪರು. ಎಂದು ಪೇಳುತ್ತಿರ್ದಪಂ.—

ಭವಿಗಡ ಭಕ್ತನಪ್ಪುದದು ಮಿಥ್ಯೆಯಲಾ ಭವಿ ಭಕ್ತನಪ್ಪನೇ |
ಶಿವಶಿವ ಭಕ್ತನೇ ಭವಭವಾಂತರದೊಳ್ನೆರೆ ಭಕ್ತ ನಪ್ಪ ನಾ ||
ಭವಿ ಭವಿಯಾಗಿಯೇ ಭವಭವಾಂತರದೊ ಳ್ತಿರುಗುತ್ತಮಿರ್ಪ ನೆಂ |
ಬ ವಚನಮುಂಟಲ್ತೆ ಶಿವರಹಸ್ಯದ ಶಾಸನದೊಳ್ಳಿವಾಧವಾ ||೮೪||

ಟೀಕೆ—ಭವಿಗಡ-ಭವಿಯುಂತೆಕಂಡಾ? ಭಕ್ತನಪ್ಪುದು-ಶಿವಭಕ್ತನಪ್ಪುದು, ಅದು-ಅದುತಾನು, ಮಿಥ್ಯೆಯಲಾ-ಸಟೆಯಲ್ಲವೆ? ಆ ಭವಿ, ಭಕ್ತನಪ್ಪನೆ-ಭಕ್ತನಾಗುವನೆ? ಆಗನು. ಶಿವಶಿವ-ಚೋದ್ಯವು! ಆ ಭಕ್ತನೆ-ಆ ಶಿವಭಕ್ತನೇ, ಭವಭವಾಂ

ತರದೊಳ್-ಜನ್ಮಜನ್ಮಾಂತರಗಳಲ್ಲಿಯೂ, ನೆರೆ-ಚೆನ್ನಾಗಿ, ಭಕ್ತನಪ್ಪಂ-ಶಿವಭಕ್ತನಾಗುವನು, ಆ ಭವಿ-ಅಲಿಂಗಬಾಹಿರನಾದ ಭವಿಯು, ಭವಭವಾಂತರದೊಳ್-ಜನ್ಮಜನ್ಮಾಂತರದಲ್ಲಿ, ಭವಿಯಾಗಿಯೇ-ಲಿಂಗಬಾಹಿರನಾಗಿಯೇ, ತಿರುಗುತ್ತಮಿರ್ಪಂ-ಭ್ರಮಿಸುತ್ತಿರ್ಪನು, ಎಂಬ-ಹೀಗೆಂಬ, ವಚನಂ-ವಾಕ್ಯವು, ಶಿವರಹಸ್ಯದಶಾಸನದೊಳ್-ಶಿವರಹಸ್ಯವೆಂಬ ಆಗಮದಲ್ಲಿ, ಉಂಟಲ್ತೆ-ಉಂಟುಕಣ್ಣೆ, ಈ ಅರ್ಥದಲ್ಲಿ "ನಾಶಿವಸ್ಯಶಿವೋಪಾಸ್ತಿರ್ಘಟತೇಜನ್ಮಕೋಟಿಭಿಃ | ಶಿವಸ್ಯೈವಶಿವೋಪಾಸ್ತಿರಿತಿ ನಾನಾಸ್ಮೃತಿಸ್ಥಿತಿಃ" ಎಂದುಂಟು. ||೮೩||

ಟಿಪ್ಪಣಿ—ಭವಿಯಾದವನು ಭಕ್ತನಾಗುವುದು ಸುಳ್ಳು. ಸರ್ವಾಂಗಲಿಂಗಸಾಹಿತ್ಯ ಸಂಪನ್ನನಾದರೇನೆಯೇ ಅವನು ಭಕ್ತನೆನಿಸಿಕೊಳ್ಳುವನು. ಹಾಗಲ್ಲದೆ ತೋರಿಕೆಗೆಮಾತ್ರವೇ ಲಿಂಗಧಾರಣವುಳ್ಳವನಾಗಿ, ಬಂಧಕರಗಳಾದ ತನುಕರಣ ಗುಣಗಳಿಂದ ನಿರ್ಲಿಪ್ತನಾಗದಿದ್ದರೆ ಅಂಥವನು ಭವಿಯೆಂದೇ ಹೇಳಲ್ಪಡುವನು. ಅಂಥ ಭವಿಗೆ ಜನ್ಮಜನ್ಮಾಂತರದಲ್ಲೂ ಭವಿತ್ವವೇ ಸಿದ್ಧಿಸುವುದಲ್ಲದೆ, ಬಂಧಮೋಚನೆಯುಳ್ಳ ಭಕ್ತತ್ವವು ದೊರೆಕೊಳ್ಳುವುದು. ಸರ್ವದೇಹಕರಣಗಳಲ್ಲಿ ಲಿಂಗಮಯನಾಗಿರುವವನಿಗೇ ಶಿವೋಪಾಸನೆಯು ಲಭಿಸುವುದು. ಎಂಬ ಶಿವರಹಸ್ಯದ ವಚನದಿಂದಲೂ ಇದೇ ಅರ್ಥವು ವ್ಯಕ್ತವಾಗುವುದು. ||೮೩||

ಭವಿಯಿದಿರಲ್ಲಿ ಕುಳ್ಳಿರದ ಮುಟ್ಟದ ನೋಡದ ವೀರಶೈವ ನಾ |
ಭವಿಯನೆ ಮತ್ತೆ ಮುಟ್ಟಿನುಡಿದೀಕ್ಷಿಸಿ ಭಕ್ತನ ನೊಲ್ದು ಮಾಳ್ಪ ಮಾ ||
ಟವ ನಿದ ನೆತ್ತಬಲ್ಲೆ ವತಿಜೋದ್ಯ ವನನ್ವಿತ ವದ್ಭುತಾದ್ಭುತಂ |
ಭುವನದೊಳೆಲ್ಲಿಯುಂ ಭವಿಗೆ ಭಕ್ತತೆ ಯಿಲ್ಲ ಬಿಡಾ ಶಿವಾಧವಾ ||೮೪||

ಟೀಕೆ—ಭವಿಯಿದಿರಲ್ಲಿ-ಲಿಂಗಾಂಗಿಯಲ್ಲದವನ ಸಮಕ್ಷದಲ್ಲಿ, ಕುಳ್ಳಿರದ-ಕುಳಿತಿರದ, ಮುಟ್ಟದ-ಸೋಂಕದ, ನೋಡದ-ಅಲೋಕನಂಗೆಯ್ಯದ, ವೀರಶೈವಂ-ವೀರಮಾಹೇಶ್ವರನು, "ಆಸನೇಶಯನೇಯಾನೇ ಭವಿಭಿಸ್ಸಹಭೋಜನೇ | ಸಂಚರಂತಿಮಹಾಘೋರೇ ನರಕೇಕಾಲಮಕ್ಷಯಂ" ಎಂದುಂಟಾಗಿ, ಆಭವಿಯನೆ-ಅಲಿಂಗಬಾಹಿರನನ್ನೇ, ಮತ್ತೆ-ಮರಳಿ, ಮುಟ್ಟಿ-ಸೋಂಕಿ, ನುಡಿದು-ಮಾತನಾಡಿ, ಈಕ್ಷಿಸಿ-ನೋಡಿ, ಭಕ್ತನಂ-ಶಿವಭಕ್ತನನ್ನು, ಒಲ್ದುಮಾಳ್ಪ-ಚೆನ್ನಾಗಿಮಾಡುವ, ಮಾಟವಂ-ಕರ್ಮವನ್ನು, ಇದಂ-ಇದನ್ನು, ಎತ್ತಬಲ್ಲೆವು-ಏನೆಂದುಬಲ್ಲೆವು ? ಅತಿಜೋದ್ಯಂ-ಅತ್ಯಂತಚೋದ್ಯವು, ಅನನ್ವಿತಂ-ಅವಂಗೆ ಶಿವಭಕ್ತಿಕೂಡಿದುದಲ್ಲ, ಅದ್ಭುತಾದ್ಭುತಂ-ಅಚ್ಚರಿಅಚ್ಚರಿ, ಭವಿಗೆ-ಅಲಿಂಗಭವಿಗೆ, ಭುವನದೊಳೆಲ್ಲಿಯುಂ-ಜಗತ್ತಿನೊಳೆಲ್ಲಿಯೂ, ಭಕ್ತತೆಯಿಲ್ಲ-ಭಕ್ತತ್ವವಿಲ್ಲ, ಬಿಡಾ-ಬಿಡು. ||೮೪||

ಟಿಪ್ಪಣಿ—ವೀರಶೈವನು ಭವಿಯ ಮುಂದೆ ಕುಳಿತುಕೊಳ್ಳಲಾಗದು, ಅವನನ್ನು ಮುಟ್ಟಲಾಗದು, ನೋಡಲಾಗದು ಎಂದು ವಿಧಿಯಿರುವಾಗ, ಅಂತಪ್ಪ ವೀರಶೈವನು ಭವಿಯನ್ನು ಮುಟ್ಟಿ

ನೋಡಿ ಮಾತನಾಡಿಸಿ ಭಕ್ತನನ್ನು ಮಾಡುವ ಮಾಟವೀಗ ಆಶ್ಚರ್ಯವು, ಇದು ಅಸಂಭವ ಎಂದರೆ—"ಸ್ವಕರ್ಮಪರಿಪಾಕೇನಪ್ರಕ್ಷೀಣಮಲವಾಸನಃ । ಶಿವಪ್ರಸಾದಾಜ್ಜೀವೋಯಂಜಾಯತೇ ಶುದ್ಧಮಾನಸಃ । ಶುದ್ಧಾಂತಃಕರಣೇಜೀವೇಶುದ್ಧಕರ್ಮವಿಪಾಕತಃ । ಜಾಯತೇಶಿವಕಾರುಣ್ಯಾತ್ ಸ್ಫುಟಾಭಕ್ತಿರೀಶ್ವರೀ । ಜಂತುರಂತ್ಯಶರೀರೋಸೌಪಿಂಡಶಬ್ದಾಭಿಧೇಯಕಃ ॥ ಎಂಬ ಸಿದ್ಧಾಂತ ಶಿಖಾಮಣಿಯ ವಚನಾನುಸಾರವಾಗಿ ಕರ್ಮಪರಿಪಾಕದಿಂದ ಮಲವಾಸನೆಯಳಿದು, ಶಿವಾನುಗ್ರಹದಿಂ ಶುದ್ಧ ಮನಸ್ಕನಾದವನಿಗೆ ಶಿವಕಾರುಣ್ಯದಿಂದ ಶಿವಭಕ್ತಿಯುತ್ಪನ್ನವಾಗುತ್ತದೆ. ಅಂಥವನಿಗೆ ಅದೇ ಚರಮಶರೀರವಾಗಿರುವುದು. ಇಂತಪ್ಪ ಚರಮಶರೀರಿಯು ಮಾತ್ರ ಭಕ್ತನಾಗುವುದಕ್ಕೆ ಅರ್ಹನಾಗು ತ್ತಾನಲ್ಲದೆ, ಉಳಿದ ಮಲಸಂವೃತರಾದ ಭವಿಗಳಿಗೆ ಎಂದಿಗೂ ಭಕ್ತತ್ವವು ದೊರಕೊಳ್ಳದೆಂದು ಭಾವ

ಶಿವನೆ ಶಿವಾರ್ಚನೈಕರತನಾಗಿರಲೋಸುಗ ಮಾತ್ಮಲೋಕದಿಂ ।
ದವತರಿಸಿ ಸ್ವಕೀಯಘನಲೀಲೆಯೊಳೊಯ್ಯನೆ ಮಾನುಷೀಯಮ ॥
ಪ್ಪವಿಮಳವೇಷಮಂ ಧರಿಸಿ ಸರ್ವಜಗದ್ಧಿತದಿವ್ಯಚೇಷ್ಟೆಯಿಂ ।
ತವೆ ಪರಿರಂಜಿಪಂ ಪರಮಭಕ್ತಮಯಸ್ಥಳದೊಳ್ ಶಿವಾಧವಾ ॥೮೫॥

ಟೀಕೆ—ಶಿವನೆ-ಶಿವನುತಾನೆ, ಶಿವಾರ್ಚನೈಕರತನಾಗಿರಲೋಸುಗಂ-ಶಿವಭಕ್ತಿ ತತ್ಪರನಾಗಿರಲೋಸ್ಕರ, ಆತ್ಮಲೋಕದಿಂದೆ-ತನ್ನ ಕೈಲಾಸದಿಂದೆ, ಅವತರಿಸಿ-ಇಳಿದು ಬಂದು, ಸ್ವಕೀಯಘನಲೀಲೆಯೊಳ್, ತನ್ನ ಸಂಬಂಧವಾದ ವಿಲಾಸದಿಂದ, ಒಯ್ಯನೆ-ಚೆನ್ನಾಗಿ, ಮಾನುಷೀಯಮಪ್ಪ-ಮನುಷ್ಯಸಂಬಂಧವಾದ, ವಿಮಳವೇ ಷಮಂ-ನಿರ್ಮಳವೇಷವನ್ನು, ಧರಿಸಿ-ಅಂಗೀಕರಿಸಿ, ಸರ್ವಜಗದ್ಧಿತದಿವ್ಯಚೇಷ್ಟೆಯಿಂ, ಸರ್ವ-ಸಮಸ್ತವಾದ, ಜಗತ್-ಲೋಕಂಗಳಿಗೆ, ಹಿತ-ಉಪಕಾರವಾದ, ದಿವ್ಯ-ಮನೋಹರವಾದ, ಚೇಷ್ಟೆಯಿಂ-ವ್ಯಾಪಾರದಿಂದ, ಪರಮಭಕ್ತಮಯಸ್ಥಳದೊಳ್-ಪರಮ-ಉತ್ಕೃಷ್ಟವಾದ, ಭಕ್ತಮಯಸ್ಥಳದೊಳ್-ಭಕ್ತಸ್ವರೂಪವಾದ ಸ್ಥಳದಲ್ಲಿ ತವೆ-ಅತ್ಯಂತವಾಗಿ, ಪರಿರಂಜಿಪಂ-ಮಿಗೆವೊಪ್ಪುತ್ತಿರ್ಪನು. ಈ ಅರ್ಥದಲ್ಲಿ—"ಯೆರು ದ್ರಲೋಕಾದವತೀರ್ಯರುದ್ರಾ ಮಾನುಷ್ಯಮಾಶ್ರಿತ್ಯಜಗದ್ಧಿತಾಯ । ಚರಂತಿನಾನಾ ವಿಧಚಾರುಚೇಷ್ಟಾಸ್ತೇಭ್ಯೋ ನಮಸ್ತ್ರ್ಯಂಬಕಪೂಜಕೇಭ್ಯಃ" ಎಂದು ಶಂಕರಸಂಹಿತೆ ಯುಂಟು. "ವಿರೂಪಾಸ್ಸಂತೊಬಹುಧೈಕರೂಪಾಃ" ಎಂದು ತೈತ್ತಿರೀಯೋಪ ನಿಷತ್ತು. "ಸರ್ವಲೋಕೋಪಕಾರಾಯಯೋದೇವಃಪರಮೇಶ್ವರಃ । ಚರತ್ಯತಿಥಿ ರೂಪೇಣ ನಮಸ್ತೇಜಂಗಮಾತ್ಮನೇ" ಎಂದು ವೀರತಂತ್ರಮುಂಟು. ॥೮೫॥

ಟಿಪ್ಪಣಿ—ಪರಶಿವನೇ ತನ್ನ ಲೀಲೆಯಿಂದ ಜಗಚ್ಛಿಕ್ಷಣಾರ್ಥವಾಗಿ ಶಿವಾರ್ಚನಾಸಕ್ತನಾಗಿರ ಬೇಕೆಂದು ಭೂಮಿಯಲ್ಲಿ ಮಾನುಷಶರೀರವನ್ನು ಧರಿಸಿ ಅವತರಿಸಿ, ಭಕ್ತಸ್ಥಲದಲ್ಲಿ ನೆಲಸಿರುವನು. ಆಪರಶಿವನೇ ಲಿಂಗಧಾರಿಯಾಗಿ ಲಿಂಗಾರ್ಚನಾಸಕ್ತನಾಗಿರುವುದರಿಂದ, "ಮಹಾಜನೋಯೇನಗತಸ್ಸ ಪಂಥಾಃ" ಎಂಬಂತೆ ಇತರರೆಲ್ಲರಿಗೂ ಆದನ್ನನುಸರಿಸಬೇಕೆಂಬ ಬುದ್ಧಿಯುಂಟಾಗುವುದು.

" ಜಗದ್ಧಿತಾರ್ಥವಾಗಿ ಶಿವಲೋಕದಿಂದ ರುದ್ರರು ಭೂಮಿಗೆ ಬಂದು ನಾನಾವಿಧವ್ಯಾಪಾರಗಳನ್ನು ಅವಲಂಬಿಸಿಕೊಂಡಿರುವರು." ಎಂಬುದಾಗಿ ಶಂಕರಸಂಹಿತೆಯಲ್ಲಿ ಇದೇ ಅಭಿಪ್ರಾಯವು ಹೇಳಲ್ಪಟ್ಟಿರುವುದು. ||೮೫||

ಅವತಾರಿಕೆ—ಶರಣರು ಮಂತ್ರಶರೀರಿಗಳೆಂದು ಪೇಳುತ್ತಿರ್ದಪಂ—

ಒರೆದ ಗುರೂಪದೇಶದ ಮಹಾಘನಮಂತ್ರ ಮೆನಿಪ್ಪ ಪಂಚಕಾ |
ಕ್ಷರವೆ ಶರೀರಭೂತಕರಣೇಂದ್ರಿಯಮಾತ್ರಸಮೂಹಮಾಗಿ ಸಂ ||
ಚರಿಸುವ ಕಾರಣಂ ಶರಣರಂಗವೆ ನಿರ್ಮಳಮಂತ್ರಪಿಂಡವೆಂ |
ಒರು ಶಿವತತ್ವಸಾರಪರಮಾರ್ಥವಿಚಾರಪರರ್ ಶಿವಾಧವಾ ||೮೬||

ಟೀಕೆ—ಶಿವತತ್ವಸಾರಪರಮಾರ್ಥವಿಚಾರಪರರ್-ಶಿವತತ್ವ-ಶಿವತತ್ವದಲ್ಲಿ, ಸಾರ-ಶ್ರೇಷ್ಠವಾದ, ಪರಮಾರ್ಥ-ಸಹಜಾರ್ಥದಲ್ಲಿ, ವಿಚಾರಪರರ್-ವಿವೇಕವುಳ್ಳವರುಗಳು, ಒರೆದ-ನಿರೂಪಿಸಿದ, ಗುರೂಪದೇಶದ-ಗುರುವಾಕ್ಯದ, ಮಹಾಘನಮಂತ್ರಂ-ಮಹಾಘನ-ಮಿಗೆದೊಡ್ಡಿತ್ತಾದ, ಮಂತ್ರಂ ಎನಿಪ್ಪ-ಮಂತ್ರವೆನಿಸುವಂಥ; ಪಂಚಕಾಕ್ಷರವೆ-ಪಂಚಾಕ್ಷರವೆ, ಶರೀರಭೂತಕರಣೇಂದ್ರಿಯಮಾತ್ರಸಮೂಹಮಾಗಿ-ಶರೀರ-ದೇಹವು, ಭೂತ-ಪಂಚಭೂತಗಳು, ಕರಣ-ಪಂಚಕರಣಂಗಳು, ಇಂದ್ರಿಯ-ದಶೇಂದ್ರಿಯಗಳು, ಮಾತ್ರ-ಪಂಚವಿಷಯಂಗಳು, (ಮೀಯಂತ ಇತಿಮಾತ್ರಾಃ-ವಿಷಯಾಃ ಎಂದು ಶಂಕರಭಾಷ್ಯವುಂಟು) ಸಮೂಹಮಾಗಿ-ಇವೆಲ್ಲವೂ ಮಂತ್ರಸಮೂಹವೇ ಆಗಿ, ಸಂಚರಿಸುವಕಾರಣಂ-ಆಚರಿಸುವಕಾರಣದಿದೆ, ಶರಣರಂಗವೆ-ಶರಣರ ಶರೀರವೇ, ನಿರ್ಮಳಮಂತ್ರಪಿಂಡವೆಂಬರು-ನಿರ್ಮಳವಾದ ಮಂತ್ರದೇಹವೆಂಬುವರು.

ಟಿಪ್ಪಣಿ—ಶ್ರೀಗುರುವು ದೀಕ್ಷಾಕಾಲದಲ್ಲಿ ಶಿಷ್ಯನ ದೇಹದಲ್ಲಿ ಭೂತಶುದ್ಧಿ ತತ್ವಶುದ್ಧಿಗಳನ್ನೆಸಗಿ, ತನುಭೂತಕರಣೇಂದ್ರಿಯ ವಿಷಯಗಳಲ್ಲೆಲ್ಲಾ ಪ್ರಣವವನ್ನು ನೆಲೆಗೊಳಿಸಿರುವ ಕಾರಣ, ಶರಣನಲ್ಲಿ ಮಾಂಸಪಿಂಡತ್ವವಳಿದು ಮಂತ್ರಪಿಂಡತ್ವವುಂಟಾಗಿರುವ ಕಾರಣ, ಅಂತಪ್ಪ ಶಿವಶರಣರು ಮಂತ್ರದೇಹಿಗಳಾಗಿರುವರೆಂದು ಶಿವತತ್ವರಹಸ್ಯಾರ್ಥವಂ ಬಲ್ಲವರು ಹೇಳುವರು. ||೮೬||

ಭೂಮಿ ಜಲಾಗ್ನಿ ಮಾರುತ ವಿಯತ್ತಳಪಂಚಕಮುಖ್ಯಪಂಚಕ |
ಸ್ತೋಮದ ಮಾತೃಗೇಹಮೆನಿಸಿರ್ಪ ಮಹಾಶಿವಮಂತ್ರಪಂಚವ ||
ರ್ಣ್ಣಾಮಳದೀಕ್ಷೆಯಿಂ ಪರಮಮಂತ್ರಕಳಾತ್ಮಕಮಾದ ದೇಹವಿ |
ಶ್ರಾಮಪದಪ್ರಸಿದ್ಧಶರಣಂ ಗಿಹವೇಂ ಪರವೇಂ ಶಿವಾಧವಾ ||೮೭||

ಟೀಕೆ—ಭೂಮಿಜಲಾಗ್ನಿಮಾರುತವಿಯತ್ತಳ ಪಂಚಕಮುಖ್ಯಪಂಚಕಸ್ತೋಮದ-ಭೂಮಿ-ಪೃಥಿವಿ, ಜಲ-ಉದಕ, ಅಗ್ನಿ-ತೇಜಸ್ಸು, ಮಾರುತ-ವಾಯು, ವಿಯತ್ತಳ-ಆಕಾಶ, ಇವುಗಳ, ಪಂಚಕ-ಐದು, ಮುಖ್ಯ-ಮೊದಲಾದ, ಪಂಚಕಸ್ತೋ-

ಮದ, ಇಪ್ಪತ್ತೈದು ತತ್ವಸಮೂಹದ, ಮಾತೃಗೇಹಮೆನಿಸಿರ್ಪ-ತಾಯಿಮನೆ
ಸುವ, ಮಹಾಶಿವಮಂತ್ರಪಂಚವರ್ಣಾಮಳದೀಕ್ಷೆಯಿಂ-ಮಹಾಶಿವಮಂತ್ರ
ವಾದ ಶಿವಮಂತ್ರವೆಂಬ, ಪಂಚವರ್ಣ-ಐದಕ್ಷರಂಗಳಿಂದಾದ, ಅಮಳದೀಕ್ಷೆ
ನಿರ್ಮಳವಾದದೀಕ್ಷೆಯಿಂದೆ, ಪರಮಮಂತ್ರಕಳಾತ್ಮಕಮಾದ-ಉತ್ಕೃಷ್ಟವಾದ
ತ್ರಚೈತನ್ಯದ ರೂಪವಾದ, ದೇಹವಿಶ್ರಾಮಪದಪ್ರಸಿದ್ಧಶರಣಂಗೆ-ದೇಹ-ದೇ
ವಿಶ್ರಾಂತಿ ಸ್ಥಾನವಾದ, ಪ್ರಸಿದ್ಧ-ಪ್ರಖ್ಯಾತನಾದ, ಶರಣಂಗೆ-ಶಿವಶರಣಂಗೆ,
ವೇಂ ಪರವೇಂ-ಇಹಲೋಕವೇನು ? ಪರಲೋಕವೇನು ? ||೬

ಟಿಪ್ಪಣಿ—ಪೃಥಿವಿ ಮೊದಲಾದ ೨೫ ತತ್ವಗಳಿಗೆ ಮೂಲಬೀಜವಾದ ಶಿವಪಂಚಾಕ್ಷ
ತ್ರದ ದೀಕ್ಷೆಯನ್ನು ಹೊಂದಿದಕಾರಣ, ಮಂತ್ರಮಯ ಶರೀರಿಯಾಗಿ, ಚರಮದೇಹ
ನೆಲಸಿ, ಜೀವನ್ಮುಕ್ತನಾಗಿರುವ ಶರಣನಿಗೆ ಈ ಲೋಕವೇನು ? ಪರಲೋಕವೇನು ? ಕ್ರಿಯಾವಿ
ಯನ್ನೈದಿರುವ ಆ ಶರಣನಿಗೆ ದೇಹ ಸಂಬಂಧದಿಂದ ಯಾವವಿಧದ ಬಂಧನವೂ ಉಂಟಾಗು
ವಾದಕಾರಣ, ನಿರ್ಲಿಪ್ತನಾಗಿ ಮುಕ್ತನಾಗಿಯೇ ಇರುವನು.

ಅನುಭವಗಮ್ಯ ಶಬ್ದಪರಿಗಮ್ಯ ವಿಶಿಷ್ಟವಿಶುದ್ಧಸತ್ಕ್ರಿಯಾ |
ಘನಪದಗಮ್ಯಸಂಜ್ಞೆವಿಡಿದೊಪ್ಪುವ ನಿರ್ಮಳದೀಕ್ಷೆಯಿಂ ಕೃಪಾ ||
ವನಧಿ ಮಹಾಗುರುಪ್ರಭು ತನುತ್ರಯದೊಳ್ ತ್ರಿವಿಧಾಖ್ಯಲಿಂಗಮಂ |
ಸುನಿಹಿತಮಾಗಿ ತಂದಿರಿಸ ಲಾಯ್ತು ನಿಜೈಕ್ಯಪದಂ ಶಿವಾಧವಾ ||೬

ಟೀಕೆ—ಕೃಪಾವನಧಿ-ದಯಾಸಮುದ್ರನಾದ, ಮಹಾಗುರುಪ್ರಭು
ಮಹಾಗುರುಸ್ವಾಮಿಯು, ಅನುಭವಗಮ್ಯಶಬ್ದಪರಿಗಮ್ಯ ವಿಶಿಷ್ಟವಿಶುದ್ಧಸ
ಯಾಘನಪದಗಮ್ಯಸಂಜ್ಞೆವಿಡಿದು-ಅನುಭವಗಮ್ಯ-ಜ್ಞಾನದಿಂದೆ ಅರಿಯಲ್ಪ
ಶಬ್ದಪರಿಗಮ್ಯ-ಮಂತ್ರದಿಂದೈದಲ್ತಕ್ಕ, ವಿಶಿಷ್ಟ-ಮಿಗೆಶ್ರೇಷ್ಠವಾದ, ವಿಶುದ್ಧ-
ತ ನಿರ್ಮಳವಾದ, ಸತ್ಕ್ರಿಯಾಘನಪದಗಮ್ಯ-ಒಳ್ಳಿತಾದ ಕ್ರಿಯಾಮಾರ್ಗದಿ
ದಲ್ತಕ್ಕ, ಸಂಜ್ಞೆವಿಡಿದು-ವೇಧಾಮಂತ್ರಕ್ರಿಯೆಯೆಂದು ಪೆಸರು ವಿಡಿದು, ಒಪ್ಪ
ನಿರ್ಮಳದೀಕ್ಷೆಯಿಂ-ಸ್ವಚ್ಛವಾದ ದೀಕ್ಷಾತ್ರಯದಿಂದೆ, ತನುತ್ರಯದೊಳ್-ಸ
ಸೂಕ್ಷ್ಮಕಾರಣವೆಂಬ ತನುಮೂರರಲ್ಲಿ, ತ್ರಿವಿಧಾಖ್ಯಲಿಂಗಮಂ-ಇಷ್ಟಪ್ರಾಣ
ವೆಂಬ ಮೂರುಪೆಸರನುಳ್ಳ ಲಿಂಗವನ್ನು, ಸುನಿಹಿತಮಾಗಿ-ಚೆನ್ನಾಗಿ ಸಂಬಂಧ
ದಾಗಿ, ತಂದಿರಿಸಲ್-ತಂದು ಸ್ಥಿರೀಕರಿಸಲಾಗಿ, ನಿಜೈಕ್ಯಪದಂ-ಸಹಜವಾದ ಐ
ಕ್ಯಪದವು, ಆಯ್ತು-ಆದುದು.

ಟಿಪ್ಪಣಿ—ದಯಾನಿಧಿಯಾದ ಶ್ರೀಗುರುವು ಜ್ಞಾನಗಮ್ಯವಾದ ಭಾವಲಿಂಗವನ್ನು ವೇಧ
ಕ್ಷೆಯಿಂದ ಕಾರಣಶರೀರದಲ್ಲೂ, ಮಂತ್ರಗಮ್ಯವಾದ ಪ್ರಾಣಲಿಂಗವನ್ನು ಮನುದೀಕ್ಷೆಯಿಂದ

ಕ್ಷ್ಮಶರೀರದಲ್ಲೂ, ಕ್ರಿಯಾಗಮ್ಯವಾದ ಇಷ್ಟಲಿಂಗವನ್ನು ಕ್ರಿಯಾದೀಕ್ಷೆಯಿಂದ ಸ್ಥೂಲಶರೀರ ದಲ್ಲೂ ಸಂಯೋಗಗೊಳಿಸಲಾಗಿ ಅದರಿಂದಲೇ ಶರಣನಿಗೆ ಲಿಂಗಾಂಗಸಾಮರಸ್ಯ ಸ್ಥಿತಿಯು ಸಮನಿ ಸಿತು. ||೮೮||

ಭಾವದ ಹಸ್ತದಿಂ ಮನದ ಹಸ್ತತಳಕ್ಕೆ ಮನಃಕರಾಬ್ಜದಿಂ |
ಪಾವನಮಪ್ಪ ನೇತ್ರದ ಕರಕ್ಕೆ ತದೀಯಕರಾಂಬುಜಾತದಿಂ ||
ಕೋವಿದ ಚಕ್ರವರ್ತಿ ಗುರು ಕಾಯದ ಹಸ್ತಸರೋರುಹಕ್ಕೆ ಪೂ |
ಜಾವಿಧಿಯೋಗ್ಯಲಿಂಗಮುಮ ನಿತ್ತಬಳಿ ಕ್ಕರಿದೇಂ ಶಿವಾಧವಾ ||೮೯||

ಟೀಕೆ—ಕೋವಿದಚಕ್ರವರ್ತಿಗುರು-ಪ್ರೌಢರುಗಳ್ಗಧೀಶ್ವರನಾದ ಶ್ರೀಗುರುವು, ಭಾವದಹಸ್ತದಿಂ-ಭಾವವೆಂಬ ಹಸ್ತದಿಂ, ಮನದ ಹಸ್ತತಳಕ್ಕೆ-ಮನವೆಂಬ ಕರತಳಕ್ಕೆ ತಂದು, ಮನಃಕರಾಬ್ಜದಿಂ-ಮನವೆಂಬ ಹಸ್ತಪದ್ಮದಿಂ, ಪಾವನಮಪ್ಪ-ಪವಿತ್ರವಾದ, ನೇತ್ರದ ಕರಕ್ಕೆ-ನಯನವೆಂಬ ಹಸ್ತಕ್ಕೆ, ತಂದು, ತದೀಯಕರಾಂಬುಜಾತದಿಂ-ಆ ನಯನಸಂಬಂಧವಾದ ಹಸ್ತಪದ್ಮದಿಂದೆ, ಕಾಯದಹಸ್ತಸರೋರುಹಕ್ಕೆ-ಶರೀರಸಂಬಂಧವಾದ ಕರಕಮಲಕ್ಕೆ, ಪೂಜಾವಿಧಿಯೋಗ್ಯಲಿಂಗಮುಮಂ-ಪೂಜಾಕ್ರಿಯೆಗೆ ಯೋಗ್ಯವಾದ ಚಿತ್ಕಲಾಲಿಂಗವನ್ನೂ, ಇತ್ತಬಳಿಕ್ಕ-ಕೊಟ್ಟನಂತರದಲ್ಲಿ, ಅರಿದೇಂ-ಇನ್ನೇನು ಅಸಾಧ್ಯವುಂಟು ? "ಯಥಾಕಲಾತಥಾಭಾವೊ ಯಥಾಭಾವಸ್ತಥಾಮನಃ || ಯಥಾಮನಸ್ತಥಾ ದೃಷ್ಟಿರ್ಯಥಾದೃಷ್ಟಿಸ್ತಥಾಸ್ಥಲಂ" ಎಂದುಂಟು. ||೮೯||

ಟಿಪ್ಪಣಿ—ಬ್ರಹ್ಮವಿದ್ಯಾವಿಚಕ್ಷಣಶ್ರೇಷ್ಠನಾದ ಶ್ರೀಗುರುವು ಶಿವಚೈತನ್ಯವನ್ನು ತನ್ನ ಭಾವದಿಂದ ಮನಸ್ಸಿಗೂ, ಮನಸ್ಸಿನಿಂದ ದೃಷ್ಟಿಗೂ, ಅಲ್ಲಿಂದ ಹಸ್ತಕಮಲಕ್ಕೂ, ಅಲ್ಲಿಂದ ಇಷ್ಟಲಿಂಗಕ್ಕೂ ತಂದು ನಿಲ್ಲಿಸಿ, ಪೂಜಾಯೋಗ್ಯವನ್ನಾಗಿ ಮಾಡಿ, ಶಿಷ್ಯನ ಹಸ್ತಕಮಲಕ್ಕೆ ಆ ಲಿಂಗವನ್ನು ಕೊಟ್ಟ ಬಳಿಕ, ಆ ಪರಬ್ರಹ್ಮವನ್ನು ಹಸ್ತಗತವನ್ನಾಗಿ ಮಾಡಿಕೊಂಡವನಿಗೆ ಲೋಕದಲ್ಲಿ ಅಸಾಧ್ಯವಾದುದಾವುದಿರುವುದು ? ||೮೯||

ಪ್ರಣವವೆ ಮೂರ್ತಿ ಪಂಚವಿಧವರ್ಣಮೆ ಪಂಚವಿಧೇಂದ್ರಿಯಂ ಮಹಾ |
ಘೃಣಿ ವಿಭು ದೇಶಿಕಂ ಪರಮಮಂತ್ರ ಕಳಾದ್ಯುಪದೇಶವಿತ್ತ ತತ್ ||
ಕ್ಷಣದೊಳೆ ಮಂತ್ರಪಿಂಡಮೆನಿಸಿ ತ್ತತಿಶೋಭನಮಪ್ಪ ರೂಪಲ |
ಕ್ಷಣವಿಡಿದಿರ್ದೊಡಿನ್ನುಪಮಿಸಲ್ಬಹುದೇ ಘನಮೇಂ ಶಿವಾಧವಾ ||೯೦||

ಟೀಕೆ—ಮಹಾಘೃಣಿ-ಅಧಿಕವಾದ ಕೃಪೆಯುಳ್ಳವನು, (ಮಹಾ ಪ್ರಕಾಶವುಳ್ಳಾತನಾದೊಡಂ ಆಗಲಿ) ವಿಭು-ಸಕಲ ಜಗತ್ಪರಿಪೂರ್ಣನಾದ, ದೇಶಿಕಂ-ಶ್ರೀಗುರುವು, ಪರಮಮಂತ್ರಕಳಾದ್ಯುಪದೇಶವಿತ್ತ-ಪರಮ-ಉತ್ಕೃಷ್ಟವಾದ, ಮಂತ್ರ

ಕಳಾದಿ-ಮಂತ್ರಚೈತನ್ಯಕ್ಕೆ ಮೊದಲಾದ, ಉಪದೇಶವಿತ್ತ-ನಿರೂಪವಕೊಟ್ಟ, ಕ್ಷಣದೊಳ್-ಆ ಕ್ಷಣದಲ್ಲಿಯೇ, ಪ್ರಣವವೆ-ಓಂಕಾರವೇ, ಮೂರ್ತಿ-ಶರೀರವು, ಪಂಚವಿಧವರ್ಣಮೆ-ನಕಾರಾದಿ ಯಕಾರಾಂತ್ಯವಾದ ಐದುತೆರದ ಅಕ್ಷರಂ, ಪಂಚವಿಧೇಂದ್ರಿಯಂ-ಐದುವಿಧವಾದ ಇಂದ್ರಿಯಂಗಳಾಗಿ, ಮಂತ್ರಪಿಂಡ ಸಿತ್ತು-ಮಂತ್ರಮಯವಾದ ಶರೀರವೆನಿಸಿತು. ಅತಿಶೋಭನಮಪ್ಪ-ಅತ್ಯಂತ ಮ ವಾದ, ರೂಪಲಕ್ಷಣವಿಡಿದಿರ್ದೊಡೆ-ಮಂತ್ರಲಕ್ಷಣವಂ ತಾಳ್ದಿರ್ದೊಡೆ, ಮೇಂ-ಆ ಪೆರ್ಚುಗೆಯೇನು ? ಇನ್ನುಪಮಿಸಲ್ಬಹುದೆ-ಇನ್ನೇನೆಂದು ಹೇಳಬಹು

ಟಿಪ್ಪಣಿ—ದಯಾನಿಧಿಯೂ ಜಗದಾಚಾರ್ಯನೂ ಆದ ಶ್ರೀಗುರುವು ಪರಮಮಂತ್ರೋ ಶವನ್ನು ಮಾಡಿದ ಕೂಡಲೇ ಶಿಷ್ಯನ ದೇಹವು ಮಂತ್ರಮಯವಾಯಿತು. ಎಂದರೆ—ಆತನ ಜಿಹ್ವಾ ದೃಕ್ ತ್ವಕ್ ಶ್ರೋತ್ರವೆಂಬೈದಿಂದ್ರಿಯಗಳೂ ಕ್ರಮವಾಗಿ ನಕಾರಾದಿ ಯಕಾರಾಂತ ಪಂಚಪ್ರಣವಗಳಾಗಿ, ಓಂಕಾರವೇ ಶರೀರವಾಗಿ ಇರುವುದು. ಇಂಥ ಮಂತ್ರಮಯದೇಹ ಹೊಂದಿರುವ ಶರಣನ ಮಹತ್ತ್ವವನ್ನು ಹಾಗಿರುವುದು ಹೀಗಿರುವುದು ಎಂದು ಮತ್ತೇ ಹೋಲಿಸಿ ಹೇಳಬಹುದೆ ?

ಲಿಂಗಮು ನಂಗದೊ ಳ್ಪರಮಲಿಂಗಮು ನಿಂದ್ರಿಯಪಜ್ತ್ತಿಯೊ ಳ್ಮಹಾ |
ಲಿಂಗಮು ನಂತರಂಗಕರಣಾವಳಿಯೊ ಳ್ಘನಸತ್ಯಚಿತ್ರಭಾ ||
ಲಿಂಗಮು ನಂಬರಪ್ರಭೃತಿಭೂತಸಮುಚ್ಚಯದೊ ಳ್ಕನತ್ಕಳಾ |
ಲಿಂಗಮು ನಾಶುಗಪ್ರಕರದೊ ಳ್ತಳೆದಂಗರಿದೇಂ ಶಿವಾಧವಾ ||

ಟೀಕೆ—ಅಂಗದೊಳ್-ಜೀವಾತ್ಮನೆಂಬ ಅಂಗಸ್ಥಲದಲ್ಲಿ, ಲಿಂಗಮಂ-ಮ ಲಿಂಗವನ್ನೂ, ಇಂದ್ರಿಯಪಜ್ತ್ತಿಯೊಳ್-ಇಂದ್ರಿಯಂಗಳ ಸಮೂಹದಲ್ಲಿ, ಲಿಂಗಮಂ-ಉತ್ಕೃಷ್ಟವಾದ ಶಿವಲಿಂಗವನ್ನು, ಅಂತರಂಗಕರಣಾವಳಿಯೊಳ್-ಕರಣಸಮೂಹದಲ್ಲಿ, ಮಹಾಲಿಂಗಮಂ-ಅಧಿಕವಾದ ಪ್ರಸಾದಲಿಂಗವನ್ನು, ಪ್ರಭೃತಿಭೂತಸಮುಚ್ಚಯದೊಳ್-ಆಕಾಶ ಮೊದಲಾದ ಭೂತಸಮೂಹದಲ್ಲಿ, ಸತ್ಯಚಿತ್ರಭಾಲಿಂಗಮಂ, ಘನ-ದೊಡ್ಡಿತ್ತಾದ, ಸತ್ಯ-ಸದ್ರೂಪವಾದ, ಚಿತ್ರ ಜ್ಞಾನಪ್ರಕಾಶರೂಪವಾದ, ಲಿಂಗಮಂ-ಆಚಾರಲಿಂಗವನ್ನು, ಆಶುಗಪ್ರಕರದೊ ಪ್ರಾಣಾದಿವಾಯುಗಳೈದರಲ್ಲಿ, ಕನತ್ಕಳಾಲಿಂಗಮಂ-ಕನತ್ಕಳಾ-ಕಾಂತಿವೆತ್ತ ಳೆಯನುಳ್ಳ, ಲಿಂಗಮಂ-ಜಂಗಮಲಿಂಗವನ್ನು, ತಳೆದಂಗೆ-ಧರಿಸಿದಾತಂಗೆ, ಆಶ್ಚರ್ಯಮೇನುಂಟು ? ಏನೂ ಆಶ್ಚರ್ಯವಿಲ್ಲವೆಂಬುದರ್ಥಂ ||

ಟಿಪ್ಪಣಿ—ಮಹಾಲಿಂಗವನ್ನು ತನ್ನ ಜೀವಾತ್ಮನಲ್ಲಿಯೂ, ಶಿವಲಿಂಗವನ್ನು ತನ್ನ ಯಗಳಲ್ಲಿಯೂ, ಪ್ರಸಾದಲಿಂಗವನ್ನು ಅಂತರಿಂದ್ರಿಯಗಳಲ್ಲಿಯೂ ... ಲಿಂಗವನ್ನು

ಪಂಚಭೂತಗಳಲ್ಲಿಯೂ, ಜಂಗಮಲಿಂಗವನ್ನು ಪ್ರಾಣಾದಿವಾಯುಗಳಲ್ಲಿಯೂ ಧರಿಸಿ ಸರ್ವಾಂಗಲಿಂಗಿಯಾದ ಶರಣನಿಗೆ ಲೋಕದಲ್ಲಿ ಅಸಾಧ್ಯವಾದ ವಸ್ತುವಾವುದಿರುವುದು ? ||೯೧||

ಅವತಾರಿಕೆ—ಅನಂತಜನ್ಮಂಗಳಲ್ಲಿ ಮುಕ್ತಿಯಂ ಪಡೆದಪೆವೆಂದು ವ್ಯರ್ಥದಾಯಾಸಂಬಡುವ ವೇದಾಂತ ಸಿದ್ಧಾಂತ ಯೋಗಮಾರ್ಗಂಗಳಂ ನಿರಾಕರಿಸಿ, ನಿರಾಯಾಸದಿಂ ಜೀವನ್ಮುಕ್ತಿಯಪ್ಪ ಭಕ್ತಿಮಾರ್ಗವೇ ಅಧಿಕವೆಂದು ಗ್ರಂಥಸಮಾಪ್ತಿಯಪ್ಪನ್ನೆಗಂ ಪೇಳುತ್ತಿರ್ದಪಂ.—

ಅಡಿಗಡಿ ಗಾಯಸಂಬಡುವ ಜನ್ಮಸಹಸ್ರದೊಳಪ್ಪ ಮುಕ್ತಿಯಂ |
ಪಿಡಿಯದೆ ಜನ್ಮವೊಂದರೊಳೆ ಸಿದ್ಧಿಪ ನಿಶ್ಚಲಮುಕ್ತಿಸೌಖ್ಯಮಂ ||
ಪಿಡಿದು ಬಹಿಃಪ್ರಪಂಚಕುಟಿಲಾಗಮಧರ್ಮದ ಸಂಜ್ಞೆಮಾರ್ಗದೊಳ್ |
ನಡೆಯದೆ ಭಕ್ತಿಯೋಗಪದದೊಳ್ನಡೆವರ್ ಶರಣರ್ ಶಿವಾಧವಾ ||೯೨||

ಟೀಕೆ—ಶರಣರ್-ಶಿವಶರಣರು, ಅಡಿಗಡಿಗೆ-ಹಜ್ಜೆಹಜ್ಜೆಗೆ, ಆಯಸಂಬಡುವ-ಕೋಟಲೆಗೊಂಬ, ಜನ್ಮಸಹಸ್ರದೊಳ್ಅಪ್ಪ-ಅನಂತಜನ್ಮದಲ್ಲಿ ಆಗುವ, ಮುಕ್ತಿಯಂ-ಮೋಕ್ಷವನ್ನು, ಪಿಡಿಯದೆ-ಮುಟ್ಟದೆ, ಜನ್ಮವೊಂದರೊಳೆ-ಜನ್ಮವೊಂದರಲ್ಲಿಯೆ, ಸಿದ್ಧಿಪ-ನಿರಾಯಾಸದಿಂ ಕೈಸೇರುವ, ನಿಶ್ಚಲಮುಕ್ತಿಸೌಖ್ಯಮಂ-ನಿಶ್ಚಲ-ಚಲನೆಯಿಲ್ಲದ, ಮುಕ್ತಿಸೌಖ್ಯಮಂ-ಸಮರಸಾನಂದವನ್ನು, ಪಿಡಿದು-ಪರಿಗ್ರಹಿಸಿ, ಬಹಿಃಪ್ರಪಂಚಕುಟಿಲಾಗಮಧರ್ಮದ ಸಂಜ್ಞೆಮಾರ್ಗದೊಳ್-ಬಹಿಃ-ಹೊರಗಾದ, ಪ್ರಪಂಚ-ಮರವೆಯನುಳ್ಳ, ಕುಟಿಲ-ವಕ್ರವಾದ, ಆಗಮಸಂಜ್ಞೆ-ಧರ್ಮದಸಂಜ್ಞೆಯ, ಮಾರ್ಗದೊಳ್-ಆಗಮದ ಕುರುಹಿನಮಾರ್ಗದಲ್ಲಿ, ನಡೆಯದೆ-ಆಚರಿಸದೆ, ಭಕ್ತಿಯೋಗಪದದೊಳ್-ಶಿವಭಕ್ತಿಯೋಗಮಾರ್ಗದಲ್ಲಿ, ನಡೆವರ್-ಆಚರಿಸುವರು.

ಟಿಪ್ಪಣಿ—ಶಿವಶರಣರು ಅನೇಕ ಜನ್ಮಗಳಲ್ಲಿ ಅನೇಕ ಕರ್ಮಗಳನ್ನಾಚರಿಸುವ ಕಷ್ಟದಿಂದ ಲಭಿಸುವ ಮುಕ್ತಿಯನ್ನು ಅಪೇಕ್ಷಿಸದೆ, "ಏಕೇನಜನ್ಮನಾಮುಕ್ತಿರ್ವೀರಾಣಾಂತುಮಹೇಶ್ವರಿ | ಇತರೇಷಾಂತುಶೈವಾನಾಂ ಮುಕ್ತಿರ್ಜನ್ಮತ್ರಯೇಣಹಿ || ಅಲ್ಪಕ್ರಿಯಂಬಹುಫಲಂ ವೀರಶೈವಂಮಹೇಶ್ವರಿ | ಇತರೇಷಾಂತುಶೈವಾನಾಂ ಫಲಮಲ್ಪಂಬಹುಕ್ರಿಯಾ" ಎಂಬ ಶಿವಾಗಮೋಕ್ತಿಯನ್ನನುಸರಿಸಿ, ಒಂದೇ ಜನ್ಮದಲ್ಲಿ ದೊರೆಯುವ ಸ್ಥಿರವಾದ ಮುಕ್ತಿಯ ಸೌಖ್ಯವನ್ನುದ್ದೇಶಿಸಿ, ಬಾಹ್ಯಾಡಂಬರದ-ಮಾಯಾಜಟಿಲವಾದ-ವಕ್ರವಾದ-ಶಾಸ್ತ್ರೋಕ್ತಾಚರಣೆಯಲ್ಲಿ ಸೇರದೆ, ಶಿವಭಕ್ತಿಯೋಗದಲ್ಲೇ ತತ್ಪರರಾಗಿರುವರು ||೯೨||

ಪರಮಗುರೂಪದೇಶದ ಲಸನ್ಮಹಿಮಾಸ್ಪದವೈಭವಂ ಷಡ |
ಕ್ಷರ ಶಿವಮಂತ್ರ ದೂರ್ಜಿತಮಹೋನ್ನತಲಿಂಗದ ಚಿದ್ಘನಪ್ರಭಾ ||
ವರುಚಿರತೇಜ ಮಾತ್ಮಗುಣಲಕ್ಷಣವಾಗಿ ಸದಾ ವಿರಾಜಿಪ |
ಶರಣರೆನಲ್ಪಳಿಕ್ಕಿತರಮಾರ್ಗದ ದೊಡ್ಡಿತದೇಂ ಶಿವಾಧವಾ ||೯೩||

ಟೀಕೆ—ಶರಣರ್-ವೀರಮಾಹೇಶ್ವರರುಗಳು, ಪರಮಗುರೂಪದೇಶದು-ತ್ಕೃಷ್ಟವಾದ ಗುರೂಪದೇಶದ, ಲಸನ್ಮಹಿಮಾಸ್ಪದವೈಭವಂ-ಲಸತ್-ಒಪ್ಪುತ್ತಿ ಮಹಿಮ-ಮಹತ್ವಕ್ಕೆ, ಆಸ್ಪದ-ಸ್ಥಾನವಾದ, ವೈಭವಂ-ಐಶ್ವರ್ಯವು, ಷಡಕ್ಷ ಶಿವಮಂತ್ರದ-ಪ್ರಣವಾದಿಯಾದ ಪಂಚಾಕ್ಷರೀಮಂತ್ರದ, ಊರ್ಜಿತಮಹೋನ್ನ ಲಿಂಗದ-ಊರ್ಜಿತ-ಹೆಚ್ಚುಗೆಯಾಗಿ, ಮಹೋನ್ನತ-ಉತ್ತರೋತ್ತರವಾದ, ಲಿಂಗ ಮಹಾಲಿಂಗದ, ಚಿದ್ಘನಪ್ರಭಾವರುಚಿರತೇಜಂ-ಚಿದ್ಘನ-ಜ್ಞಾನದಿಂದೆದೊಡ್ಡಿತ್ತಾ ಪ್ರಭಾವ-ಸಾಮರ್ಥ್ಯದಿಂದೆ, ರುಚಿರ-ಮನೋಹರವಾದ, ತೇಜಂ-ಪ್ರಕಾಶವು, ಗುಣಲಕ್ಷಣಮಾಗಿ-ತಮ್ಮ ಸಹಜಸ್ವರೂಪವಾದ ಮಾರ್ಗವಾಗಿ, ಸದಾ-ಅವ ಳೂ, ವಿರಾಜಿಪರ್-ಒಪ್ಪುತ್ತಿರ್ಪರು, ಎನಲ್-ಹೀಗೆಂದು ಹೇಳುತ್ತಿರಲಾಗಿ, ಬಳಿ ಮರಳಿ, ಇತರಮಾರ್ಗದ-ಅನ್ಯಮಾರ್ಗದ, ದೊಡ್ಡಿತು-ಪೆರ್ಚುಗೆಯು, ಅದೇ ಅದೇನು ಪ್ರಯೋಜನವು ? ಪ್ರಯೋಜನವಲ್ಲವೆಂಬುದರ್ಥಂ ||೯

ಟಿಪ್ಪಣಿ—ಶರಣರು ಗುರೂಪದೇಶವನ್ನು ಪಡೆದವರಾದುದರಿಂದ ಅತ್ಯಂತ ಮಹತ್ವ ವರಾಗಿ, ಶಿವಷಡಕ್ಷರಮಂತ್ರದೇಹಿತ್ವದಿಂದಲೂ, ಸರ್ವಾಂಗಲಿಂಗಿತ್ವದಿಂದಲೂ, ಶಿವಜ್ಞಾನಸಾಂಪ್ರ ದಿಂದಲೂ, ಅಸಾಧಾರಣವಾದ ಸಾಮರ್ಥ್ಯವನ್ನೂ ದಿವ್ಯತೇಜಸ್ಸನ್ನೂ ಪಡೆದವರಾಗಿ ಯಾವಾ ಒಪ್ಪುತ್ತಿರುವರು. ಅಂತಹ ಮಾರ್ಗವನ್ನು ಬಿಟ್ಟು ಲೋಕದಲ್ಲಿ ಇನ್ನಾವ ಮಾರ್ಗದಲ್ಲಿ ಅಧಿಕ್ಯ ವುದು ? ||೯

ಅಂಗದ ಮೇಲೆ ಚಿದ್ಘನಪರಾಹ್ವಯಲಿಂಗಕಳಾಪ್ರತಿಷ್ಠೆಯಂ |
ಸಾಂಗಿಕಮಾಗಿ ಸದ್ಗುರುಕೃಪಾನಿಧಿ ಮಾಡಿದ ತತ್‌ಕ್ಷಣಾರ್ಧಮಾ ||
ಲಿಂಗಮೆ ಷಟ್ಪ್ರಕಾರಮುಖಮಾಗಿ ಷಡಿಂದ್ರಿಯಭೂತವರ್ಗದೊ |
ಳ್ಮಂಗಳಮಾಗಿ ವರ್ತಿಸ ಲನರ್ಪಿತಮುಂಟೆ ಬಿಡಾ ಶಿವಾಧವಾ ||೧೦

ಟೀಕೆ—ಕೃಪಾನಿಧಿ-ದಯಾನಿಧಿಯಾದ, ಸದ್ಗುರು-ಶ್ರೀಗುರುವು, ಅಂಗ ಮೇಲೆ-ಶರೀರದಮೇಲೆ, ಚಿದ್ಘನಪರಾಹ್ವಯಲಿಂಗಕಳಾಪ್ರತಿಷ್ಠೆಯಂ-ಚಿದ್ಘನ-ಜ್ಞಾ ನದಿಂದೊಡ್ಡಿತ್ತಾದ, ಪರಾಹ್ವಯ-ಪರಮಾತ್ಮನೆಂಬ ಪೆಸರನುಳ್ಳ, ಲಿಂಗಕಳಾಪ್ರ ಷ್ಠೆಯಂ-ಲಿಂಗಚೈತನ್ಯಪ್ರತಿಷ್ಠೆಯನ್ನು, ಸಾಂಗಿಕಮಾಗಿ-ಯೋಗ್ಯಮಾಗಿ, ಮಾ ದ-ಉಂಟುಮಾಡಿದ, ತತ್‌ಕ್ಷಣಾರ್ಧಂ-ಅಷ್ಟರೊಳಗೆ, ಆ ಲಿಂಗಮೆ-ಆಲಿಂಗತಾನ ಷಟ್ಪ್ರಕಾರಮುಖಮಾಗಿ-ಆಚಾರಾದಿ ಮಹಾಲಿಂಗಾಂತವಾದ ಆರುತೆರದ ಮು ವಾಗಿ, ಷಡಿಂದ್ರಿಯಭೂತವರ್ಗದೊಳ್-ಇಂದ್ರಿಯವಾರು ಭೂತವಾರರ ಸಮು ದಲ್ಲಿ, ಮಂಗಳಮಾಗಿ-ನಿರ್ಮಳಮಾಗಿ, ವರ್ತಿಸಲ್-ಆಚರಿಸಲಾಗಿ, ಅನರ್ಪಿತಮು ಟೆ-ಅರ್ಪಿಸಬಾರದುದುಂಟೆ ? ಎಲ್ಲವೂ ಅರ್ಪಿತವೆಂಬುದರ್ಥಂ ||೧೦

ಟಿಪ್ಪಣಿ—ದಯಾಕರನಾದ ಶ್ರೀಗುರುವು ಶರೀರದಮೇಲೆ ಜ್ಞಾನಮಯವಾದ ಪರಬ್ರಹ್ಮನೆಂದು ಹೆಸರುಳ್ಳ ಶಿವಲಿಂಗ ಚೈತನ್ಯವನ್ನು ಸಾಂಗವಾಗಿ ಪ್ರತಿಷ್ಠೆ ಮಾಡಿದ ಕೂಡಲೇ ಆ ಲಿಂಗವೇ ಆಚಾರಲಿಂಗ-ಗುರುಲಿಂಗ-ಶಿವಲಿಂಗ-ಜಂಗಮಲಿಂಗ-ಪ್ರಸಾದಲಿಂಗ-ಮಹಾಲಿಂಗವೆಂದು ಆರುತೆರನಾಗಿ ಕ್ರಮವಾಗಿ ನಾಸಿಕಾ-ಜಿಹ್ವಾ-ದೃಕ್-ತ್ವಕ್-ಶ್ರೋತ್ರ-ಹೃದಯವೆಂಬ ಷಡಿಂದ್ರಿಯ ಮುಖಗಳಾಗಿ, ಅಲ್ಲಲ್ಲಿಯೂ, ಮತ್ತೂ ಪೃಥಿವ್ಯಾದಿ ಆತ್ಮಾಂತವಾದ ಷಡ್ಭೂತಗಳಲ್ಲೂ ನೆಲಸಿ ಇರಲಾಗಿ, ಅಂತಪ್ಪ ಶರಣನಿಂದ ಸ್ವೀಕೃತವಾದ ಯಾವ ವಸ್ತುವಾದರೂ ಲಿಂಗಾನರ್ಪಿತವಾಗಿರುವುದುಂಟೆ? ||೯೪||

ಬಹುವಿಧಕೃತ್ಯಸಾಧ್ಯಮಹ ಮುಕ್ತಿಪದಂ ಭವಕೋಟಿಯಲ್ಲಿ ನಿ |
ರ್ವಹಿಸುವುದಕ್ಕೆ ಕೋಟಲೆಗೊಳುತ್ತಿರ ಲೊಯ್ಯನೆ ಜನ್ಮವೊಂದರೊ ||
ಳ್ವಿಹಿತಸುಖೈಕಸಾಧ್ಯಮಹ ಮುಕ್ತಿಪದಂ ದೊರಕೊಂಡೊಡೊಲ್ಲೆ ನೆಂ |
ದಿಹು ದಿದು ಪಾಪಶೇಷಫಲಮೈಸೆ ವಿಚಾರಮದೇಂ ಶಿವಾಧವಾ ||೯೫||

ಟೀಕೆ—ಬಹುವಿಧಕೃತ್ಯಸಾಧ್ಯಮಹ-ಬಹುವಿಧ-ಅನೇಕಪ್ರಕಾರವಾದ, ಕೃತ್ಯ-ಆಯಾಸಕರ್ಮದಿಂದ, ಸಾಧ್ಯಮಹ-ಸಾಧಿಸಲ್ತಕ್ಕುದಾದ, ಮುಕ್ತಿಪದಂ-ಮೋಕ್ಷಮಾರ್ಗವು, ಭವಕೋಟಿಯಲ್ಲಿ-ಅನಂತಜನ್ಮದಲ್ಲಿ, ನಿರ್ವಹಿಸುವುದಕ್ಕೆ-ಉಂಟುಮಾಡಿಕೊಂಬುವುದಕ್ಕೆ, ಕೋಟಲೆಗೊಳುತ್ತಿರಲ್-ಆಯಾಸಂಗೊಳ್ಳುತ್ತಿರಲಾಗಿ, ಒಯ್ಯನೆ-ಚೆನ್ನಾಗಿ, ಜನ್ಮವೊಂದರೊಳ್-ಜನ್ಮವೊಂದರಲ್ಲಿಯೇ, ವಿಹಿತಸುಖೈಕಸಾಧ್ಯಮಹ-ವಿಹಿತ-ಕೊಡಲ್ಪಟ್ಟ, ಸುಖೈಕಸಾಧ್ಯಮಹ-ಅನಾಯಾಸದಿಂ ಸಾಧಿಸಲ್ಪಡುವುದಾದ, ಮುಕ್ತಿಪದಂ-ಮೋಕ್ಷಪದವು, ದೊರಕೊಂಡೊಡೆ-ಫಲಿಸಿದೊಡೆ, ಒಲ್ಲೆನೆಂದಿಹುದಿದು-ಒಲ್ಲೆನೆಂದು ಬಿಟ್ಟಿರ್ಪುದಿದು, ಪಾಪಶೇಷಫಲಮೈಸೆ-ಪೂರ್ವಜನ್ಮದಲ್ಲಿ ಉಳಿದ ಪಾಪದ ಫಲವಷ್ಟೆ, ವಿಚಾರಮದೇಂ-ಅದೇತರ ವಿಚಾರವು? ||೯೫||

ಟಿಪ್ಪಣಿ—ಅನೇಕಕೋಟಿ ಜನ್ಮಗಳಲ್ಲಿ ಬಹುವಿಧ ಕರ್ಮಗಳನ್ನಾಚರಿಸಿ, ಕಷ್ಟದಿಂದ ಪಡೆಯಬೇಕಾಗಿರುವ ಮುಕ್ತಿಯನ್ನು, ಒಂದೇ ಜನ್ಮದಲ್ಲಿ ಅನಾಯಾಸದಿಂದ ಪಡೆದುಕೊಳ್ಳಬಹುದಾಗಿರುವಾಗ, ಈ ಸುಲಭವಾದ ಮಾರ್ಗವನ್ನು ಒಲ್ಲೆನೆಂದು ಬಿಟ್ಟುಬಿಡುವುದು ಪೂರ್ವಜನ್ಮದ ಪಾಪಫಲವಲ್ಲದೆ ಮತ್ತೇನು? ||೯೫||

ಬಡಿಣಮು ನೊಲ್ಲ ದಂತಿರಿಸಿ ಭಿಕ್ಷ್ಕೆ ಪೋಪವನಂತೆ ಕೂಡೆ ಕೂ |
ಡೊಡ ನಿರುತಿರ್ಪ ಮುಕ್ತಿಸುಖಭೋಗಮ ನೊಲ್ಲದೆ ದೂರದೂರಮ ||
ಪ್ಪೆಡೆದೆರಪಿಲ್ಲದಾಯಸಮೆನಿಪ್ಪ ಸುದುರ್ಘಟಮುಕ್ತಿಸೌಖ್ಯಮುಂ |
ಪಡೆದಪೆ ವೆಂದು ಕೋಟಲೆಗೊಳುತ್ತಿಹ ರಾಮರುಳರ್ ಶಿವಾಧವಾ ||೯೬||

ಟೀಕೆ—ಆ ಮರುಳರ್-ಆ ಹುಚ್ಚರು, ಬಡಿಣಮಂ-ಕಣ್ಣುಮುಂದೆ ಗಡಣಿಸಿರ್ದ ಭೋಜ್ಯಾದಿ ಪದಾರ್ಥವನ್ನು, ಒಲ್ಲದೆ-ಬಿಟ್ಟು, ಅಂತಿರಿಸಿ-ಹಾಂಗೆಮಡಗಿ,

ಭಿಕ್ಷ ಕೆ-ಭಿಕ್ಷಾನ್ನಕ್ಕೆ, ಪೋಪವನಂತೆ-ಹೋಗುವವನ ಹಾಂಗೆ, ಕೂಡೆಕೂಡೊಡ
ತನ್ನ ಸಂಗಡವೇ, ಇರುತಿರ್ಪ-ಇರುವಂಥ, ಮುಕ್ತಿಸುಖಭೋಗಮುಂ-ಮೋಕ್ಷಾ
ದಪರಿಣಾಮವನ್ನು, ಒಲ್ಲದೆ-ಬಿಟ್ಟು, ದೂರದೂರಮಪ್ಪ-ಸಮಿಾಪವಲ್ಲದಿರ್ಪ,
ರೆಪ್ಪಿಲ್ಲದ-ಖಂಡಿತವಲ್ಲದೆ, ಆಯಸಮೆನಿಪ್ಪ-ಕೋಟಲೆಯೆನಿಸುವ, ಸುದುರ್ಘಟಮು
ಸೌಖ್ಯಮಂ-ಪಡೆಯಲಶಕ್ಯವಾದ ಮುಕ್ತಿಸುಖವನ್ನು, ಪಡೆದಪೆವೆಂದು-ಗಳಿ
ವೆಂದು, ಕೋಟಲೆಗೊಳುತ್ತಿಹರ್-ಆಯಾಸಬಡುತ್ತಿರ್ಪರು. ||೯೬

ಟಿಪ್ಪಣಿ—ವೀರಶೈವಮಾರ್ಗವನ್ನು ಹಿಡಿಯದ ಹುಚ್ಚರು, ಕಣ್ಣಮುಂದೆ ಉಣಬಡಿ
ಭಕ್ಷ್ಯಭೋಜ್ಯಾದಿ ಪದಾರ್ಥಗಳನ್ನು ತಿರಸ್ಕರಿಸಿಬಿಟ್ಟು, ಭಿಕ್ಷಾನ್ನವನ್ನೆತ್ತುವುದಕ್ಕೆ ಹೋಗುವ
ಹಾಗೆ, ತಮ್ಮೊಡನೇ ಹತ್ತಿಬರುತ್ತಿರುವ ಮುಕ್ತಿಸೌಖ್ಯವನ್ನು ಪರಿತ್ಯಜಿಸಿ, ದೂರಸ್ಥಿತವಾದ
ಸಾಧ್ಯವಾದ ಮುಕ್ತಿಯನ್ನು ಪಡೆಯುತ್ತೇವೆಂದು ಪಾಟುಪಡುತ್ತಿರುವರು. ||೯

ಶೀತಗೃಹೀತವಾನರಗಣಂ ಜ್ವಲಿತಾನಲಕಾಂಕ್ಷೆಯಿಂ ಪ್ರಯ |
ತ್ನಾತುರಮಾಗಿ ಮಿಂಚುಬುಳುವಂ ಪರಿಕಲ್ಪಿಸುವಂತೆ ವೀರಶೈ ||
ವೇತರಧರ್ಮಮಾರ್ಗವಿಡಿ ದೂರ್ಜಿತಮಪ್ಪ ವಿಶಿಷ್ಟಮುಕ್ತಿಸೌ |
ಖ್ಯಾತಿಶಯಾಭಿರಾಮಪದಮಂ ಬಿಡದೈದುವವ ರ್ಶಿವಾಧವಾ ||೯೭

ಟೀಕೆ—ವೀರಶೈವೇತರಧರ್ಮಮಾರ್ಗವಿಡಿದು-ವೀರಶೈವ-ವೀರಶೈವಕ್ಕೆ
ಇತರ-ಬೇರಾದ, ಧರ್ಮಮಾರ್ಗವಿಡಿದು-ಆಚರಣೆಯಪಥವಿಡಿದು, ಊರ್ಜಿತಮಪ್ಪ
ಪೆರ್ಚುಗೆಯಾದ, ವಿಶಿಷ್ಟಮುಕ್ತಿಸೌಖ್ಯಾತಿಶಯಾಭಿರಾಮಪದಮುಂ-ವಿಶಿಷ್ಟ-ಅಧಿ
ವಾದ, ಮುಕ್ತಿಸೌಖ್ಯ-ಮೋಕ್ಷಾನಂದವೆಂಬ, ಅತಿಶಯ-ಅಧಿಕವಾದ, ಅಭಿರಾಮ
ಪದಮಂ-ಮನೋಹರವಾದ ಪದವನ್ನು, ಬಿಡದೆ-ವರ್ಜಿಸದೆ, ಐದುವವರ್-ಹೊಂ
ವಂಥವರುಗಳು, ಶೀತಗೃಹೀತವಾನರಗಣಂ-ಶೀತ-ಚಳಿಯಿಂದ, ಗೃಹೀತ-ಹಿಡಿ
ಲ್ಪಟ್ಟ, ವಾನರಗಣಂ-ಕಪಿಸಮೂಹವು, ಜ್ವಲಿತಾನಲಕಾಂಕ್ಷೆಯಿಂ-ಉರಿಯಲ್ಲ
ಅಗ್ನಿಯುಬಯಸುವುದರಿಂ, ಪ್ರಯತ್ನಾತುರಮಾಗಿ-ಉದ್ಯೋಗದಿಂದ ಕಂಗೆ
ದಾಗಿ, ಮಿಂಚುಬುಳುವಂ-ಖದ್ಯೋತಕೀಟಕವನ್ನು, ಪರಿಕಲ್ಪಿಸುವಂತೆ-ಅಗ್ನಿಯ
ದುಂಟುಮಾಡಿಕೊಂಬುವಂತೆ (ವೀರಶೈವಮಾರ್ಗದಿಂದನ್ಯವಾದ ಮಾರ್ಗದಿಂ ಮುಕ್ತಿ
ಸಾಧ್ಯವಲ್ಲವೆಂಬುದಭಿಪ್ರಾಯಂ). ||೯೭

ಟಿಪ್ಪಣಿ—ವೀರಶೈವಮಾರ್ಗವನ್ನು ಬಿಟ್ಟು ಬೇರೆಮಾರ್ಗದಿಂದ ಮುಕ್ತಿಸೌಖ್ಯವನ್ನು
ಯುತ್ತೇವೆಂದು ಪ್ರವರ್ತಿಸುವವರ ರೀತಿಯು, ಶೀತವೇರಿದ ಕಪಿಗಳ ಗುಂಪು ಬೆಂಕಿಯಲ್ಲಿ
ನ್ನುಂಟುಮಾಡಿಕೊಳ್ಳಬೇಕೆಂಬ ಆತುರದಿಂದ, ಮಿಂಚು ಹುಳುವನ್ನು ಅಗ್ನಿಯನ್ನಾಗಿ
ಕೊಳ್ಳುವ ರೀತಿಯು ಹೇಗೋ ಹಾಗಿರುವುದು. ||೯೭

ಮುನ್ನಮೆಲಿಂಗದಲ್ಲಿ ಬೆರಸಿರ್ದ್ದು ಸದಾ ಯಜನಾದಿಸತ್ಕ್ರಿಯಾ |
ಸನ್ನಿಹಿತಾತ್ಮನಾಗಿ ಶರಣಂ ಯಜಿಸುತ್ತಿಹ ಭಿನ್ನಭಾವಮಂ ||
ವರ್ನಿಪೊಡಪ್ರಮೇಯ ಮನಿಲಂ ನಭದೊಳ್ಬೆರಸಿರ್ದ್ದು ಶಬ್ದಚಾ |
ರೋನ್ನತಿಯಿಂ ವಿಭೇದವಡೆದಂತೆ ವಿರಾಜಿಸುವಂ ಶಿವಾಧವಾ ||೯೮||

ಟೀಕೆ—ಶರಣಂ-ವೀರಮಾಹೇಶ್ವರನು, ಮುನ್ನಮೆ-ಮೊದಲೇ, ಲಿಂಗದಲ್ಲಿ-ಮಹಾಲಿಂಗದಲ್ಲಿ, ಬೆರಸಿರ್ದ್ದು-ಕೂಡಿರ್ದು, ಸದಾ-ಆವಾಗಳೂ, ಯಜನಾದಿ ಸತ್ಕ್ರಿಯಾಸನ್ನಿಹಿತಾತ್ಮನಾಗಿ-ಸದಾಚಾರಗಳಿಗೆ ಸಮೀಪವಾದಹೃದಯವುಳ್ಳಾತನಾಗಿ, ಯಜಿಸುತ್ತಿಹ-ಅರ್ಚಿಸುತ್ತಿಹ, ಅಭಿನ್ನಭಾವಮಂ-ಭೇದವಿಲ್ಲವಹತನವನ್ನು, ವರ್ನಿಪೊಡೆ-ಹೇಳುವೊಡೆ, ಅಪ್ರಮೇಯಂ-ತಿಳಿಯಲಳವಲ್ಲದ, ಅನಿಲಂ-ವಾಯುವು, ನಭದೊಳ್-ಆಕಾಶದಲ್ಲಿ, ಬೆರಸಿರ್ದ್ದು-ಕೂಡಿರ್ದು, ಶಬ್ದಚಾರೋನ್ನತಿಯಿಂ-ಶಬ್ದವಂ ಪುಟ್ಟಿಸುವ ಪೆರ್ಚುಗೆಯಿಂದೆ, ವಿಭೇಧವಡೆದಂತೆ-ಬೇರಾದಹಾಂಗೆ, ವಿರಾಜಿಸುವಂ-ಒಪ್ಪುವನು. ||೯೮||

ಟಿಪ್ಪಣಿ—ಶಿವಶರಣನು ಗುರುದೀಕ್ಷೆಯಾದಕೂಡಲೇ ಲಿಂಗಾಂಗಸಾಮರಸ್ಯವುಳ್ಳವನಾಗಿದ್ದರೂ, ಯಾವಾಗಲೂ ಸದಾಚಾರನಿರತನಾಗಿ, ಅದ್ವೈತಭಕ್ತಿಯಿಂದ ಲಿಂಗಾರ್ಚನವನ್ನು ಮಾಡಿಕೊಂಡಿರುವ ಅವನ ಭಾವವು ಹೇಗಿರುವುದೆಂದರೆ—ಅಪರಿಮಿತವಾದ ವಾಯುವು ಆಕಾಶದಲ್ಲಿ ಬೆರೆದಿದ್ದರೂ, ಶಬ್ದಗುಣವನ್ನು ಹುಟ್ಟಿಸುವಕತದಿಂದ ಆಕಾಶಕ್ಕೆ ಅದು ಹೇಗೆ ಭಿನ್ನವೆನಿಸಿಕೊಳ್ಳುವುದೋ ಹಾಗೆ ಅವನ ಭಿನ್ನಾಭಿನ್ನಭಾವವಿರುವುದು. ||೯೮||

ಸ್ಥಾವರಜಂಗಮದ್ವಿವಿಧಲಿಂಗಸಮಾಹಿತಭಕ್ತಿ ತಾನೆ ಸಂ |
ಭಾವಿಸಿ ಜನ್ಮವೊಂದರೊಳೆ ಸಿದ್ಧಿಪ ಕೇವಲನಿತ್ಯಮುಕ್ತಿಯೆಂ ||
ದೋವಿಸಮಸ್ತಶೈವ ವಿಮಳಾಗಮಧರ್ಮರಹಸ್ಯವಾಕ್ಯದಿಂ |
ಪಾವನಮೂರ್ತಿಸದ್ಗುರು ಕೃಪಾನಿಧಿ ಬೋಧಿಸಿದಂ ಶಿವಾಧವಾ ||೯೯||

ಟೀಕೆ—ಪಾವನಮೂರ್ತಿ-ಪವಿತ್ರರೂಪನಾದ, ಕೃಪಾನಿಧಿ-ದಯಾನಿಧಿಯಾದ, ಸದ್ಗುರು-ಶ್ರೀಗುರುವು, ಸ್ಥಾವರಜಂಗಮದ್ವಿವಿಧಲಿಂಗಸಮಾಹಿತಭಕ್ತಿ-ಸ್ಥಾವರಜಂಗಮ-ಇಷ್ಟಲಿಂಗ ಜಂಗಮಲಿಂಗವೆಂಬ, ದ್ವಿವಿಧಲಿಂಗ-ಎರಡು ತೆರನಾದ ಲಿಂಗದಲ್ಲಿ, ಸಮಾಹಿತ-ಸಂಬಂಧಿಸಲ್ಪಟ್ಟ, ಭಕ್ತಿ-ಭಕ್ತಿಯು, ತಾನೆ-ಅದು ತಾನೆ, ಜನ್ಮವೊಂದರೊಳೆ-ಜನ್ಮವೊಂದರಲ್ಲಿಯೇ, ಸಂಭಾವಿಸಿ-ಪ್ರಾಪ್ತವಾಗಿ, ಸಿದ್ಧಿಪ-ಕೈಸೇರುವ, ಕೇವಲನಿತ್ಯಮುಕ್ತಿಯೆಂದು-ಕೇವಲ-ತಾನೆಯಾದ, ನಿತ್ಯಮುಕ್ತಿಯೆಂದು-ಕೇಡಿಲ್ಲದ ಮೋಕ್ಷವೆಂದು, ಸಮಸ್ತಶೈವವಿಮಳಾಗಮಧರ್ಮರಹಸ್ಯವಾಕ್ಯದಿಂ-ಸಮಸ್ತ-ಬಹಳವಾದ, ಶೈವ-ಶಿವಸಂಬಂಧವಾದ, ವಿಮಳ-ನಿರ್ಮಳವಾದ, ಆಗಮ-ಆಗಮಂಗಳ

ಲ್ಲಿನ, ಧರ್ಮ-ಆಚಾರದ, ರಹಸ್ಯ-ಗೋಪ್ಯವಾದ, ವಾಕ್ಯದಿಂ-" ಏಕೇನಜ್ಞಾ... ಮುಕ್ತಿರ್ವೀರಾಣಾಂತುಮಹೇಶ್ವರಿ" ಎಂಬ ವಾಕ್ಯದಿಂದೆ, ಓವಿ-ಪಾಲಿಸಿ, ... ಧಿಸಿದಂ-ಉಪದೇಶಿಸಿದನು. ||೯||

ಟಿಪ್ಪಣಿ—ಪವಿತ್ರಮೂರ್ತಿಯಾದ ಶ್ರೀಗುರುವು, ಸಕಲ ಶಿವಾಗಮಧರ್ಮ ರಹಸ್ಯಾರ್ಥ... ಸಂಗ್ರಹಿಸಿ, ಇಷ್ಟಲಿಂಗ ಜಂಗಮಲಿಂಗಗಳಲ್ಲಿ ಅಚಲವಾದ ಭಕ್ತಿಯನ್ನಿಟ್ಟಿರುವುದೇ ಏಕ... ಸಿದ್ಧಿಸುವ ನಿತ್ಯಮುಕ್ತಿಯೆಂಬುದಾಗಿ ಉಪದೇಶಿಸಿರುವನು. ||೯||

ತುದಿಮೊದಲಿಲ್ಲ ದಿಂದ್ರಧನು ಮೂಡಿದ ಹಾಂಗೆ ಶರೀರಭಾವಮೆಂ |
ಬುದೆ ಸಹಜಂ ಪರಾಪರವಿಕಲ್ಪವಿಹೀನ ಶಿವೈಕ್ಯಭಕ್ತಿಯೋ ||
ಗದಪರಮಾರ್ಥಮಂ ತಿಳಿದ ಲಿಂಗನಿಜೈಕ್ಯಸುಖಾಸ್ಪದಂಗೆ ತ |
ಪ್ಪದುಭಯಕರ್ಮಭೋಗಫಲ ಮಿಲ್ಲದೆ ಪೋಪುದರಿಂ ಶಿವಾಧವಾ ||೧೦||

ಟೀಕ—ಪರಾಪರವಿಕಲ್ಪವಿಹೀನಶಿವೈಕ್ಯ ಭಕ್ತಿಯೋಗದ-ಪರಾಪರ-... ಉತ್ಕೃಷ್ಟ ಇದು ನಿಕೃಷ್ಟವೆಂಬ, ವಿಕಲ್ಪ-ಸಂಕಲ್ಪದಿಂದ, ವಿಹೀನ-ರಹಿತವಾ... ಶಿವೈಕ್ಯ ಭಕ್ತಿಯೋಗದ-ಶಿವನಲ್ಲಿ ಏಕಕವಾದ ಭಕ್ತಿಯಕೂಟದ, ಪರಮಾರ್ಥಮ... ಯಥಾರ್ಥವನ್ನು, ತಿಳಿದ-ಅರಿದಂಥ, ಲಿಂಗನಿಜೈಕ್ಯಸುಖಾಸ್ಪದಂಗೆ-ಲಿಂಗ-ಶಿವ... ದಲ್ಲಿ, ನಿಜೈಕ್ಯ-ಸಹಜಸಾಮರಸ್ಯದಿಂದಲಾದ, ಸುಖ-ಆನಂದಕ್ಕೆ, ಆಸ್ಪದಂಗೆ-ಸ... ನವಾದಾತಂಗೆ, ತಪ್ಪದೆ-ಓರೆಯಾಗದೆ, ಉಭಯಕರ್ಮಭೋಗಫಲಂ-ಪುಣ್ಯಪಾ... ರೂಪ ಕರ್ಮಫಲಭೋಗವು, ಇಲ್ಲದೆ-ಏನೂ ಇಲ್ಲದೆ, ಪೋಪುದರಿಂ-ಹೋಗುವು... ರಿಂದೆ, ತುದಿಮೊದಲಿಲ್ಲದ-ಆದಿ ಅಂತ್ಯಗಳಿಲ್ಲದ, ಇಂದ್ರಧನು-ಸುರಚಾಪವು, ಮೂ... ದಹಾಂಗೆ-ತೋರಿದಂತೆ, ಶರೀರಭಾವಮೆಂಬುದೆ-ದೇಹಮಾತ್ರವೆಂಬುದುತಾನೆ, ... ಜಂ-ಸ್ವಭಾವವು. (ಶರಣನು ನಿರ್ದೇಹನೆಂಬುದರ್ಥಂ) ಈ ಅರ್ಥದಲ್ಲಿ-"... ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪುರುಷಂ ಸಾಮ್ಯಮುಪೈತಿ" ಎಂ... ಬ್ರಹ್ಮಬಿಂದೂಪನಿಷತ್ತುಂಟು. ||೧೦||

ಟಿಪ್ಪಣಿ—"ಪಂಚಮಃಪುರುಷಾರ್ಥೋಽಹಿಭಕ್ತಿಶ್ಶೈವೀಸನಾತನೀ" "ಭಕ್ತಿರೇವ ಸ... ರ್ಥದಾಯಿನೀ ಭಕ್ತಿರೇವಪರತತ್ವವೇದಿನೀ | ಭಕ್ತಿರೇವಭವದೋಷಹಾರಿಣೀ" ಇತ್ಯಾದಿ ವ... ಗಳಿಂದ ಸಿದ್ಧವಾದ ಅದ್ವೈತ ಶಿವಭಕ್ತಿಯ ಮಹತ್ತ್ವವನ್ನು ತಿಳಿದು, ನಿಸ್ಸಂಶಯವಾಗಿ ಅಚಲ... ಶಿವಭಕ್ತಿಯಿಂದ ಕೂಡಿ, ಆ ಶಿವಲಿಂಗದಲ್ಲಿ ಸಾಮರಸ್ಯಗೊಂಡು, ಅದರಿಂದ ಸಂಭವಿಸುವ ಪ... ನಂದಕ್ಕೆ ಆಶ್ರಯನಾಗಿರುವ ಶಿವಶರಣನಿಗೆ ಪುಣ್ಯಪಾಪೋಭಯಕರ್ಮ ಫಲಾನುಭವವು ಲೇಶವೂ... ದಿರುವಕಾರಣ, ಅವನಿಗೆ ದೇಹಸಂಬಂಧವಿದ್ದರೂ "ಅಪರಿಚ್ಛೇದ್ಯಮಾತ್ಮಾನಂ ಚಿದಂಬರಮ... ರ್ಣ | ದೇಹಯೋಗೇಪಿದೇಹಸ್ಥೈರ್ವಿಕಾರೈರ್ನವಿಲಿಪ್ಯತೆ" ಎಂಬ ಪ್ರಮಾಣದಂತೆ ದೇಹೇಂದ್ರಿ... ಗುಣಾದಿಗಳ ವಿಕಾರವೊಂದೂ ಇರುವುದಿಲ್ಲವಾದಕಾರಣ, ಅವನಿಗಿರುವ ದೇಹವು, ಇಂದ್ರಧನು... ಹೇಗೆ ತೋರಿಕೆಗೆಮಾತ್ರವೇ ಇರುತಿರುವುದೋ ಹಾಗೆ ಇರುತ್ತಿರುವುದು. ||೧೦||

ಈಪರಿ ಷಟ್ಸ್ಥಲಾತ್ಮಕವಿಶಿಷ್ಟ ಮಹತ್ತರಭಕ್ತಿಯೋಗವಿ |
ದ್ಯಾಪರಮಾರ್ಥತತ್ವಮಯ ಮಪ್ಪ ಲಸಚ್ಛತಕಪ್ರಬಂಧಮಂ ||
ರೂಪಿಸಿ ಮಾಯಿದೇವವಿಭು ಲಕ್ಷಣಲಕ್ಷಿತಮಾಗಿ ಪೇಳ್ದ ನೊ |
ಲ್ದೈ ಪುರಸೋಮನಾಥಚರಣಾಂಬುಜಷಟ್ಚರಣಂ ಶಿವಾಧವಾ ||೧೦೧||

ಟೀಕೆ—ಐಪುರಸೋಮನಾಥ ಚರಣಾಂಬುಜಷಟ್ಚರಣಂ-ಐಪುರ-ದಹರಾಕಾಶವೆಂಬ ಪಟ್ಟಣದ, ಸೋಮನಾಥ-ಚಿಚ್ಛಕ್ತಿವಲ್ಲಭನಾದ ಮಹಾಲಿಂಗದ, ಚರಣಾಂಬುಜ-ಪದಕಮಲದಲ್ಲಿ, ಷಟ್ಚರಣಂ-ತುಂಬಿಯಾದಂಥ, ಮಾಯಿದೇವವಿಭು-ಮಾಯಿದೇವನೆಂಬಾಚಾರ್ಯನು, ಈಪರಿ-ಈರೀತಿಯಾಗಿ, ಷಟ್ಸ್ಥಲಾತ್ಮಕ ವಿಶಿಷ್ಟಮಹತ್ತರಭಕ್ತಿಯೋಗವಿದ್ಯಾಪರಮಾರ್ಥ ತತ್ವಮಯಮಪ್ಪ-ಷಟ್ಸ್ಥಲಾತ್ಮಕ-ಷಟ್ಸ್ಥಲಸ್ವರೂಪವಾದ ವಿಶಿಷ್ಟ-ಶ್ರೇಷ್ಠವಾದ, ಮಹತ್ತರ-ಅತ್ಯಂತಪೂಜ್ಯಮಾದ, ಭಕ್ತಿಯೋಗ-ಶಿವಭಕ್ತಿಯೋಗವೆಂಬ, ವಿದ್ಯಾ-ಜ್ಞಾನದಲ್ಲಿ, ಪರಮಾರ್ಥತತ್ವಮಯಮಪ್ಪ-ಯಥಾರ್ಥಸ್ವರೂಪವಾದ, ಲಸಚ್ಛತಕಪ್ರಬಂಧಮಂ-ಲಸತ್-ಪ್ರಕಾಶಿಸುವ, ಶತಕಪ್ರಬಂಧಮಂ-ಭಕ್ತಿಪ್ರತಿಪಾದಕವಾದ ಶತಕಗ್ರಂಥವನ್ನು, ರೂಪಿಸಿ-ಕುರುಹುಗೊಳಿಸಿ, ಲಕ್ಷಣಲಕ್ಷಿತಮಾಗಿ—ಭಕ್ತಿಯೋಗಲಕ್ಷಣಂಗಳಿಂ ಕಾಣಲ್ಪಟ್ಟುದನ್ನಾಗಿ, ಪೇಳ್ದಂ-ನಿರೂಪಿಸಿದನು. ||೧೦೧||

ಗದ್ಯ.

ಇದು ಸಮಸ್ತಶಿವಯೋಗಿಜನಮನೋನಿಲಯ ಶ್ರೀಮನ್ನಿರಂಜನಲಿಂಗ ಚರಣಸರಸೀರುಹಸೌರ ಭಾಸಕ್ತಮತ್ತಮಧುಕರಾಯಮಾಣ ಷಟ್ಸ್ಥಲಲಿಂಗಾಂಗಸಂಯೋಗಸನ್ಮಾರ್ಗಸಿದ್ಧಾಂತಸ್ಥಾಪನಾಚಾರ್ಯ ಪರಮಸುಜ್ಞಾನಸತ್ಕ್ರಿಯಾಯುಕ್ತಭಕ್ತಿಭರಿತಾಂತರಂಗ ಪ್ರಣವಪೂರ್ವಕ ಪಂಚಾಕ್ಷರೀಮಂತ್ರೋಚ್ಚಾರಿತ ಮಂಜುಳಭಾಷಾವಿಲಾಸನಪ್ಪ ತೋಂಟದಸಿದ್ಧಲಿಂಗದೇಶಿಕನಿಂ ವಿರಚಿತಮಪ್ಪಶ್ರೀಮದ್ವೀರಶೈವಾಚಾರ ಸಾರೋದ್ಧಾರ ಭಕ್ತಿಜ್ಞಾನವೈರಾಗ್ಯಪ್ರತಿಪಾದಕಶತಕತ್ರಯ ಮಹಾವ್ಯಾಖ್ಯಾನದೊಳ್ ಭಕ್ತಿಪ್ರತಿಪಾದಕ ಶಿವಾಧವಶತಕಂ ಸಂಪೂರ್ಣಂ.

ಟಿಪ್ಪಣಿ—ಅಂತರ್ಲಿಂಗಾನುಸಂಧಾನ ಜ್ಞಾನಸಾಂದ್ರನಾದ ಶ್ರೀಮುಗ್ಗೆಯ ಮಾಯಿದೇವ ಪ್ರಭುವು ಈರೀತಿಯಾಗಿ ಷಟ್ಸ್ಥಲಸ್ವರೂಪವಾದ ಶ್ರೀ ಶಿವಭಕ್ತಿಯೋಗವನ್ನು ಕುರಿತು ವಿದ್ಯೆಯ ಶ್ರೇಷ್ಠವಾದ ತತ್ವವನ್ನು ವಿವರಿಸುವ ಶತಕವನ್ನು ಸಕಲ ಭಕ್ತಿಯೋಗ ಲಕ್ಷಣಗಳಿಂದ ಕೂಡಿರುವಂತೆ ನಿರೂಪಿಸಿದನು.

ಎಂಬಲ್ಲಿಗೆ ಭಕ್ತಿಪ್ರಶಂಸಾಪರವಾದ ಶಿವಾಧವಶತಕದ ಟಿಪ್ಪಣವು
ಸಂಪೂರ್ಣಮಾದುದು.

ಶ್ರೀ ಸಾಂಬಸದಾಶಿವಾರ್ಪಣಮಸ್ತು.

ಶ್ರೀರಸ್ತು.

# ಶಿವಾವಲ್ಲಭಶತಕಂ.

ಶಾ|| ಶ್ರೀಮಚ್ಛಾಂಭವಭಕ್ತಿಯೋಗವಿಲಸನ್ನಿರ್ವಾಣನಿತ್ಯೋತ್ಸವ |
ಪ್ರೇಮಾನಂದರಸಾಬ್ಧಿವರ್ಧನಸದಾಚಾರಕ್ರಿಯಾಕೌಶಲಾ ||
ರಾಮೋದ್ದಾಮಗುಣಪ್ರಭೂತಮಹದೈಶ್ವರ್ಯಾನುಭೂತಿಪ್ರಭಾ |
ಧಾಮಂ ತತ್ಪರಮಂ ಪದಂ ಗುರುಪದಂ ವಂದೇಶಿವಾವಲ್ಲಭಾ ||

## ಟೀಕೆ.

ಕಂ|| ಪರಮತರಭಕ್ತರಂತಃ |
ಕರಣಮೆ ನೆಲೆವನೆ ಯದಾಗಿ ರಾಜಿಪಸಾಕ್ಷಾ ||
ತ್ಪರಶಿವ ನೀನೆಮ ಗರಿವಂ |
ಕರುಣಿಪು ದೊಲವಿಂದೆ ಗುರುನಿರಂಜನಲಿಂಗಾ ||

ಇಂತು ಮಾಯಿದೇವಾಚಾರ್ಯಂ ಭಕ್ತಿಪ್ರತಿಪಾದಕವಾದ ಶತಕವಮಂ ನಿರೂಪಿಸಿದನ ದಲ್ಲಿ, ಜ್ಞಾನಪ್ರತಿಪಾದಕಮಾದ ಶತಕವಮಂ ಪೇಳಲುದ್ಯೋಗಿಸಿದಾತನಾಗಿ ಗ್ರಂಥಾರಂಭದಲ್ಲಿ ಶ್ರೀ ರು ನಮಸ್ಕಾರರೂಪವಾದ ಮಂಗಲಾಚರಣೆಯಂ ಮಾಡುತ್ತಿರ್ಪಂ.

ಟೀಕೆ—ಶ್ರೀಮ......ಪ್ರಭಾಧಾಮಂ-ಶ್ರೀಮತ್-ಜ್ಞಾನೈಶ್ವರ್ಯಪ ಳ್ಳ, ಶಾಂಭವ-ಶಿವಸಂಬಂಧಿಯಾದ, ಭಕ್ತಿಯೋಗ-ಭಕ್ತಿಯನುಕೂಲತೆಯಿ ವಿಲಸತ್-ಒಪ್ಪುತ್ತಿರ್ಪ, ನಿರ್ವಾಣ-ಮೋಕ್ಷದಲ್ಲಿ, ನಿತ್ಯ-ಕೇಡಿಲ್ಲದ, ಉತ್ಸವ ಗೆಯಿಂದಾದ, ಪ್ರೇಮ-ಸ್ನೇಹದ, ಆನಂದರಸಾಬ್ಧಿ-ನಿರತಿಶಯಾನಂದ ಸಮುದ್ರ ವರ್ಧನ-ಪೆರ್ಚುಗೆಯುಳ್ಳ, ಸದಾಚಾರಕ್ರಿಯಾ-ಸದಾಚಾರವರ್ತನೆಯಲ್ಲಿ, ಕೌಶ ಜಾಣ್ಮೆಯಿಂ, ಆರಾಮ-ಒಪ್ಪುತ್ತಿರ್ಪ, ಉದ್ದಾಮ-ಅಧಿಕವಾದ, ಗುಣ-ಷಡ್ಗು ಗಳಿಂ, ಪ್ರಭೂತ-ಹೆಚ್ಚಾದ, ಮಹತ್-ಘನವಾದ, ಐಶ್ವರ್ಯ-ಅಷ್ಟಮಹದೈಶ್ವರ್ಯ ನುಳ್ಳ, ಅನುಭೂತಿಪ್ರಭಾ-ಜ್ಞಾನಪ್ರಭೆಗೆ, ಧಾಮಂ-ಸ್ಥಾನವಾದ, ಪರಮಂಪದ ಉತ್ಕೃಷ್ಟಸ್ಥಾನವಾದ, ತತ್-ಹಾಂಗೆಪ್ರಸಿದ್ಧವಾದ, ಗುರುಪದಂ-ಶ್ರೀಗುರುಚ ವನ್ನು, ಶಿವಾವಲ್ಲಭಾ-ಎಲ್ಯೆ ಚಿಚ್ಛಕ್ತಿವಲ್ಲಭನೆ, ವಂದೇ-ನಮಸ್ಕರಿಸುತ್ತಿಹೆನು ||

ಟಿಪ್ಪಣಿ—ಚಿಚ್ಛಕ್ತಿಕಾಂತನಾದ ಎಲ್ಯೆ ಪರಮೇಶ್ವರನೆ, ಶಿವಭಕ್ತಿಯೋಗದಿಂದ ಲಭಿಸ ಮುಕ್ತಿಯ ಶಾಶ್ವತವಾದ ಉತ್ಸವದಲ್ಲಿ ಪ್ರೀತಿಯನ್ನೂ ಆನಂದವನ್ನೂ ಹೊಂದಿ, ಆಂತಹ ಪ್ರೇಮ ನಂದರಸವನ್ನು ಅಭಿವೃದ್ಧಿಗೊಳಿಸುವ ಸದಾಚಾರಾನುಷ್ಠಾನದಲ್ಲಿ ಕುಶಲವಾದ ಶ್ರೇಷ್ಠಗುಣ

ಕೂಡಿರುವ ಕಾರಣ, ಸಮೃದ್ಧವಾದ ಅಣಿಮಾಮಹಿಮಾದಿ ವಿಭೂತಿಗಳಿಗೆ ಆಶ್ರಯವಾಗಿ ಶಿವಾನುಭವಜ್ಞಾನಸ್ಕಾಕರವಾಗಿರುವ ಶ್ರೇಷ್ಠತರವಾದ ಶ್ರೀಗುರುಪಾದವನ್ನು ವಂದಿಸುವೆನು. ಎಂದು ಮಾಯಿದೇವಾಚಾರ್ಯರು ಈ ಶತಕದಾದಿಯಲ್ಲಿ ಶ್ರೀಗುರು ನಮಸ್ಕಾರರೂಪಮಂಗಳಾಚರಣವನ್ನು ಮಾಡಿರುವರು ||೧||

ಅವತಾರಿಕೆ—ಇಂತು ಆಚಾರ್ಯಂ ತನ್ನ ಗುರುನಮಸ್ಕಾರಮಂ ಮಾಡಿ, ತದನಂತರದಲ್ಲಿ ಇಷ್ಟದೇವತೆಯಪ್ಪ ಐಪುರದ ಸೋಮೇಶ್ವರನಂ ಸ್ತುತಿಸುತ್ತಿರ್ದಪಂ.—

ಸಚ್ಚಿದ್ರೂಪಸುಖಾಕೃತಿಪ್ರಕೃತಿಸಿದ್ಧಪ್ರಸ್ಫುರತ್‌ಪ್ರತ್ಯಯೋ |
ದ್ಯಚ್ಚೈತನ್ಯಕಳಾಪ್ರಶಸ್ತ ಪರಿಪೂರ್ಣಾದ್ಯಂತವರ್ಜಾತ್ಮಭಾ ||
ವೋಚ್ಚಾವಸ್ಥಿತದಿವ್ಯಲಿಂಗಘನತೇಜೋಧಾಮಸೋಮೇಶ್ವರಂ |
ಮಚ್ಚಿತ್ತೈಪುರವಾಸಿನಂ ಪ್ರತಿ ಭಜಾಮಿ ತ್ವಾಂ ಶಿವಾವಲ್ಲಭಾ ||೨||

ಟೀಕೆ—ಸಚ್ಚಿದ್ರೂಪ... ...ಕಳಾಪ್ರಶಸ್ತ-ಸಚ್ಚಿದ್ರೂಪ-ಸತ್ಯಜ್ಞಾನಸ್ವರೂಪನಾದ, ಸುಖಾಕೃತಿ-ಆನಂದಸ್ವರೂಪನಾದ, ಪ್ರಕೃತಿ-ಸ್ವಭಾವದಿಂ, ಸಿದ್ಧ-ಪ್ರಸಿದ್ಧವಾದ, ಪ್ರಸ್ಫುರತ್-ಮಿಗೆಬೆಳಗುತ್ತಿರ್ಪ, ಪ್ರತ್ಯಯ-ಜ್ಞಾನದಿಂ, ಉದ್ಯತ್-ಪೊರಪೊಣ್ಮುತ್ತಿರ್ಪ, ಚೈತನ್ಯಕಳಾ-ಚಿಚ್ಛಕ್ತಿಯಿಂ, ಪ್ರಶಸ್ತ-ಪ್ರಸಿದ್ಧನಾದ, ಪರಿಪೂರ್ಣ-ಅಖಂಡಿತನಾದ, ಆದ್ಯಂತವರ್ಜ-ತುದಿಮೊದಲಿಲ್ಲದ, ಆತ್ಮಭಾವ-ಪರಮಾತ್ಮಸ್ವರೂಪನಾದ, ಉಚ್ಚಾವಸ್ಥಿತ-ಎಲ್ಲವಕ್ಕೂ ಉಪರಿಯಾಗಿರ್ಪ, ದಿವ್ಯಲಿಂಗ-ಮನೋಹರವಾದ ನಿಷ್ಕಳಲಿಂಗವಾದ, ಘನತೇಜೋಧಾಮ-ಮಹಾಪ್ರಕಾಶಕ್ಕೆ ಸ್ಥಾನನಾದ (ಧಾಮನ್‌ಶಬ್ದವು ನಕಾರಾಂತವಾಗಿ, ಸಂಬುದ್ಧಿಯಲ್ಲಿ "ನಲೋಪಃ ಪ್ರಾತಿಪದಿಕಾಂತಸ್ಯ'' ಎಂಬ ಸೂತ್ರದಿಂ ನಕಾರಲೋಪವಾಗುತ್ತಿರಲಾಗಿ "ನಙಸಂಬುದ್ಧೌ'' ಎಂಬ ಸೂತ್ರದಿಂ ಪ್ರತಿಷೇಧಂಬರಲಾಗಿ "ವಾನಪುಂಸಕಾನಾಮಿತಿವಕ್ತವ್ಯಂ'' ಎಂಬುಪಸಂಖ್ಯಾನದಿಂ ನಕಾರಲೋಪವು ವೈಕಲ್ಪಿಕಮೆಂದರಿವುದು), ಭೋ ಶಿವಾವಲ್ಲಭಾ-ಎಲೆ ಜ್ಞಾನಶಕ್ತಿವಲ್ಲಭನಾದ ಶಿವನೆ, ಮಚ್ಚಿತ್ತೈಪುರವಾಸಿನಂ-ಎನ್ನ ಚಿತ್ತವೆಂಬ ಪಟ್ಟಣದಲ್ಲಿ ನೆಲೆಗೊಂಡಿರ್ಪ, ಸೋಮೇಶ್ವರಂ-ಕೋಟಿಚಂದ್ರಪ್ರಕಾಶವನುಳ್ಳ, ತ್ವಾಂಪ್ರತಿ-ನಿನ್ನನ್ನು ಕುರಿತು, ಭಜಾಮಿ-ಸೇವಿಸುತ್ತಿಹೆನು. ||೨||

ಟಿಪ್ಪಣಿ—ಸಚ್ಚಿದಾನಂದಸ್ವರೂಪನೂ, ಸಹಜಸಿದ್ಧವಾಗಿ ಹೊಳೆಯುತ್ತಿರುವ ಜ್ಞಾನದಿಂದಭಿವ್ಯಕ್ತವಾಗುವ ಚಿಚ್ಛಕ್ತಿಯಿಂ ಪರಿಪೂರ್ಣನೂ, ಆದ್ಯಂತವಿಹೀನನೂ, ಪರಮಾತ್ಮಸ್ವರೂಪನೂ, ಎಲ್ಲಸ್ಥಾನಕ್ಕೂ ಮೇಲಣ ಶಿಖಾಚಕ್ರದಲ್ಲಿರುವ ನಿಷ್ಕಳಲಿಂಗದ ಮಹಾಪ್ರಕಾಶಕ್ಕೆ ಆಶ್ರಯನೂ ಆದ ಎಲೈ ಚಿಚ್ಛಕ್ತಿಕಾಂತನೆ! ನನ್ನ ಹೃದಯಾಕಾಶದಲ್ಲಿ ವಾಸಮಾಡುವ ಉಮಾಸಹಿತನಾದ (ಅಥವಾ ಕೋಟಿಚಂದ್ರನಂತೊಪ್ಪುವ) ನಿನ್ನನ್ನು ಸೇವಿಸುತ್ತೇನೆ. ಎಂದು ಆಚಾರ್ಯರು ತಮ್ಮ ಇಷ್ಟದೈವವಾದ ಐಪುರ ಸೋಮೇಶ್ವರನ ವಂದನೆಯನ್ನು ಆಚರಿಸಿರುವರು. ||೨||

ಅವತಾರಿಕೆ—ಇಂತು ಆಚಾರ್ಯಂ ಸ್ವೇಷ್ಟದೇವತಾ ನಮಸ್ಕಾರಮಂ ಮಾಡಿ ಸಂಪ್ರದಾಯಪ್ರವರ್ತಕರಾದ ಪ್ರಭುದೇವರಂ ಸ್ತುತಿಸುತ್ತಿರ್ದಪಂ.—

ವೃಷಭೇಶಂ ಚೆನನಾಮಧೇಯವೃಷಭಾಚಾರ್ಯಂ ಗುಹೇಶಾಹ್ವಯಾ |
ಭಿಷವಾಲಂ ಪರಿಪೂರ್ಣವಾಚಕಲಸದ್ವಾಚ್ಯಸ್ವರೂಪಪ್ರದ ||
ದ್ವಿಷಯಾಖ್ಯಪ್ರಭುದೇವದೇವ ನೆಮಗೀಗಿಷ್ಟಾರ್ಥಸಿದ್ಧಿಸ್ಪೃಹಾ |
ಸುಷಿರಾಪೂರಣಕೃತ್ಪ್ರಸಾದಸುಖಮಂ ನಿತ್ಯಂ ಶಿವಾವಲ್ಲಭಾ

ಟೀಕೆ—ವೃಷಭೇಶಂ-ಬಸವೇಶ್ವರಂಗೆ ಒಡೆಯನಾದ, ಚೆನನಾಮಧೇಯವೃಷಭಾಚಾರ್ಯಂ-ಚೆನ್ನ ಎಂಬ ಪೆಸರುಳ್ಳ ಬಸವೇಶ್ವರಂಗೆ ಆಚಾರ್ಯನಾದ, ಗುಹೇಶಾಹ್ವಯಾಭಿಷವಾಲಂ-ಗುಹೇಶಾಹ್ವಯ-ಗುಹೇಶ್ವರನೆಂಬ ಪೆಸರುಳ್ಳ ಲಿಂಗದ ಅಭಿಷವ-ಸಂಧಾನದಲ್ಲಿ ("ಸಂಧಾನಂಸ್ಯಾದಭಿಷವಂ" ಎಂದಮರಶೇಷವುಂಟು) ಅಲಂ-ಸಾಮರ್ಥ್ಯವನುಳ್ಳ ("ಅಲಂಭೂಷಣಪರ್ಯಾಪ್ತಿ ಶಕ್ತಿವಾರಣವಾಚಕಂ" ಎಂದವ್ಯಯಕಾಂಡಮುಂಟಾಗಿ), ಪರಿಪೂರ್ಣ-ಅಖಂಡಿತವಾದ, ವಾಚಕ-ಶಬ್ದಂ, ಲಸತ್-ಒಪ್ಪುತ್ತಿರುವ, ವಾಚ್ಯ-ಅರ್ಥಂಗಳ, ಸ್ವರೂಪ-ಮಾರ್ಗವನ್ನು, ಪ್ರದ-ಕೊಡುತ್ತಿರ್ಪ, ವಿಷಯ-ದೇಶಂಗಳಾದ ವೇದಶಾಸ್ತ್ರಪುರಾಣಂಗಳಲ್ಲಿ ("ನೀವೃಜ್ಜನಪದೌದೇಶ ವಿಷಯೌತೂಪವರ್ತನಂ" ಎಂದಮರನಿಘಂಟು), ಆಖ್ಯ-ಕೀರ್ತಿಯನುಳ್ಳ ("ಯಶಃಕೀರ್ತಿಸ್ಸಮಾಖ್ಯಾಚ" ಎಂದಮರನಿಘಂಟು), ಪ್ರಭುದೇವದೇವಂ-ಪ್ರಭುಸ್ವಾಮಿಯೆಂಬ ಸ್ವಯಂಪ್ರಕಾಶವು, ಎಮಗೆ-ಭಕ್ತರಾದಂಥ ನಮಗೆ, ಇಷ್ಟಾರ್ಥ......ಸುಖಮಂ-ಇಷ್ಟಾರ್ಥಸಿದ್ಧಿ-ಲಿಂಗಾಂಗಸಮರಸಾನಂದಸಿದ್ಧಿ, ಸ್ಪೃಹಾ-ಅಭಿಲಾಷೆಯೆಂಬ, ಸುಷಿರ-ದ್ವಾರದ, ಆಪೂರಣಕೃತ್-ಪರಿಪೂರ್ತಿಯ ಮಾಡುತ್ತಿರ್ಪ, ಪ್ರಸಾದಸುಖಮಂ-ಪ್ರಸನ್ನತೆಯ ಪರಿಣಾಮವನ್ನು, ನಿತ್ಯಂ-ಎಲ್ಲಾಗಳೂ, ಈಗೆ-ಕೊಡಲಿ.

ಟಿಪ್ಪಣಿ—ಬಸವೇಶ್ವರನಿಗೆ ಸ್ವಾಮಿಯೂ, ಚೆನ್ನಬಸವೇಶ್ವರನಿಗೆ ಆಚಾರ್ಯನೂ, ಗುಹೇಶ (ದಹರಗುಹಾಧೀಶ) ನಾದ ಅಂತರ್ಲಿಂಗದ ಅನುಸಂಧಾನದಲ್ಲಿ ಸಮರ್ಥನೂ, ಮಂತ್ರಾರ್ಥನಿಷ್ಠ ಕವಾದ ಶಿವಾಗಮಶಾಸ್ತ್ರಗಳಲ್ಲಿ ಪ್ರಖ್ಯಾತನೂ ಆದ ಪ್ರಭುದೇವಸ್ವಾಮಿಯು ನಮ್ಮ ಇಷ್ಟಾರ್ಥವ ಲಿಂಗಾಂಗಸಾಮರಸ್ಯಸಿದ್ಧಿಯನ್ನು ಪರಿಪೂರಣ ಮಾಡತಕ್ಕ ಅನುಗ್ರಹಸೌಖ್ಯವನ್ನು ಯಾವಾಗಲೂ ಉಂಟುಮಾಡಲಿ ಎಂದು ಆಚಾರ್ಯರು ತಮ್ಮ ಸಂಪ್ರದಾಯದ ಪ್ರಭುದೇವರ ಸ್ತುತಿಯನ್ನು ಮಾಡುತ್ತಿರುವರು.

ಅವತಾರಿಕೆ—ಇನ್ನು ಆಚಾರ್ಯಂ ಲಿಂಗಾಂಗಸಾಮರಸ್ಯರೂಪವಾದ ಮಹಾಜ್ಞಾನವಂ ಪ್ರತಿಪಾದಿಸುತಿರ್ಪಂ.—

ಭಕ್ತಿಜ್ಞಾನಪರಾನುಭೂತಿಪರಿಣಾಮಾನಂದಕಂದಾಂಕುರಂ |
ವ್ಯಕ್ತಾವ್ಯಕ್ತಗುಣಾತಿರಿಕ್ತಶಿವಯೋಗೋದ್ಯತ್ಫಲಾಸ್ವಾದನೋ ||
ದ್ಯುಕ್ತಾನಾದಿವಿಮುಕ್ತಷಟ್ಸ್ಥಲಪದಾದ್ವೈತಾಂಗಲಿಂಗಾನುಭಾ |
ವೋಕ್ತಾರ್ಥಂ ನಿಜಮಕ್ಕೆ ನಿನ್ನ ಕೃಪೆಯಿಂ ದೆನ್ನೊಳ್ಶಿವಾವಲ್ಲಭಾ ||೪||

ಟೀಕೆ—ಭೋಶಿವಾವಲ್ಲಭಾ-ಎಲೈ ಪಾರ್ವತೀರಮಣನೇ, ಭಕ್ತಿ...ಕುರಂ-ಭಕ್ತಿಜ್ಞಾನ-ಬಾಹ್ಯಾಭ್ಯಂತರಭಕ್ತಿಯ ವಿಚಾರವೆಂಬ, ಪರ-ಉತ್ಕೃಷ್ಟವಾದ, ಅನುಭೂತಿ-ಮಹಾಜ್ಞಾನದಲ್ಲಿ, ಪರಿಣಾಮ-ಪರಿಣಮಿಸುವಂಥ, ಆನಂದ-ಸುಖವೆಂಬ, ಕಂದಾಂಕುರಂ-ಗೆಣಸುಮೊಳೆಗಳುಳ್ಳ (ಭಕ್ತಿಯೇ ಗೆಣಸು, ಜ್ಞಾನವೇ ಅಂಕುರವೆಂಬುದರ್ಥಂ) ವ್ಯಕ್ತಾ...ಭಾವೋಕ್ತಾರ್ಥಂ-ವ್ಯಕ್ತಾವ್ಯಕ್ತಗುಣ-ಸಗುಣನಿರ್ಗುಣಂಗಳತ್ತಣಿಂ, ಅತಿರಿಕ್ತ-ಮೀರಿದ, ಶಿವಯೋಗ-ಶಿವಧ್ಯಾನವೆಂಬ, ಉದ್ಯತ್ಫಲ-ಪುಟ್ಟುತ್ತಿರ್ಪ ಫಲದ, ಆಸ್ವಾದನ-ಸವಿಯಲ್ಲಿ, ಉದ್ಯುಕ್ತ-ಉದ್ಯೋಗವನುಳ್ಳ, ಅನಾದಿವಿಮುಕ್ತ-ಮಾಯೆಯಿಂ ಬಿಡಲ್ಪಟ್ಟ, ಷಟ್ಸ್ಥಲಪದ-ಷಟ್ಸ್ಥಲಮಾರ್ಗದಲ್ಲಿ, ಅದ್ವೈತ-ಭಿನ್ನವಿಲ್ಲದ, ಅಂಗಲಿಂಗಾನುಭಾವ-ಅಂಗಲಿಂಗಸಂಬಂಧಜ್ಞಾನದಿಂ, ಉಕ್ತ-ಪೇಳಲ್ಪಟ್ಟ, ಅರ್ಥಂ-ಪ್ರಯೋಜನವು, ನಿನ್ನ ಕೃಪೆಯಿಂದೆ-ನಿನ್ನ ಕಾರುಣ್ಯದಿಂದೆ, ಎನ್ನೊಳ್-ನನ್ನಲ್ಲಿ, ನಿಜಂ-ಸಹಜಮಾಗಿ, ಅಕ್ಕೆ-ಆಗಲಿ ||೪||

ಟಿಪ್ಪಣಿ—ಎಲೈ ಪರಮೇಶ್ವರನೇ ! ಶಿವಭಕ್ತಿಪರಿಪಾಕದಿಂದ ಸಂಜನಿಸುವ ಸೌಖ್ಯದ ಗಡ್ಡೆಯಾಗಿಯೂ, ಶಿವಜ್ಞಾನದ ಪರಿಪಾಕದಿಂದ ಜನಿಸುವ ಸೌಖ್ಯದ ಅಂಕುರರೂಪವಾಗಿಯೂ ಸಗುಣನಿರ್ಗುಣಗಳನ್ನು ಮೀರಿದ ಶಿವಯೋಗದ ಉತ್ಕೃಷ್ಟವಾದ ಫಲವನ್ನು ಸವಿಯುವುದರಲ್ಲಿ ಆಸಕ್ತಿಯುಳ್ಳ ಮಾಯಾದೂರವಾದ ಷಟ್ಸ್ಥಲಮಾರ್ಗಕ್ಕೆ ಭಿನ್ನವಲ್ಲದ ಲಿಂಗಾಂಗ ಸಾಮರಸ್ಯಜ್ಞಾನದ ಫಲವು ನಿನ್ನ ದಯೆಯಿಂದ ನನ್ನಲ್ಲಿ ಸ್ವಭಾವಸಿದ್ಧವಾಗಿ ನೆಲಸಲಿ. ||೪||

ಅಂಗಂ ತ್ವಂಪದ ಮಾತ್ಮರೂಪ ಮಮಲಂ ಲಿಂಗಂ ಶಿವಂ ತತ್ಪದಂ |
ಸಂಗಂ ಸತ್ಯ ಮಸಿಪ್ರಸಿದ್ಧಪದ ಮೆಂಬೀತತ್ತ್ವಮಸ್ಯರ್ಥದಿಂ ||
ಲಿಂಗಾಂಗೈಕ್ಯವಿಶಿಷ್ಟಜೀವಪರಮೈಕ್ಯಾಭಿನ್ನಭಾವಪ್ರಸಾ |
ದಾಂಗೀಕಾರ ಮದಕ್ಕೆ ನಿನ್ನ ಕೃಪೆಯಿಂ ದೆನ್ನೊಳ್ಶಿವಾವಲ್ಲಭಾ ||೫||

ಟೀಕೆ—ಭೋಶಿವಾವಲ್ಲಭಾ-ಎಲೈ ಪಾರ್ವತೀರಮಣನೆ, ಅಂಗಂ-ಅಂಗವೆನಲಾಗಿ, ತ್ವಂಪದಂ-ತ್ವಂಪದವಾಚ್ಯಾರ್ಥವಾದ, ಆತ್ಮರೂಪಂ-ಜೀವಾತ್ಮಸ್ವರೂಪವು, ಅಮಲಂ-ನಿರ್ಮಲವಾದ, ಲಿಂಗಂ-ಲಿಂಗವೆನಿಸುವಂಥ, ಶಿವಂ-ಶಿವನು, ತತ್ಪದಂ-ತತ್ಪದವಾಚ್ಯಾರ್ಥವು, ಸಂಗಂ-ಸಂಬಂಧವು, ಸತ್ಯಂ-ಯಥಾರ್ಥವಾಗಿ, ಅಸಿಪ್ರಸಿದ್ಧಪದಂ-ಅಸಿಯೆಂಬ ಪ್ರಸಿದ್ಧಪದವಾಚ್ಯಾರ್ಥವು, ಎಂಬ-ಹೀಗೆಂಬ, ಈ ತತ್ತ್ವಮಸ್ಯ

ರ್ಥದಿಂ-ಈ ತತ್ತ್ವಮಸಿಯೆಂಬ ಮಹಾವಾಕ್ಯಾರ್ಥದಿಂ, ಲಿಂಗಾಂಗೈಕ್ಯ-ಲಿಂಗಾ ಸಂಬಂಧವೆಂಬ, ವಿಶಿಷ್ಟ-ಅಧಿಕತರವಾದ, ಜೀವಪರಮೈಕ್ಯ-ಶಿವಜೀವರಕೂಟ ಅಭಿನ್ನಭಾವ-ಭೇದಭಾವವಿಲ್ಲದ, ಪ್ರಸಾದ-ಪ್ರಸನ್ನತೆಯ, ಅಂಗೀಕಾರಂ-ಸ್ವೀ ರವು, ಅದು-ತಾನು, ನಿನ್ನಕೃಪೆಯಿಂದ-ನಿನ್ನಕಾರುಣ್ಯದಿಂದೆ, ಎನ್ನೊಳ್-ನನ್ನ ಅಕ್ಕೆ-ಆಗಲಿ.

ಟಿಪ್ಪಣಿ—ಎಲೈ ಪಾರ್ವತೀಪತಿಯೆ ! ಅಂಗವೆಂಬುದು "ತ್ವಂ" ಪದದ ಅರ್ಥ ಜೀವಾತ್ಮನ ವಾಚಕವು. ಲಿಂಗವೆಂಬುದು ತತ್ಪದದ ಅರ್ಥವಾದ ಶಿವನ ವಾಚಕವು. ಸಂಗವೆ "ಅಸಿ" ಪದದ ಅರ್ಥವಾದ ಸಾಮರಸ್ಯದವಾಚಕವು. ಹೀಗೆ "ತತ್ತ್ವಮಸಿ" ಎಂಬ ವಾಕ್ಯದ ಅರ್ಥವೇ ತಾನಾಗಿ ಲಿಂಗಾಂಗಸಾಮರಸ್ಯವೆಂದು ಹೇಳಲ್ಪಡುವ ವಿಶಿಷ್ಟಶಿವಾದ್ವೈತ ಕ್ಕೆ ಬೇರಲ್ಲದ ಭಾವವೆಂಬ ಅನುಗ್ರಹದ ಸ್ವೀಕಾರವು ನನಗೆ ನಿನ್ನ ದಯೆಯಿಂದುಂಟಾಗಲಿ

ಅವತಾರಿಕೆ—ಇಂತು ಶರಣನ ಮಹಾಜ್ಞಾನಮಂ ಪ್ರಾರ್ಥಿಸಿದನಂತರದಲ್ಲಿ ಪುಣ್ಯ ಪುಣ್ಯತೀರ್ಥಂಗಳ ಭ್ರಾಂತಿಯಂ ಶಿವಜ್ಞಾನಕ್ಕೆ ದೂರವೆಂದು ಖಂಡಿಸುತ್ತಿರ್ದಪಂ.—

ಗಿರಿವಾರಾಣಸಿಹೇಮಕೂಟಹಿಮಸೇತುಕ್ಷೇತ್ರತೀರ್ಥಂಗಳಂ |
ಪರಿದೈದಿ ಸ್ವವಿಮೋಹದಿಂ ಸುಕೃತದಾಪೇಕ್ಷಿತ್ವಮಂ ತಾಳ್ದು ಸಂ ||
ಚರಿಸುತ್ತಕ್ಕಟ ಮತ್ತೆ ಮಿಕ್ಕ ನೆಲನೀರೊಳ್ಮಾಳ್ಪ ದುಷ್ಕರ್ಮಮಂ |
ನರರಾಸ್ಥಾನದೊಳಂಜದೇಕೆ ಭವಿಗಳ್ಮಾಳ್ಪರ್ ಶಿವಾವಲ್ಲಭಾ

ಟೀಕೆ—ಭವಿಗಳ್-ಸಂಸಾರಭ್ರಾಂತಿಯುಳ್ಳ, ನರರ್-ಮನುಷ್ಯರು, ಗಿರಿ ತೀರ್ಥಂಗಳಂ-ಗಿರಿ-ಶ್ರೀಗಿರಿಯು, ವಾರಾಣಸಿ-ಕಾಶೀಕ್ಷೇತ್ರವು, ಹೇಮಕೂಟ ಪಾಕ್ಷೇತ್ರವು, ಹಿಮಸೇತು-ರಾಮೇಶ್ವರವೆಂಬ ಕ್ಷೇತ್ರವು, ಇವು ಮೊದಲಾ ಕ್ಷೇತ್ರ-ಕ್ಷೇತ್ರಗಳನ್ನು, ತೀರ್ಥಂಗಳಂ-ಪಾತಾಳಗಂಗೆ, ಭಾಗೀರಥಿ, ತುಂಗ ಧನುಷ್ಕೋಟಿಯೆಂಬ ತೀರ್ಥಂಗಳನ್ನು ಕುರಿತು, ಸ್ವವಿಮೋಹದಿಂ-ತಮ್ಮ ಅಜ್ಞಾ ದಿಂದೆ, ಪರಿದೈದಿ-ಶೀಘ್ರದಿಂದಪೋಗಿ, ಸುಕೃತದ-ಪುಣ್ಯದ, ಅಪೇಕ್ಷಿತ್ವಮಂ-ಅ ಕೆಯನ್ನು, ತಾಳ್ದು—ಉಂಟುಮಾಡಿಕೊಂಡು, ಸಂಚರಿಸುತ್ತೆ—ಎಡೆಯಾಡು ಮತ್ತೆ-ಮರಳಿ, ಮಿಕ್ಕ-ಉಳಿದ, ನೆಲನೀರೊಳ್-ಭೂಮಿಯಜಲದಲ್ಲಿ, ಮಾಳ್ಪ-ಮಾ ಡುವಂಥ, ದುಷ್ಕರ್ಮಮಂ-ದುಷ್ಕೃತವಾದ ವ್ಯಾಪಾರವನ್ನು, ಆಸ್ಥಾನದೊಳ್ ಆ ಕ್ಷೇತ್ರ ತೀರ್ಥಸ್ನಾನದಲ್ಲಿ, ಅಂಜದೆ-ಭಯವಿಲ್ಲದೆ, ಏಕೆಮಾಳ್ಪರ್-ಏಕೆಮಾ ವರೊ ? ಅಕ್ಕಟ-ಅಯ್ಯೋ !

ಟಿಪ್ಪಣಿ—ಸಂಸಾರಬದ್ಧರಾದ ಮನುಷ್ಯರು ಪುಣ್ಯವನ್ನು ಸಂಪಾದಿಸುವೆವೆಂಬ ಕುತೂ ದಿಂದ ಶ್ರೀಗಿರಿ ಕಾಶಿ ಹಂಪೆ ರಾಮಸೇತು ಮೊದಲಾದ ಕ್ಷೇತ್ರಗಳಿಗೂ, ನಾನಾ ತೀರ್ಥಗ

ಬೇಗಬೇಗನೆ ಓಡಿಹೋಗಿ, ಆ ಪುಣ್ಯಸ್ಥಳಗಳಲ್ಲದ ಎಡೆಗಳಲ್ಲಿ ಮಾಡತಕ್ಕ ದುಷ್ಟವಾದ ಕಾರ್ಯಗಳನ್ನು ಅಜ್ಞಾನದಿಂದ ಆಯ್ಯೋ ! ಆ ಪುಣ್ಯಸ್ಥಳಗಳಲ್ಲೇ ಭಯವಿಲ್ಲದೆ ಆದೇಕೆ ಮಾಡುವರು ? ||

ಭರದಿಂ ಪಾವನತೀರ್ಥಮೆಂದುಬಗೆದಂದಾಸರ್ವತೋಯಂಗಳೊ |
ಳ್ನರ ರಾತೀರ್ಥದೊ ಳಾಹ ಮಿಕ್ಕ ಜಲದೊ ಳ್ಮಾಳ್ಪಂತೆ ವಿಣ್ಮೂತ್ರದು ||
ಶ್ಚರಿತೋಚ್ಛಿಷ್ಟಮಲಾಂಗಮಂ ತೊಳೆದು ಪಾಪಂಗೆಯ್ದು ನಿಷ್ಕಾರಣಂ |
ನಿರಯಕ್ಕೇತಕೆ ಪೋಪ ರಯ್ಯೊ ಭವಿಗ ಳ್ಪೇಳಾ ಶಿವಾವಲ್ಲಭಾ ||೭||

ಟೀಕೆ—ಭವಿಗಳ್-ಭವಿಗಳಾದ, ನರರ್-ಮನುಷ್ಯರು; ಸರ್ವತೋಯಂಗಳೊಳ್-ಸಮಸ್ತವಾದ ಉದಕಂಗಳಲ್ಲಿ (ಒಂದುತಾಣದ ಉದಕವನ್ನು), ಭರದಿಂ-ಬೇಗದಿಂದೆ, ಪಾವನತೀರ್ಥಮೆಂದು-ಪುಣ್ಯತೀರ್ಥಮೆಂದು, ಬಗೆದು-ಭಾವಿಸಿ, ಆ ತೀರ್ಥದೊಳ್-ಆ ಜಲದಲ್ಲಿ, ಮಿಕ್ಕಜಲದೊಳ್-ಉಳಿದ ಸಾಮಾನ್ಯಜಲದಲ್ಲಿ, ಮಾಳ್ಪಂತೆ-ಮಾಡುವಂತೆ, ವಿಣ್ಮೂತ್ರದುಶ್ಚರಿತೋಚ್ಛಿಷ್ಟ ಮಲಾಂಗಮಂ-ವಿಣ್ಮೂತ್ರ-ಮಲಮೂತ್ರಗಳಿಂದ, ದುಶ್ಚರಿತ-ಪಾಪವರ್ತನೆಯುಳ್ಳ, ಉಚ್ಛಿಷ್ಟ-ಅಪವಿತ್ರಸ್ವರೂಪವಾದ, ಮಲಾಂಗಮಂ-ಮಲಶರೀರವನ್ನು, ತೊಳೆದು-ಪ್ರಕ್ಷಾಳನಮಂಮಾಡಿ, ಪಾಪಂಗೆಯ್ದು-ಪಾಪಮಂಮಾಡಿ, ನಿಷ್ಕಾರಣಂ-ಕಾರಣವಿಲ್ಲದೆ, ನಿರಯಕ್ಕೆ-ನರಕಕ್ಕೆ, ಏತಕ್ಕೆಪೋಪರ್-ಏತಕ್ಕೆ ಪೋಗುವರು ? ಅಯ್ಯೊ-ಅಕ್ಕಟ ! ಆಹಾ-ಆಶ್ಚರ್ಯವಲಾ ! ||೭||

ಟಿಪ್ಪಣಿ—ಭವಾತ್ಮರಾದ ಜನರು ನೀರುಗಳೊಳಗೆಲ್ಲ ಒಂದೊಂದುಸ್ಥಳದ ನೀರನ್ನು ಪರಿಶುದ್ಧವಾದ ತೀರ್ಥವೆಂದು ಭಾವಿಸಿ, ಮಲಮೂತ್ರ ಸಮೇತವಾದುದರಿಂದ ಅಪವಿತ್ರವಾದ ಮಲದೇಹವನ್ನು ಸಾಮಾನ್ಯಜಲದಲ್ಲಿ ಪ್ರಕ್ಷಾಳನಮಾಡಿಕೊಳ್ಳುವಂತೆ ಆ ತೀರ್ಥದಲ್ಲೂ ತೊಳೆದು ಪಾಪವನ್ನಾಚರಿಸಿ, ನಿಷ್ಕಾರಣವಾಗಿ ನರಕಕ್ಕೆ ಆದೇಕೆ ಹೋಗುವರು ? ಅಯ್ಯೊ ! ಇದಾಶ್ಚರ್ಯ ! ||೭||

ಕ್ಷೇತ್ರಜ್ಞಾನವಿಹೀನ ರಕ್ಕಟ ಮಹೀಭಾಗಂಗಳೊಳ್ಪಾವನಂ |
ಕ್ಷೇತ್ರಂ ತಾನಿದು ಸೇವ್ಯಮೆಂದು ಬಗೆದೊಂದಂ ತಮ್ಮದುರ್ಮೋಹದಿಂ ||
ಮೂತ್ರೋಚ್ಛಿಷ್ಟಪುರೀಷವಿಚ್ಯುತಿಗಳಂ ಮತ್ತಲ್ಲಿಯೇ ಮಾಳ್ಪರಾ |
ಯಾತ್ರಾಶೋಪಹತರ್ಕ ಳಪ್ಪ ಭವಿಗ ಳ್ನೋಡಾ ಶಿವಾವಲ್ಲಭಾ ||೮||

ಟೀಕೆ—ಕ್ಷೇತ್ರಜ್ಞಾನವಿಹೀನರ್-ಕ್ಷೇತ್ರ ವಿಚಾರವಿಲ್ಲದವರಾದ, ಯಾತ್ರಾಶೋಪಹತರ್ಕಳ್-ಯಾತ್ರೆ-ತೀರ್ಥಯಾತ್ರೆಗಳಲ್ಲಿ, ಆಶಾ-ಅಪೇಕ್ಷೆಯಿಂ, ಉಪಹತರ್ಕಳಪ್ಪ-ಕೆಟ್ಟಂಥವರುಗಳಾದ, ಭವಿಗಳ್-ಅಜ್ಞಾನಿಗಳು, ಮಹೀಭಾಗಂಗಳೊಳ್-ಭೂಮಂಡಲದಲ್ಲಿ, ಒಂದಂ-ಒಂದುಸ್ಥಾನವನ್ನು, ಪಾವನಕ್ಷೇತ್ರಂ-ಪುಣ್ಯಕ್ಷೇತ್ರವು, ತಾಂ-ತಾನು, ಇದು-ಇದೀಗ, ಸೇವ್ಯಮೆಂದು-ಸೇವಿಸಲ್ತಕ್ಕುದೆಂದು, ಬಗೆ

ದು-ಭಾವಿಸಿ, ತಮ್ಮ ದುರ್ಮೋಹದಿಂ-ಬೆಂದತಮ್ಮ ಅಜ್ಞಾನದಿಂದೆ, ಮತ್ತಲ್ಲಿ-ಅಲ್ಲಿಯೇ-ಆಕ್ಷೇತ್ರಂಗಳಲ್ಲಿಯೆ, ಮೂತ್ರೋಚ್ಛಿಷ್ಟಪುರೀಷವಿಚ್ಯುತಿಗಳಂ-ಮಲ ಎಂಜಲು ಅಮೇಧ್ಯಗಳ ಬಿಡುವುದನ್ನು, ಮಾಳ್ಪರ್-ಮಾಡುವರು.

ಟಿಪ್ಪಣಿ—ಯಾತ್ರೆಯನ್ನು ಮಾಡಿದರೆ ಪುಣ್ಯಸಂಪಾದನೆಯಾಗುವುದೆಂಬ ಆಶೆಯಿಂದ ಕೆಟ್ಟವರಾದ ಕ್ಷೇತ್ರಸ್ವರೂಪವಿಚಾರವಿಲ್ಲದವರಾದ ಅಜ್ಞಾನಿಗಳು ಭೂಮಿಯಲ್ಲಿ ಒಂದಾನೊಂದು ಸ್ಥಳವನ್ನು ಸೇವ್ಯವಾದ ಪುಣ್ಯಕ್ಷೇತ್ರವೆಂದು ಭಾವಿಸಿ, ಬಳಿಕ ಅಜ್ಞಾನದಿಂದ ಅಂಥಸ್ಥಳದಲ್ಲಿ ಯೇ ಮಲಮೂತ್ರ ಉಚ್ಛಿಷ್ಟಗಳನ್ನು ಬಿಡುವರು, ಅಯ್ಯೊ ! ಶಿವನೆ ! ಈ ಅಜ್ಞಾನವನ್ನು ಏ...

ತೀರ್ಥಕ್ಷೇತ್ರಮ ನಾಹ ಕೀರ್ತಿಸುವ ತನ್ಮಾಹಾತ್ಮ್ಯಮಂ ಕೇಳ್ವಸಾ |
ರಾರ್ಥಗ್ರಾಹಕಸತ್ವದಿಂ ನೆನೆವ ಯಾತ್ರಾರಂಭಮಂ ಮಾಳ್ಪಪು ||
ಣ್ಯಾರ್ಥಿತ್ವಂ ನೆರೆ ಪಾಪಮಾದು ದಕಟಾ ಬಂದಲ್ಲಿ ಮಿಂದುಂಡು ನೈ |
ರರ್ಥಂಮೂತ್ರಪುರೀಷವಿಚ್ಯುತಿಗಳಂ ಮಾಡಲ್ ಶಿವಾವಲ್ಲಭಾ

ಟೀಕೆ—ತೀರ್ಥಕ್ಷೇತ್ರಮಂ—ಪುಣ್ಯತೀರ್ಥಕ್ಷೇತ್ರಂಗಳನ್ನು—ಕೀರ್ತಿಸುವ-ಕೊಂಡಾಡುವ, ತನ್ಮಾಹಾತ್ಮ್ಯಮಂ-ಅವರ ಮಹಿಮೆಯನ್ನು, ಕೇಳ್ವ-ಲಾಲಿಸುವ, ಸಾರಾರ್ಥ ಗ್ರಾಹಕಸತ್ವದಿಂ-ಸಾರ-ಶ್ರೇಷ್ಠವಾದ, ಅರ್ಥಗ್ರಾಹಕಸತ್ವದಿಂ-ಫಲ ವನ್ನು ಗ್ರಹಿಸುವಸಾಮರ್ಥ್ಯದಿಂದೆ, ನೆನೆವ-ಸ್ಮರಿಸುವ, ಯಾತ್ರಾರಂಭಮಂ-ಮಾ ತೀರ್ಥಯಾತ್ರೆಯ ಉಪಕ್ರಮಮಂಮಾಳ್ಪ, ಪುಣ್ಯಾರ್ಥಿತ್ವಂ-ಪುಣ್ಯವಬಯಸುವ ತನವು, ಅಲ್ಲಿ-ಆ ಕ್ಷೇತ್ರಗಳಲ್ಲಿ, ಬಂದು, ಮಿಂದು-ಸ್ನಾನಮಾಡಿ, ಉಂಡು-ಭೋಜನ ಮಂಮಾಡಿ, ನೈರರ್ಥಂ-ವ್ಯರ್ಥವಾಗಿ, ಮೂತ್ರಪುರೀಷವಿಚ್ಯುತಿಗಳಂ-ಮಲಮೂ ತ್ರೋತ್ಸರ್ಗವಂ, ಮಾಡಲ್, ನೆರೆ—ಚೆನ್ನಾಗಿ, ಪಾಪಮಾದುದು-ಪಾಪವಾಯಿತು ಅಕಟ-ಅಯ್ಯೊ ! ಆಹ-ಆಶ್ಚರ್ಯವು !

ಟಿಪ್ಪಣಿ—ಎಲೈ ಪಾರ್ವತೀಪತಿಯೆ, ತೀರ್ಥಕ್ಷೇತ್ರಗಳಿಗೆ ಬಂದು ಅಲ್ಲಿ ಸ್ನಾನಮಾಡಿ ಭುಜಿಸಿ ಮೂತ್ರಪುರೀಷಗಳನ್ನು ವಿಸರ್ಜಿಸಿ ಬಿಟ್ಟರೆ, ತೀರ್ಥಕ್ಷೇತ್ರಗಳ ಮಹಿಮೆಯನ್ನು ಹೊಗಳುವ ... ಗಳ ಮಹತ್ವವನ್ನು ಕೇಳುವ ಅವುಗಳ ಸೇವೆಯ ಶ್ರೇಷ್ಠವಾದ ಫಲವನ್ನು ಗ್ರಹಿಸುವ ಬಳಿಕ ಅವುಗಳನ್ನು ಸ್ಮರಿಸುವ ಕ್ಷೇತ್ರಯಾತ್ರೆಯನ್ನಾರಂಭಿಸುವ ಪುಣ್ಯವನ್ನಪೇಕ್ಷಿಸುವ ತನವು ವ್ಯರ್ಥವಾಗಿ ಪಾಪಮಯವೇ ಆಯಿತು. ಅಯ್ಯೋ ! ಆಶ್ಚರ್ಯ !

ಮಲಮೂತ್ರಕ್ರಿಮಿಮಾಂಸಶೋಣಿತಮಯಾಪೂತಾಂಗಮಂ ಪೂತನಿ |
ರ್ಮಲತೀರ್ಥೋದಕದೊಳ್ ಮುಳುಂಗಿಸಿ ವೃಥಾ ತತ್ತೀರ್ಥಮಂದುಷ್ಟದು |
ರ್ಜಲಮಂ ಮಾಡಿ ವಿಮೋಹದಿಂ ದಕಟ ಪುಣ್ಯಕ್ಕೋಸುಗಂ ಪಾಪಮಂ |
ವಿಲಸದ್ಭಕ್ತಿವಿಶುದ್ಧಿಹೀನಭವಿಗಳ್ ಮಾಳ್ಪರ್ ಶಿವಾವಲ್ಲಭಾ ||

ಟೀಕೆ—ಎಲಸದ್ಭಕ್ತಿವಿಶುದ್ಧಿಹೀನಭವಿಗಳ್-ವಿಲಸತ್-ಒಪ್ಪುತ್ತಿರುವ ಭಕ್ತಿ-ಆತೀರ್ಥಕ್ಷೇತ್ರಂಗಳಭಕ್ತಿಯು, ವಿಶುದ್ಧಿಹೀನ-ಪಾರಿಶುದ್ಧ್ಯವಿಲ್ಲದ, ಭವಿಗಳ್-ಅಸಂಸ್ಕಾರಿಗಳು, ವಿಮೋಹದಿಂದೆ-ಅಜ್ಞಾನದಿಂದೆ, ಮಲಮೂತ್ರಕ್ರಿಮಿಮಾಂಸಶೋಣಿತಮಯಾಪೂತಾಂಗಮಂ-ಮಲಮೂತ್ರಕ್ರಿಮಿ-ಮಲಮೂತ್ರಪುಳುಗಳು, ಮಾಂಸಶೋಣಿತ-ಮಾಂಸರುಧಿರ ಇವುಗಳಿಂದ, ಮಯ-ಪ್ರಚುರವಾದ, ಅಪೂತಾಂಗಮಂ-ಅಪವಿತ್ರಶರೀರವನ್ನು, ಪೂತನಿರ್ಮಳತೀರ್ಥೋದಕದೊಳ್-ಪೂತ-ಪವಿತ್ರವಾದ, ನಿರ್ಮಳ-ಸ್ವಚ್ಛವಾದ, ತೀರ್ಥೋದಕದೊಳ್-ಪುಣ್ಯತೀರ್ಥೋದಕದಮಧ್ಯದಲ್ಲಿ, ಮುಳುಂಗಿಸಿ-ಆಳಿಸಿ, ವೃಥಾ-ವ್ಯರ್ಥವಾಗಿ, ತತ್ತೀರ್ಥಮಂ-ಆತೀರ್ಥವನ್ನು, ದುಷ್ಟದುರ್ಜಲಮಂ-ಅಶುದ್ಧಜಲಮಂ, ಮಾಡಿ, ಪುಣ್ಯಕ್ಕೋಸುಗಂ-ಪುಣ್ಯಕ್ಕೋಸ್ಕರವಾಗಿ, ಪಾಪಮಂ-ಪಾಪಕೃತ್ಯವನ್ನು, ಮಾಳ್ಪರ್-ಮಾಡುತ್ತಿಹರು, ಅಕಟ-ಅಯ್ಯೋ !

ಟಿಪ್ಪಣಿ—ಎಲೈ ಸಾಂಬನೆ ! ನಿರ್ಮಲವಾದ ಭಕ್ತಿಯಿಲ್ಲದ ಭವಿಗಳು ಹೇಲು ಉಚ್ಚೆ ಹುಳು ಮಾಂಸ ರಕ್ತ ಇವುಗಳ ಮಯವಾಗಿ ಮಲಿನವಾದ ಶರೀರವನ್ನು ಪರಿಶುದ್ಧವಾದ ತೀರ್ಥಜಲದಲ್ಲಿ ಮುಳುಗಿಸಿ, ಅಯ್ಯೋ ! ವ್ಯರ್ಥವಾಗಿ ಆತೀರ್ಥದ ನೀರನ್ನು ಅಶುದ್ಧಗೊಳಿಸಿ, ಈ ಕಾರಣದಿಂದ ತಾವು ಪುಣ್ಯವನ್ನಾರ್ಜಿಸುವುದಕ್ಕೆ ಹೋಗಿ ಅಜ್ಞಾನದಿಂದ ಪಾಪವನ್ನು ಆಚರಿಸುತ್ತಿರುವರು. ||೧೦||

ಮೊದಲೊಳ್ಗುಹ್ಯಗುದಂಗಳಂ ತೊಳೆದು ಮತ್ತಾತೀರ್ಥಮಂಕಾಲ್ಗಳಿಂ |
ದೊದೆದಾತೀರ್ಥದೊಳಾಹಪೊಕ್ಕಕಟ ಮತ್ತಾತೀರ್ಥದಿಂಮೋರೆಯಂ ||
ಸದೆದಾತೀರ್ಥಮನಾಹ ಮುಕ್ಕುಳಿಸಿ ಮತ್ತಾತೀರ್ಥಮಂ ಮಿಂದು ಲೋ |
ಕದ ಮರ್ತ್ಯರ್ ಕೃತಪುಣ್ಯರಪ್ಪುದಿದು ತಾಂಚೋದ್ಯಂ ಶಿವಾವಲ್ಲಭಾ ||೧೧||

ಟೀಕೆ—ಲೋಕದಮರ್ತ್ಯರ್-ಲೌಕಿಕಮನುಷ್ಯರು, ಮೊದಲೊಳ್-ಮೊದಲ್ಲಲ್ಲಿ, ಗುಹ್ಯಗುದಂಗಳಂ-ಪಾಯೂಪಸ್ಥಂಗಳಂ, ತೊಳೆದು-ಪ್ರಕ್ಷಾಳನಮಂಮಾಡಿ, ಮತ್ತೆ-ಮರಳಿ, ಆತೀರ್ಥಮಂ-ಆತೀರ್ಥವನ್ನು, ಕಾಲ್ಗಳಿಂ-ಕಾಲೆರಡರಿಂದೆ, ಒದೆದು-ತುಳಿದು, ಆತೀರ್ಥದೊಳ್-ಆತೀರ್ಥದಲ್ಲಿ, ಪೊಕ್ಕು-ಪೊಕ್ಕವರುಗಳಾಗಿ, ಮತ್ತೆ-ಮರಳಿ, ಆತೀರ್ಥದಿಂ-ಆತೀರ್ಥದಿಂದ, ಮೋರೆಯಂ-ಮುಖವನ್ನು, ಸದೆದು-ಹೊಡೆದುಕೊಂಡು, ಆತೀರ್ಥಮಂ-ಆತೀರ್ಥವನ್ನು, ಮುಕ್ಕುಳಿಸಿ-ಗಂಡೂಷವಂಮಾಡಿ, ಮತ್ತೆ-ಮರಳಿ, ಆತೀರ್ಥಮಂ-ಆತೀರ್ಥದಲ್ಲಿ, ಮಿಂದು-ಸ್ನಾನವಂಮಾಡಿ, ಕೃತಪುಣ್ಯರಪ್ಪುದು-ಮಾಡಲ್ಪಟ್ಟಸುಕೃತವನುಳ್ಳವರಾಗುವುದು, ಇದುತಾಂ-ಇದುತಾನು, ಚೋದ್ಯಂ-ಚೋದ್ಯವು, ಅಕಟ-ಆಶ್ಚರ್ಯವು ! ಆಹ-ಆಶ್ಚರ್ಯವು !! ||೧೧||

ಟಿಪ್ಪಣಿ—ಶಿವನೆ! ಲೋಕದ ಜನರು ಮೊದಲು ಗುಹ್ಯಗುದಸ್ಥಾನಗಳನ್ನು ತೀರ್ಥಜಲದಿಂದ ತೊಳೆದು, ಆ ತೀರ್ಥವನ್ನೇ ಕಾಲುಗಳಿಂದ ತುಳಿದು, ಆ ತೀರ್ಥವನ್ನೇ ಹೊಕ್ಕು, ಅಯ್ಯೋ !

ಬಳಿಕ ಆ ತೀರ್ಥವನ್ನೇ ಮುಖಕ್ಕೆರಚಿಕೊಂಡು, ಆ ತೀರ್ಥವನ್ನೇ ಮುಕ್ಕುಳಿಸಿ, ಆ ತೀರ್ಥ ಮುಳುಗಿ ಪುಣ್ಯಸಂಪಾದನೆಯನ್ನು ಮಾಡುವುದೀಗ ಪರಮಾಶ್ಚರ್ಯವು.

ಸಲೆ ತೀರ್ಥಾರ್ಥಿ ಯೆನಿಪ್ಪವಂ ಪರಿದುಬಂದಾಕ್ಷೇತ್ರಮಂ ಮೆಟ್ಟದಾ |
ಜಲಮಂ ಮುಟ್ಟದೆ ಶೌಚಕರ್ಮಮುಮ ನೇನಂ ಮಾಡದಾಸ್ಥಾನದೊ ||
ಳ್ನೆಲೆಗೊಂಡಿರ್ದ್ದ ಕೃತಾರ್ಥ ನಪ್ಪೊಡದು ತೀರ್ಥಕ್ಷೇತ್ರ ಯಾತ್ರಾಮಹಾ
ಫಲ ಮಿಂತಲ್ಲದೆ ಬೇರೆ ತತ್ಫಲ ಮದುಂಟೇ ಪೇಳ್ಶಿವಾವಲ್ಲಭಾ ||

ಟೀಕೆ—ತೀರ್ಥಾರ್ಥಿಯೆನಿಪ್ಪವಂ-ತೀರ್ಥಂಗಳಲ್ಲಿ ವಾಂಛೆಯುಳ್ಳವನು ತನು, ಸಲೆ-ಚೆನ್ನಾಗಿ, ಪರಿದುಬಂದು-ಬೇಗದಿಂಬಂದು, ಆಕ್ಷೇತ್ರಮಂ-ಆ ಕ್ಷೇತ್ರವನ್ನು, ಮೆಟ್ಟದೆ-ತುಳಿಯದೆ, ಆಜಲಮಂ-ಆ ಉದಕವನ್ನು, ಮುಟ್ಟದೆ-ಸ್ಪರ್ಶಿಸದೆ, ಶೌಚಕರ್ಮಮುಮಂಏನಂ-ಗುದಗುಹ್ಯಪ್ರಕ್ಷಾಲನವನೇನನ್ನೂ ಮಾಡದೆ, ಆಸ್ಥಾನದೊಳ್-ಆ ಸಮೀಪಸ್ಥಳದಲ್ಲಿ, ನೆಲೆಗೊಂಡಿರ್ದು-ವಾಸವಾಗಿರ್ದು, ಕೃತಾರ್ಥನಪ್ಪೊಡೆ-ಸುಕೃತಿಯಪ್ಪೊಡೆ, ಇದು-ಇದುತಾನು, ತೀರ್ಥಕ್ಷೇತ್ರಯಾತ್ರಾಮಹಾಫಲಂ-ಪುಣ್ಯಕ್ಷೇತ್ರ ಪುಣ್ಯಯಾತ್ರೆಗಳ ಅಧಿಕವಾದ ಫಲವು, ಇಂತಲ್ಲದೆ-ಹೀಗಲ್ಲದೆ ಬೇರೆ-ಮತ್ತೊಂದು, ತತ್ಫಲಂ-ಅವರ ಫಲವು, ಅದು-ಅದುತಾನು, ಉಂಟೇ-ಉಂಟೇ ಉಂಟೆಹೇಳು ? ಇಲ್ಲವೆಂಬುದರ್ಥವು ||

ಟಿಪ್ಪಣಿ—ಎಲೈ ಶಂಕರನೆ! ತೀರ್ಥಕ್ಷೇತ್ರಯಾತ್ರೆಯನ್ನು ಮಾಡಬೇಕೆಂದಪೇಕ್ಷೆಯುಳ್ಳವನು ಓಡಿಬಂದು ಆ ಕ್ಷೇತ್ರವನ್ನು ಕಾಲಿನಿಂದ ತುಳಿಯದೆ ತೀರ್ಥಜಲವನ್ನು ಮುಟ್ಟದೆ ವಾಸವಾಗಿದ್ದು ಪುಣ್ಯಸಂಪಾದನೆಯನ್ನು ಮಾಡಿದರೆ, ಅದೀಗ ತೀರ್ಥಕ್ಷೇತ್ರಯಾತ್ರೆಯ ಫಲವೆನ್ನಿಸಿಕೊಳ್ಳುವುದು. ಹೀಗಲ್ಲದೆ ಬೇರೆ ತೆರನಾಗಿ ಮಾಡಿದರೆ ಅದರಿಂದ ಫಲವುಂಟೆ? ಹೇಳು

ಪಂಚಕ್ರೋಶಸಮಾಂತರಾವಳಯದೊ ಳ್ತೀರ್ಥಾರ್ಥಿಯಾಗಿರ್ಪ ಪು |
ಣ್ಯಾಂಚತ್ಸಚ್ಚರಿತಂ ಪುರೀಷವಿಧಿಮೂತ್ರೋತ್ಸರ್ಜನೋಚ್ಛಿಷ್ಟ ಕೃ ||
ತ್ಸಂಚಾರಂಗಳ ನೆಲ್ಲಮಂತ್ಯಜಿಸಿ ತತ್‌ಕ್ಷೇತ್ರಾಧಿವಾಸಕ್ರಿಯಾ |
ಚಂಚತ್ಸೌಖ್ಯಮ ನೆಯ್ದ ಲಾತನೆ ಕೃತಾರ್ಥಂ ಕೇಳ್ ಶಿವಾವಲ್ಲಭಾ ||

ಟೀಕೆ—ತೀರ್ಥಾರ್ಥಿಯಾಗಿರ್ಪ-ಪುಣ್ಯತೀರ್ಥಂಗಳಲ್ಲಿ ಬಯಕೆಯುಳ್ಳವನಾಗಿರ್ಪ, ಪುಣ್ಯಾಂಚತ್ಸಚ್ಚರಿತಂ-ಪುಣ್ಯಾಂಚತ್-ಪುಣ್ಯದಿಂದೊಪ್ಪುತ್ತಿರ್ಪ, ಸಚ್ಚರಿತಂ-ಒಳ್ಳೆತ್ತಾದ ಚರಿತ್ರವುಳ್ಳಾತನು, ಪಂಚಕ್ರೋಶಸಮಾಂತರಾವಳಯದೊಳ್-ಐದುಹರದಾರಿಯಷ್ಟರೊಳಗೆ, ಪುರೀಷವಿಧಿಮೂತ್ರೋತ್ಸರ್ಜನೋಚ್ಛಿಷ್ಟಕೃತ್ಸಂಚಾರಂಗಳಂಎಲ್ಲಮಂ-ಪುರೀಷವಿಧಿ-ಮಲವಿಸರ್ಜನವು, ಮೂತ್ರೋತ್ಸರ್ಜನ-ಮೂತ್ರಬಿಡುವುದು, ಉಚ್ಛಿಷ್ಟಕೃತ್-ಎಂಜಲನ್ನು ಮಾಡುವುದು, ಸಂಚಾರಂಗಳನ್ನೆಲ್ಲ

ಸಂಚಾರಮೊದಲಾದ ಇವುಗಳೆಲ್ಲವನ್ನೂ, ತ್ಯಜಿಸಿ-ಬಿಟ್ಟು, ತತ್‌ಕ್ಷೇತ್ರಾಧಿವಾಸಕ್ರಿಯಾಚಂಚತ್ಸೌಖ್ಯಮಂ-ತತ್‌ಕ್ಷೇತ್ರ-ಆ ಕ್ಷೇತ್ರದಲ್ಲಿ, ಅಧಿವಾಸಕ್ರಿಯಾ-ಮನೆಮಾಡಿಕೊಂಡಿರ್ಪ ವ್ಯಾಪಾರದಲ್ಲಿ, ಚಂಚತ್-ಒಪ್ಪುತ್ತಿರ್ಪ, ಸೌಖ್ಯಮಂ-ಸೌಖ್ಯವನ್ನು, ಎಯ್ದಲ್-ಹೊಂದಲಾಗಿ, ಆತನೆ-ಹಾಂಗಿರ್ಪಾತನೆ, ಕೃತಾರ್ಥಂಕೇಳ್-ಸುಕೃತಿಯಲಾ ||೧೩||

ಟಿಪ್ಪಣಿ—ತೀರ್ಥಸೇವೆಯನ್ನಪೇಕ್ಷಿಸುವ ಸುಕೃತಿಯಾದ ಒಳ್ಳೆಯ ನಡೆಯುಳ್ಳ ಮನುಷ್ಯನು, ಕಾಶೀಕ್ಷೇತ್ರದ ಪಂಚಕ್ರೋಶ (ಐದುಹರದಾರಿ) ಯಗಲದ ಪುಣ್ಯಪ್ರದೇಶದೊಳಗೆ ಮಲಮೂತ್ರಗಳ ವಿಸರ್ಜನೆ-ಎಂಜಲನ್ನುಗುಳುವುದು-ತಿರುಗಾಟ-ಇವುಗಳೊಂದನ್ನೂ ಮಾಡದೆ, ಆ ಕ್ಷೇತ್ರದಲ್ಲಿ ವಾಸಮಾಡಿಕೊಂಡಿರುವ ಸೌಖ್ಯವನ್ನು ಮಾತ್ರ ಅನುಭವಿಸುವವನಾದರೆ ಆತನೇ ಧನ್ಯನು ||೧೩||

ಗುರು ದೈವಂ ವರಪುಣ್ಯತೀರ್ಥ ಮಮಲಕ್ಷೇತ್ರಂ ಸಮಾನಂ ಗಡಾ |
ಗುರುವಂ ದೈವಮ ನಾಹ ಕಾ ಲ್ಮರೆದು ಸೋಂಕ ಲ್ಪಾಪ ಮೆಂಬಾಗಳಾ ||
ಗುರುದೈವಕ್ಕೆಣೆಯಾದ ತೀರ್ಥಪರಮಕ್ಷೇತ್ರಂಗಳಂ ಮೆಟ್ಟುವಾ |
ನರರ್ಗಿನ್ನೆಲ್ಲಿಯ ಮುಕ್ತಿ ಭಕ್ತಿರಹಿತ ರ್ಗಯ್ಯೋ ಶಿವಾವಲ್ಲಭಾ ||೧೪||

ಟೀಕೆ—ಗುರು-ಗುರುವು, ದೈವಂ-ದೈವವು, ವರಪುಣ್ಯತೀರ್ಥಂ-ಶ್ರೇಷ್ಠವಾದ ಪುಣ್ಯತೀರ್ಥವು, ಅಮಲಕ್ಷೇತ್ರಂ-ನಿರ್ಮಲಕ್ಷೇತ್ರವು, ಸಮಾನಂಗಡಾ-ಸಮಾನವಲ್ಲವೆ ? ಗುರುವಂ-ಗುರುವನ್ನು, ದೈವಮಂ-ತನ್ನ ಇಷ್ಟದೈವವನ್ನು, ಕಾಲ್-ಪಾದವು, ಮರೆದು-ಎಚ್ಚರುದಪ್ಪಿ, ಸೋಂಕಲ್-ತಾಗಲಾಗಿ, ಪಾಪಮೆಂಬಾಗಳ್-ಪಾಪಬಂದೀತೆಂದು ಹೇಳುವಲ್ಲಿ, ಆಗುರುದೈವಕ್ಕೆ-ಆ ಗುರುದೈವಗಳೆರಡಕ್ಕೆಯೂ, ಎಣೆಯಾದ-ಸಮಾನವಾದ, ತೀರ್ಥಪರಮಕ್ಷೇತ್ರಂಗಳಂ-ಉತ್ಕೃಷ್ಟವಾದ ತೀರ್ಥಕ್ಷೇತ್ರಂಗಳನ್ನು, ಮೆಟ್ಟುವ-ತುಳಿವ, ಭಕ್ತಿರಹಿತರ್ಗೆ-ವಿಶ್ವಾಸಹೀನರಾದ, ಆನರರ್ಗೆ-ಆ ಮನುಷ್ಯರ್ಗೆ, ಇನ್ನೆಲ್ಲಿಯಮುಕ್ತಿ-ಇನ್ನೆಲ್ಲಿಯಮೋಕ್ಷವು ? ಅಯ್ಯೋ-ಅಕಟಾ, ಆಹಾ-ಆಶ್ಚರ್ಯವು ||೧೪||

ಟಿಪ್ಪಣಿ—ಗುರುವೂ, ದೈವವೂ, ಪುಣ್ಯತೀರ್ಥವೂ, ಕ್ಷೇತ್ರವೂ ಸೇವ್ಯವಾದ ಕಾರಣ, ಎಲ್ಲವೂ ಸಮಾನವೇತಾನೇ ? ಹೀಗಿರುವಲ್ಲಿ ಗುರುವನ್ನೂ, ದೈವವನ್ನೂ ಅಕಸ್ಮಾತ್ತು ಎಚ್ಚರುದಪ್ಪಿ ಕಾಲು ಸೋಂಕಿದರೆ, ಪಾಪವುಂಟಾಗುವುದೆಂದು ಭಾವಿಸುವಾಗ, ಅಂತಹ ಗುರುದೈವಗಳಿಗೆ ಸಮಾನವಾದ ಪುಣ್ಯತೀರ್ಥಕ್ಷೇತ್ರಗಳನ್ನು ಮನಃಪೂರ್ವಕವಾಗಿ ಕಾಲಿನಿಂದ ತುಳಿಯುವ ಭಕ್ತಿರಹಿತರಾದ ಮನುಷ್ಯರಿಗೆ ಇನ್ನು ಮೋಕ್ಷವೆಲ್ಲಿ ದೊರಕೊಳ್ಳುವುದು ? ಅಯ್ಯೋ ! ಇದಾಶ್ಚರ್ಯ. ||೧೪||

ಅಕಟಾ ಲಿಂಗಮ ನೀಕ್ಷಿಪೊಂದುಭರದಿಂ ತಲ್ಲಿಂಗಮಂ ಪ್ರೇಮದಿಂ |
ಸ್ವಕಮಸ್ತಸ್ಥಲದಲ್ಲಿ ತಾಳ್ದಗಿರಿಯಂ ಲಿಂಗಾಂಗಿಯಂ ಭಕ್ತನಂ ||

ವಿಕಳಾತ್ಮರ್ ಕೆಡೆಮೆಟ್ಟಿ ಬಂದಡರಿ ನೋಡಲ್ಮುಕ್ತರೇನಪ್ಪರೇ |
ಪ್ರಕಟಜ್ಞಾನವಿಶಿಷ್ಟಭಕ್ತಿರಹಿತರ್ನೋಡಾ ಶಿವಾವಲ್ಲಭಾ

ಟೀಕೆ—ಪ್ರಕಟಜ್ಞಾನವಿಶಿಷ್ಟಭಕ್ತಿರಹಿತರ್-ಪ್ರಕಟಜ್ಞಾನ-ಪ್ರಸಿದ್ಧ ಜ್ಞಾನವೂ, ವಿಶಿಷ್ಟಭಕ್ತಿ-ವಿಶೇಷವಾದ ಭಕ್ತಿಯೂ, ರಹಿತರ್-ಇಲ್ಲದವರಾದ ಕಳಾತ್ಮರ್-ಅಜ್ಞಾನಿಮನುಜರು, ಲಿಂಗಮಂ-ಲಿಂಗವನ್ನು, ಈಕ್ಷಿಪ-ನೋಡ ಒಂದುಭರದಿಂ-ಒಂದು ಕುತೂಹಲದಿಂದ, ತಲ್ಲಿಂಗಮಂ-ಆ ಲಿಂಗವನ್ನು, ಪ್ರೀ ದಿಂ-ಸ್ನೇಹದಿಂದ, ಸ್ವಕಮಸ್ತಸ್ಥಲದಲ್ಲಿ-ತನ್ನ ಸಂಬಂಧವಾದ ಶಿರಸ್ಸಿನಲ್ಲಿ, ಧ ಧರಿಸಿದಂಥ, ಗಿರಿಯಂ-ಪರ್ವತಮುನೀಶ್ವರನೆಂಬ, ಲಿಂಗಾಂಗಿಯಂ-ಲಿಂಗಸ ಯಾದ, ಭಕ್ತನಂ-ಶಿವಭಕ್ತನನ್ನು, ಕೆಡೆಮೆಟ್ಟಿಬಂದು-ತುಳಿದುಬಂದು, ಅಡ ನೋಡಲ್-ನೋಡಲಾಗಿ, ಮುಕ್ತರ್ಅಪ್ಪರೇಂ-ಮುಕ್ತರಾಗುವರೇನು ? ಅಸ ದರ್ಥಂ. ನೋಡಾ-ಎಲೆಶಿವನೇ ನೋಡು.

ಟಿಪ್ಪಣಿ—ಎಲೈ ಶಿವನೆ ! ಪ್ರಸಿದ್ಧವಾದ ಶಿವಭಕ್ತಿ ಜ್ಞಾನಗಳಿಲ್ಲದ ಅಜ್ಞಾನಿಮನು ಪರ್ವತದ ಮೇಲಿರುವ ಲಿಂಗವನ್ನು ದರ್ಶನ ಮಾಡಬೇಕೆಂಬ ಕುತೂಹಲದಿಂದ, ಆಂತಹ ವನ್ನು ಪ್ರೀತಿಯಿಂದ ತನ್ನ ತಲೆಯಮೇಲೆ ಧರಿಸಿಕೊಂಡಿರುವಕಾರಣ ಲಿಂಗಾಂಗಿಭಕ್ತನಾಗಿ ಪರ್ವತವನ್ನು ಕಾಲಿನಿಂದ ತುಳಿದುಕೊಂಡುಬಂದು, ಲಿಂಗದರ್ಶನವನ್ನು ಮಾಡಿದರೆ, ಅವರು ಕ್ಷವನ್ನು ಪಡೆಯುವರೆ ? ಅವರ ಅವಿಚಾರವನ್ನು ನೋಡು.

ಲಿಂಗಕ್ಕಾಶ್ರಯಮಾದ ಪರ್ವತಮೆ ಲಿಂಗಂ ಲಿಂಗದಿಂದಂ ಘನಂ |
ಲಿಂಗಂ ತನ್ನೊಳಡಂಗಿ ತನ್ನ ಬಹುಳತ್ವಂ ತೋರ್ಪ ತತ್ಕಾರಣಂ ||
ಲಿಂಗಾಲೋಕನಕಾಂಕ್ಷಿಗಳ್ಬರಿದೆ ಭಕ್ತಿಜ್ಞಾನಯೋಗಕ್ರಿಯಾ |
ಲಿಂಗಾಲೋಕನ ಮಿಲ್ಲದೇಕೆ ಬಳಲ್ವ ರ್ಪೇಳಾ ಶಿವಾವಲ್ಲಭಾ

ಟೀಕೆ—ಲಿಂಗಂ-ಶಿವಲಿಂಗವು, ತನ್ನೊಳ್-ತನ್ನಲ್ಲಿ, ಅಡಂಗಿ-ಸಂಬಂಧ ತನ್ನ, ಬಹುಳತ್ವಂ-ಪೆರ್ಚುಗೆಯು, ತೋರ್ಪ-ತೋರುವ, ತತ್ಕಾರಣಂ-ಆದ ವಾಗಿ, ಲಿಂಗಕ್ಕೆ-ಶಿವಲಿಂಗಕ್ಕೆ, ಆಶ್ರಯಮಾದ-ಆಧಾರಮಾದ, ಪರ್ವತಮೆ ಗಿರಿಯೆ, ಲಿಂಗಂ-ಶಿವಲಿಂಗವು, ಲಿಂಗದಿಂದಂ-ಆ ಶಿವಲಿಂಗಕ್ಕಿಂದೆಯೂ, ಘ ಹೆಗ್ಗಳವು, ಲಿಂಗಾಲೋಕನಕಾಂಕ್ಷಿಗಳ್-ಲಿಂಗವನೋಡಬೇಕೆಂಬ ವಾಂಛೆ ವರುಗಳು, ಭಕ್ತಿಜ್ಞಾನಯೋಗಕ್ರಿಯಾಲಿಂಗಾಲೋಕನಂ-ಶಿವಭಕ್ತಿ ಶಿವಜ್ಞಾ ಯೋಗದ ಕ್ರಿಯೆಯಿಂದ ಲಿಂಗವಂ ನೋಡುವುದು, ಇಲ್ಲದೆ, ಬರಿದೆ-ವ್ಯರ್ಥ ಏಕೆ ಬಳಲ್ವರ್-ಏತಕ್ಕೆ ಆಯಾಸಗೊಳ್ಳುತ್ತಿರುವರು ?

ಟಿಪ್ಪಣಿ—ಎಲೈ ಪಾರ್ವತೀಪತಿಯೆ ಆ ಪರ್ವತದಲ್ಲಿ ಶಿವಲಿಂಗದ ಸಂಗವುಂಟಾಗಿ, ಅದರ ಮಹತ್ತ್ವವು ಹೆಗ್ಗಳವಾಗಿರುವ ಕಾರಣ, ಲಿಂಗವನ್ನು ಹೊತ್ತಿರುವ ಪರ್ವತವೇ ಶಿವಲಿಂಗವೂ, ಮತ್ತ ಶಿವಲಿಂಗಕ್ಕಿಂತ ಮಿಗಿಲಾದುದೂ ಆಗಿರುವುದು. ಪರ್ವತದ ಮೇಲಣ ಲಿಂಗವನ್ನು ನೋಡಬೇಕೆಂಬಾ ಸೆಯುಳ್ಳ ಜನರು, ಶಿವಭಕ್ತಿ-ಶಿವಜ್ಞಾನ-ಶಿವಯೋಗಕ್ಕೆ ದೂರವಾಗದ ಆಚರಣೆಯಿಂದ ಶಿವಲಿಂಗದರ್ಶನಮಾಡುವುದನ್ನು ಬಿಟ್ಟು, ವ್ಯರ್ಥವಾಗಿ ಅದೇತಕ್ಕೆ ಆಯಾಸಪಡುವರು ? ಹೇಳು. ||೧೬||

ಶಿವಭಕ್ತಂ ಶಿವಲಿಂಗಮಂ ನಿಜಶಿಖಾಗ್ರಸ್ಥಾನದೊ ಳ್ತಾಳ್ದೊಡಾ |
ಶಿವಲಿಂಗೇಕ್ಷಣಕಾಂಕ್ಷೆಯಿಂ ದಕಟ ಬಂದಾಭಕ್ತನಂ ಮೆಟ್ಟಿನೋ ||
ಡುವ ಮೋಕ್ಷಾರ್ಥಿಗಳುಂಟೆ ಲಿಂಗವು ನಿದಾವಶ್ರದ್ಧೆ ಸದ್ಭಕ್ತನೇ |
ಶಿವನೆಂದೀಕ್ಷಿಸಿ ಭಕ್ತಿಯಿಂ ನಮಿಸ ರೀಮೂಢ ರ್ಶಿವಾವಲ್ಲಭಾ ||೧೭||

ಟೀಕೆ—ಈ ಮೂಢರ್-ಇಂತಪ್ಪ ಅಜ್ಞಾನಿಗಳು, ಶಿವಭಕ್ತಂ-ಪರ್ವತಮುನೀಶ್ವರನಾದ ಶಿವಭಕ್ತನು, ನಿಜಶಿಖಾಗ್ರಸ್ಥಾನದೊಳ್-ತನ್ನ ಶಿಖಾಗ್ರದಲ್ಲಿ, ಶಿವಲಿಂಗಮಂ-ಶಿವಲಿಂಗವನ್ನು, ತಾಳ್ದೊಡೆ-ಧರಿಸಿದೊಡೆ, ಆ ಶಿವಲಿಂಗೇಕ್ಷಣಕಾಂಕ್ಷೆಯಿಂದೆ-ಆ ಶಿವಲಿಂಗವ ನೋಡುವ ವಾಂಛೆಯಿಂದೆ, ಬಂದು-ನಡೆದುಬಂದು, ಆ ಭಕ್ತನಂ-ಆ ಪರ್ವತಮುನೀಶ್ವರನನ್ನು, ಮೆಟ್ಟಿ-ತುಳಿದು, ಲಿಂಗಮಂ-ಶಿವಲಿಂಗವನ್ನು, ನೋಡುವ-ಈಕ್ಷಿಸುವ, ಮೋಕ್ಷಾರ್ಥಿಗಳುಂಟೆ-ಮೋಕ್ಷಕಾಮಿಗಳುಂಟೆ? ಇದಾವಶ್ರದ್ಧೆ-ಇದಾವ ವಿಶ್ವಾಸವು? ಸದ್ಭಕ್ತನೇ-ಲಿಂಗಾಂಗಸಂಬಂಧವನುಳ್ಳ ಶಿವಭಕ್ತನೇ, ಶಿವನೆಂದು-ಸಾಕ್ಷಾತ್ಪರಮೇಶ್ವರನೆಂದು, ಈಕ್ಷಿಸಿ-ನೋಡಿ, ಭಕ್ತಿಯಿಂದೆ-ಭಕ್ತಿಪುರಸ್ಸರವಾಗಿ, ನಮಿಸರ್-ನಮಸ್ಕಾರವಂ ಮಾಡರು, ಅಕಟ-ಅಯ್ಯೋ! ||೧೭||

ಟಿಪ್ಪಣಿ—ಶಿವನೆ! ಶಿವಭಕ್ತನಾದವನು ಶಿವಲಿಂಗವನ್ನು ತನ್ನ ಶಿಖಾಸ್ಥಾನದಲ್ಲಿ ಧರಿಸಿರಲಾಗಿ, ಆ ಶಿವಲಿಂಗವನ್ನು ನೋಡಬೇಕೆಂಬ ಕುತೂಹಲದಿಂದ ಬಂದು, ಆ ಲಿಂಗಧಾರಿಯಾದ ಭಕ್ತನನ್ನು ತುಳಿದು, ಲಿಂಗವನ್ನು ನೋಡುವ ಮೋಕ್ಷಾಪೇಕ್ಷಿಗಳಿರಬಹುದೆ? ಅಯ್ಯೋ! ಇದಾವ ತೆರದ ವಿಶ್ವಾಸ? ಈ ಅಜ್ಞರುಗಳು ಲಿಂಗಾಂಗಸಂಗಿಯಾದ ಭಕ್ತನನ್ನೇ ಶಿವನೆಂದು ನೋಡಿ, ಅವನಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡರು. ||೧೭||

ಶರಣಂ ಶಾಂಭವಯೋಗಿ ಯಿರ್ದ್ದ ನೆಲನೇ ಕ್ಷೇತ್ರಂ ಪವಿತ್ರಂಪರಂ |
ಭರದಿಂ ದೇರಿದ ಬೆಟ್ಟಮೇ ಘನತರಂ ಶ್ರೀಪರ್ವತಂ ಸ್ವೇಚ್ಛೆಯಿಂ ||
ದಿರದಾಕ್ರೀಡಿಸ ಲೆಂದು ಪೊಕ್ಕ ಜಲಮೇ ತೀರ್ಥಂ ಮಹಾಪಾವನಂ |
ನಿರುತಂ ಲೀಲೆಯೊ ಳೊಲ್ದು ಮಾಡಿದುದೆ ತಾಂ ದೈವಂಶಿವಾವಲ್ಲಭಾ ||೧೮||

ಟೀಕೆ—ಶಾಂಭವಯೋಗಿ-ಶಿವಯೋಗಿಯಾದ, ಶರಣಂ-ಶಿವಶರಣನು, ಇರ್ದ ನೆಲನೇ-ಇದ್ದಂಥಭೂಮಿಯೇ, ಪರಂ-ಮಿಗಿಲಾಗಿ, ಪವಿತ್ರಂ-ಪವಿತ್ರವಾದ, ಕ್ಷೇತ್ರಂ-ಕ್ಷೇತ್ರವು, ಭರದಿಂದೆ-ತೀವ್ರದಿಂದೆ, ಏರಿದ-ಅಡರ್ದ, ಬೆಟ್ಟಮೆ-ಗಿರಯೆ, ಘನತರ

ಶ್ರೀಪರ್ವತಂ-ದೊಡ್ಡಿತ್ತಾದ ಶ್ರೀಗಿರಿಯು, ಸ್ವೇಚ್ಛೆಯಿಂದೆ-ತನ್ನಿಚ್ಛೆಯಿಂದೆ, ಬಿಡದೆ, ಆಕ್ರೀಡಿಸಲೆಂದು-ವಿಹಾರಮಂಮಾಡಬೇಕೆಂದು, ಪೊಕ್ಕ-ಪೊಕ್ಕಂ ಮೇ-ಉದಕವೇ, ಮಹಾಪಾವನಂ-ಅತ್ಯಂತಪವಿತ್ರವಾದ, ತೀರ್ಥಂ-ಗಂಗಾ ರ್ಥವು ನಿರುತಂ-ನಿಶ್ಚಯದಿಂದೆ, ಲೀಲೆಯೊಳ್-ವಿಲಾಸದಲ್ಲಿ, ಒಲ್ದು-ಪ್ರೀ ಮಾಡಿದುದೆ, ಅರ್ಚನೆಯನ್ನು ಮಾಡಿದುದೇ, ತಾಂ-ತಾನು, ದೈವಂ-ದೈವವು

ಟಿಪ್ಪಣಿ—ಎಲೈ ಉಮಾಕಾಂತನೆ ! ಶಿವಯೋಗಿಯು ವಾಸವಾಗಿರುವ ಭೂಮಿಯೇ ಪವಿತ್ರವಾದ ಕ್ಷೇತ್ರವು. ಅಂಥ ಶಿವಯೋಗಿಯು ಹತ್ತಿದ ಬೆಟ್ಟವೇ ಶ್ರೇಷ್ಠವಾದ ಶ್ರೀ ಆತನು ಮನಬಂದಂತೆ ವಿಹರಿಸಬೇಕೆಂದು ಪ್ರವೇಶಿಸಿದ ನೀರೇ ಅತ್ಯಂತ ಶುದ್ಧವಾದ ತೀ ಆತನು ಪ್ರೀತಿಪೂರ್ವಕವಾಗಿ ವಿಲಾಸದಿಂದ ಅರ್ಚಿಸಿದುದೇ ದೈವವು.

ಶಿವಸಂವಿಚ್ಚರಣಾಬ್ಜರೇಣು ಪತನಂ ಕ್ಷೇತ್ರಂ ತದೀಯಾಂಘ್ರಿಕಂ |
ಭವಸಂಕ್ಷಾಲಿತತೋಯಮೇ ವಿಮಲತೀರ್ಥಂ ತತ್ಪದಾಂಭೋಜಯು ||
ಗ್ಮವೆದೈವಂ ಜಡಭೌತಿಕಪ್ರಕೃತಿ ತೀರ್ಥಕ್ಷೇತ್ರದೈವಂಗಳೆಂ |
ಬಿವು ಮಿಕ್ಕಜ್ಞರಿಗೈಸೆ ನಿಮ್ಮವರಿವಂ ಪೊರ್ದರ್ ಶಿವಾವಲ್ಲಭಾ ||

ಟೀಕೆ—ಭೋ ಶಿವಾವಲ್ಲಭಾ-ಎಲೈ ಪಾರ್ವತೀರಮಣನೇ ! ಶಿವಸಂ ಣಾಬ್ಜರೇಣು ಪತನಂ-ಶಿವಸಂವಿತ್-ಶಿವಜ್ಞಾನಿಗಳ, ಚರಣಾಬ್ಜ-ಪದಕ ರೇಣು-ಧೂಳಿಯ, ಪತನಂ-ಬೀಳುವಿಕೆಯುಳ್ಳುದೇ, ಕ್ಷೇತ್ರಂ-ಪುಣ್ಯಕ್ಷೇ "ಪಾದಾಗ್ರರೇಣವೊಯತ್ರಪತಂತಿಶಿವಯೋಗಿನಃ | ತದೇವಸದನಂಪುಣ್ಯಂ ಶಿವಮಂದಿರಂ" ಎಂದುಂಟಾಗಿ, ತದೀಯಾಂಘ್ರಿಕಂ-ಅವರ ಶ್ರೀಪಾದ ವಾದ, ಭವಸಂಕ್ಷಾಳಿತತೋಯಮೇ-ಸಂಸಾರವೆಂಬ ಪಂಕವನ್ನು ತೊಳೆವಂಥ ಕವೇ, ವಿಮಲತೀರ್ಥಂ-ನಿರ್ಮಲವಾದ ತೀರ್ಥವು, ತತ್ಪದಾಂಭೋಜಯುಗ್ಮವೇ ಪಾದಾರವಿಂದದ್ವಂದ್ವಮೆ, ದೈವಂ-ಆರಾಧಿಸುವ ದೈವವು, ಜಡಭೌತಿಕಪ್ರ ರ್ಥಕ್ಷೇತ್ರದೈವಂಗಳ್-ಜಡ-ಅಚೇತನವಾದ, ಭೌತಿಕ-ಭೂತಸಂಬಂಧವಾದ ಕೃತಿ-ಮಾಯಾಸಂಬಂಧವಾದ, ತೀರ್ಥ, ಕ್ಷೇತ್ರ, ದೈವಂಗಳ್, ಎಂಬ, ತಾವು, ಮಿಕ್ಕ-ಪ್ರಾಕೃತರಾದ, ಅಜ್ಞರಿಗೈಸೆ-ಅಜ್ಞಾನಿಗಳಿಗಷ್ಟೆ ? "ಇದಂ ಮಿದಂಕ್ಷೇತ್ರಂಭ್ರಮಂತಿತಮಸಾನರಾಃ" ಎಂದುಂಟಾಗಿ, ನಿಮ್ಮವರ್-ನಿಮ್ಮ ಣರು, ಇವಂ, ಪೊರ್ದರ್-ಸೋಂಕರು.

ಟಿಪ್ಪಣಿ—ಎಲೈ ಗೌರೀಕಾಂತನೆ ! ಪ್ರಾಜ್ಞರಾದವರಿಗೆ ಶಿವಜ್ಞಾನಿಯಾದ ಶರಣನ ಧೂಳಿಯು ಬಿದ್ದಿರುವಸ್ಥಲವೇ ಪುಣ್ಯಕ್ಷೇತ್ರವು. ಆಶರಣನ ಪಾದವನ್ನು ತೊಳೆದ ಜಲವೇ ವಾದ ತೀರ್ಥವು. ಆತನ ಪಾದಕಮಲಗಳೇ ದೈವವು ... ಭೂತಸಂಬಂಧವಾ

ತ್ಮಕವೂ ಆಗಿರುವ ತೀರ್ಥ-ಕ್ಷೇತ್ರ-ದೈವ ಇಂಬಿವುಗಳೆಲ್ಲಾ ಉಳಿದ ಪ್ರಾಕೃತರಾದ ಅಜ್ಞಜನರ ಸೇವೆಗೆ ಅರ್ಹವಾದುವುಗಳಲ್ಲವೆ ? ಅದುಕಾರಣ, ನಿಮ್ಮ ಶರಣರು ಈಪ್ರಾಕೃತ ಕ್ಷೇತ್ರಯಾತ್ರಾದಿ ಸೇವೆಯ ಹಂಬಲಿಗೆ ಹೋಗರು. ||೧೯||

ಶಿವಭಕ್ತಂ ಗಿರಿ ಕಾಶಿ ಹಂಪೆ ಮೊದಲಾದ ಕ್ಷೇತ್ರತೀರ್ಥಂಗಳೆಂ |
ಬಿವ ನೆಂದುಂ ಪೆಸರ್ಗೊಳ್ಳ ನಾಲಿಸ ನತೀವಾಕಾಂಕ್ಷೆಯಿಂ ಪೋಗನು ||
ತ್ಸವದಿಂ ನೋಡ ನಕೃತ್ಯಕೃತ್ಯಮುಮ ನೇನಂ ಮಾಡ ನಿಷ್ಟಾರ್ಥಮಂ |
ನೆವದಿಂ ಬೇಡ ನನನ್ಯಭಾವಪರಿಪೂರ್ಣಾತ್ಮಂಶಿವಾವಲ್ಲಭಾ ||೨೦||

ಟೀಕೆ—ಅನನ್ಯಭಾವಪರಿಪೂರ್ಣಾತ್ಮಂ-ಅನನ್ಯಭಾವ-ಶಿವಂಗೆಯೂ ತನಗೆಯೂ ಅಭೇದಬುದ್ಧಿಯನುಳ್ಳ, ಪರಿಪೂರ್ಣಾತ್ಮಂ-ಅಖಂಡಿತಸ್ವರೂಪನಾದ, ಶಿವಭಕ್ತಂ-ಶಿವಶರಣನು, ಗಿರಿ ಕಾಶಿ ಹಂಪೆ ಮೊದಲಾದ-ಪರ್ವತ ವಾರಾಣಸಿ ಹಂಪೆ ಮೊದಲಾದ, ಕ್ಷೇತ್ರತೀರ್ಥಂಗಳೆಂಬ-ಪುಣ್ಯಕ್ಷೇತ್ರ ಪುಣ್ಯತೀರ್ಥಂಗಳೆಂಬ, ಇವಂ-ಇವುಗಳನ್ನು, ಎಂದುಂ-ಆವಾಗಳೂ, ಪೆಸರ್ಗೊಳ್ಳಂ-ಹೆಸರುಹಿಡಿಯನು, ಆಲಿಸಂ-ಅವರ ಅತಿಶಯುವಂಕೇಳನು, ಅತೀವಾಕಾಂಕ್ಷೆಯಿಂ-ಅತ್ಯಂತಾಪೇಕ್ಷೆಯಿಂದ, ಪೋಗಂ, ಉತ್ಸವದಿಂ-ಒಸಗೆಯಿಂದ, ನೋಡಂ, ಅಕೃತ್ಯಕೃತ್ಯಮುಮಂ-ಮಾಡಬಾರದುದನ್ನೂ ಮಾಡಬೇಕಾದುದನ್ನೂ, ಏನಂ-ಯಾವುದನ್ನೂ, ಮಾಡಂ-ಆಚರಿಸನು, ಇಷ್ಟಾರ್ಥಮಂ-ತನಗೆ ಬೇಕಾದ ಪ್ರಯೋಜನವನ್ನು, ನೆವದಿಂ-ಒಂದು ವ್ಯಾಜದಿಂ, ಬೇಡಂ-ಯಾಚಿಸನು. ||೨೦||

ಟಿಪ್ಪಣಿ—ಸಚ್ಚಿದಾನಂದ ಪರಶಿವತಾದಾತ್ಮ್ಯವನ್ನು ಹೊಂದಿ ಅಖಂಡಿತಸ್ವರೂಪನಾದ ಶಿವಶರಣನು ("ಶಿವೇನೈಕ್ಯಂಸಮಾಪನ್ನಶ್ಚಿದಾನಂದಸ್ವರೂಪಿಣಾ | ನಪಶ್ಯತಿಜಗಜ್ಜಾಲಂಮಾಯಾಕಲ್ಪಿತವೈಭವಂ" ಎಂಬ ಸಿದ್ಧಾಂತ ಶಿಖಾಮಣಿ ವಚನರೀತ್ಯಾ ಮಾಯಾಕಲ್ಪಿತವಾದ ಜಗದ್ವೈಭವವೊಂದನ್ನೂ ಲಕ್ಷಿಸನಾದಕಾರಣ) ಶ್ರೀಗಿರಿ-ಕಾಶಿ-ಹಂಪೆ ಮೊದಲಾದ ಪುಣ್ಯಕ್ಷೇತ್ರಗಳನ್ನೂ-ಗಂಗಾದಿ ತೀರ್ಥಗಳನ್ನೂ ಸಹ ದೊಡ್ಡವುಗಳೆಂದು ಯಾವಾಗಲೂ ಅವುಗಳ ಹೆಸರನ್ನು ಎತ್ತನು, ಮತ್ತೂ ಅವುಗಳ ಮಹಿಮೆಯನ್ನು ಕಿವಿಗೊಟ್ಟು ಕೇಳನು; ಪುಣ್ಯದಾಸೆಯಿಂದ ಅವುಗಳಲ್ಲಿಗೆ ಹೋಗನು. ಸಂತೋಷದಿಂದ ನೋಡನು; ವಿಧಿನಿಷೇಧಗಳನ್ನು ಸಹ ಆಚರಿಸನು; ಒಂದು ನೆವವನ್ನು ಮಾಡಿಕೊಂಡು ಯಾವುದೊಂದು ಇಷ್ಟಾರ್ಥವನ್ನೂ ಪ್ರಾರ್ಥಿಸನು. ||೨೦||

ಜಲಮುಂ ಪಾವನತೀರ್ಥಮುಂ ವಿಮಲಪುಣ್ಯಕ್ಷೇತ್ರಮುಂ ಕಾಡ ಪಾ |
ಳ್ನೆಲನುಂ ಶ್ರೇಷ್ಠತಮಾದ್ರಿಯುಂ ಮೊರಡಿಯುಂ ಪ್ರಖ್ಯಾತಿಪಾದೈವಮುಂ ||
ಶಿಲೆಯುಂ ಭಕ್ತಿಪರಾನುಭೂತಿಶಿವಯೋಗಜ್ಞಾನನಿಷ್ಪನ್ನಷ |
ಟ್ಸ್ಥಲಲಿಂಗಾಂಗನಿಜೈಕ್ಯದೃಷ್ಟಿಗೆ ಸಮಂ ಸರ್ವಂ ಶಿವಾವಲ್ಲಭಾ ||೨೧||

ಟೀಕೆ—ಭಕ್ತಿಪರಾನುಭೂತಿಶಿವಯೋಗಜಜ್ಞಾನನಿಷ್ಪನ್ನಷಟ್ಸ್ಥಲಲಿಂಗಾ ನಿಜೈಕ್ಯದೃಷ್ಟಿಗೆ-ಭಕ್ತಿ-ಶಿವಭಕ್ತಿಯನುಳ್ಳ, ಪರಾನುಭೂತಿ-ಮಹಾಜ್ಞಾನವನ್ನುಳ್ಳ ಶಿವಯೋಗಜಜ್ಞಾನ-ಶಿವಸಾಮರಸ್ಯಜ್ಞಾನದಲ್ಲಿ, ನಿಷ್ಪನ್ನ-ಸಿದ್ಧಿಯುಳ್ಳ, ಷಟ್ಸ್ಥ ಷಟ್ಸ್ಥಲಸಂಬಂಧವಾದ, ಲಿಂಗಾಂಗನಿಜೈಕ್ಯ-ಲಿಂಗಾಂಗಸಮರಸೈಕ್ಯವುಳ್ಳವರು ದೃಷ್ಟಿಗೆ-ಜ್ಞಾನದೃಷ್ಟಿಗೆ, ಜಲಮುಂ-ಭೌತಿಕಜಲವೂ, ಪಾವನತೀರ್ಥಮುಂ-ಪು ತೀರ್ಥವೂ, ವಿಮಲಪುಣ್ಯಕ್ಷೇತ್ರಮುಂ-ವಿಮಲ-ನಿರ್ಮಲವಾದ, ಪುಣ್ಯಕ್ಷೇ ಮುಂ-ಪುಣ್ಯಕ್ಷೇತ್ರವೂ, ಕಾಡ-ಅಡವಿಯ, ಪಾಳ್ನೆಲನುಂ-ಹಾಳುಭೂಮಿಯ ಶ್ರೇಷ್ಠತಮಾದ್ರಿಯುಂ-ಅಧಿಕತರವಾದ ಪರ್ವತವೂ, ಮೊರಡಿಯುಂ-ಕಲ್ಗು ಯೂ, ಪ್ರಖ್ಯಾತಿಪ-ಪ್ರಸಿದ್ಧವಾದ, ಆದೈವಮುಂ-ಆ ದೈವವೂ, ಶಿಲೆಯುಂ-ಪಾ ಣವೂ, ಸರ್ವಂ-ಇವೆಲ್ಲವೂ, ಸಮಂ-ಸರಿಯಾಗಿರ್ಪವು. ||೬||

ಟಿಪ್ಪಣಿ—ಶಿವಭಕ್ತಿ ಶಿವಾನುಭವಗಳಿಂದ ಕೂಡಿದ-ಶಿವಜೀವರುಗಳಲ್ಲಿ ಸಮಾನ ಸಮು ಚಿಂತಾರೂಪವಾದ ಜ್ಞಾನದಿಂದ ಹುಟ್ಟಿದ ಷಟ್ಸ್ಥಲೋಕ್ತವಾದ ಲಿಂಗಾಂಗಸಾಮರಸ್ಯದಿಂದ ತಭೇದಭಾವವುಳ್ಳವರಾಗಿ ಐಕ್ಯಸ್ಥಲಾಪನ್ನರಾದವರ ದೃಷ್ಟಿಗೆ ಸಾಮಾನ್ಯವಾದ ನೀರೂ-ಪ ವಾದ ತೀರ್ಥವೂ, ಪುಣ್ಯಕ್ಷೇತ್ರವೂ-ಕಾಡಿನ ನೆಲವೂ, ಶ್ರೇಷ್ಠವಾದ ಪರ್ವತವೂ-ಸಾಮಾನ್ಯ ಗುಡ್ಡವೂ, ಪ್ರಸಿದ್ಧವಾದ ದೇವಪ್ರತಿಮೆಯೂ-ಕಲ್ಲೂ ಸಹ ವ್ಯತ್ಯಾಸವಿಲ್ಲದೆ ಒಂದೇಸಮ ಕಾಣುವುವು (ಅಂದರೆ ಶಿವತಾದಾತ್ಮ್ಯವನ್ನೈದಿದ ಶಿವಯೋಗಿಯು "ಅವಿಶುದ್ಧೇವಿಶುದ್ಧೇವಾ ದೀಪ್ತಿರ್ಯಥಾರವೇಃ | ಪತತ್ಯೇವಂಸದಾಽದ್ವೈತೀಸರ್ವತ್ರಸಮವೃತ್ತಿಮಾನ್" ಎಂಬ ಪ್ರಮಾಣ ಸೂರ್ಯನ ಬೆಳಕು ಶುದ್ಧಾಶುದ್ಧಸ್ಥಲಗಳ ಭೇದವನ್ನು ನೋಡದೆ ಸರ್ವತ್ರ ಹೇಗೆ ಪ್ರಸರಿಸುವುದೋ ಹಾಗೆ ಶಿವಾದ್ವೈತಿಯಾದವನು ಎಲ್ಲವಸ್ತುವನ್ನೂ ಒಂದೇಸಮನಾಗಿ ಕಾಣುವನೆಂದು ಭಾವ)

ತಾನೇ ನಿರ್ಮಲತೀರ್ಥ ಮುತ್ತಮಮಹಾಕ್ಷೇತ್ರಂ ಪರಂ ದೈವತಂ |
ಜ್ಞಾನಧ್ಯಾನಸಮಾಧಿಮಂತ್ರಜಪಪೂಜಾಹೋಮನೇಮಾದ್ಯನು ||
ಜ್ಞಾನಂ ಸಿದ್ಧಿಯು ಮೈಹಿಕಂ ಸುಖದ ಮಪ್ಪಾಮುಷ್ಮಿಕಂ ಸರ್ವಮುಂ |
ನೀನಾನೆಂಬೆರಡಿಲ್ಲದಿರ್ಪಶಿವಯೋಗೀಂದ್ರಂ ಶಿವಾವಲ್ಲಭಾ ||೭||

ಟೀಕೆ—ನೀಂ ಆಂ ಎಂಬ-ನೀನು ನಾನು ಎಂಬ, ಎರಡಿಲ್ಲದಿರ್ಪ-ಭಿನ್ನ ವವಿಲ್ಲದಿರ್ಪ-ಶಿವಯೋಗೀಂದ್ರಂ-ಶಿವಯೋಗೀಶ್ವರನು, ನಿರ್ಮಲತೀರ್ಥಂ-ಶುದ್ಧ ದತೀರ್ಥವು, ಉತ್ತಮಮಹಾಕ್ಷೇತ್ರಂ-ದೊಡ್ಡಿತ್ತಾದ ಮಹಾಕ್ಷೇತ್ರವು, ಪರಂ ವತಂ-ಅಧಿಕವಾದ ಮಹಾದೈವವು, ಜ್ಞಾನ........ದ್ಯನುಜ್ಞಾನಂ-ಜ್ಞಾ ಜ್ಞಾನವು, ಧ್ಯಾನ-ಧ್ಯಾನವು, ಸಮಾಧಿ-ಸಮಾಧಿಯು, ಮಂತ್ರಜಪ-ಮಂತ್ರ ಪವು, ಪೂಜಾ-ಪೂಜೆಯು, ಹೋಮ-ಹೋಮವು, ನೇಮ-ನಿಯಮವು ಇವೇ ಮೊದಲಾದುವುಗಳ, ಅನುಜ್ಞಾನಂ-ಆಚರಣೆಯೂ, ಸಿದ್ಧಿಯುಂ-ಅವರಿಂದಪ್ಪ ಸಿದ್ಧಿ

ಳೂ, ಐಹಿಕಂ-ಇಹಲೋಕದ ಸುಖವು, ಸುಖದಮಪ್ಪ-ಪರಿಣಾಮವ ಕೊಡುವಂಥ, ಆಮುಷ್ಮಿಕಂ-ಪರಲೋಕದ ಸುಖವು, ಸರ್ವಮುಂ-ಇವೆಲ್ಲವೂ, ತಾನೆ-ಶರಣತಾನೆ ಯಾಗಿರ್ಪನು ||೨೨||

ಟಿಪ್ಪಣಿ—ಶಿವಾನಂದಮಹಾಸಮುದ್ರದಲ್ಲಿ ಮುಳುಗಿ ಲಿಂಗೈಕ್ಯಸ್ಥಳವನ್ನೈದಿದ ಶಿವಯೋಗಿಗೆ " ಮಾಯಾಶಕ್ತಿತಿರೋಧಾನಾ ಚ್ಛಿವೇಭೇದವಿಕಲ್ಪನಾ | ಆತ್ಮನಸ್ತದ್ವಿನಾಶೇಹು ನಾದ್ವೈತಾತ್ಮಿಂ ಚಿದಿಷ್ಯತೆ " ಎಂಬ ಪ್ರಮಾಣದಂತೆ ಮಾಯನಾಶವಾಗಿ, ಭೇದಭಾವವಳಿದಿರುವಕಾರಣ, ಅವನಿಗೆ ತೀರ್ಥಕ್ಷೇತ್ರ-ದೈವ-ಜ್ಞಾನ-ಧ್ಯಾನ-ಸಮಾಧಿ-ಮಂತ್ರ-ಜಪ-ಪೂಜ-ಹೋಮ-ವ್ರತ ಇವುಗಳ ಆಚರಣೆಯೂ, ಅವುಗಳ ಫಲಸಿದ್ಧಿಯೂ, ಐಹಿಕ ಪಾರಮಾರ್ಥಿಕ ಸುಖಗಳೂ ಸಹ ತಾನೇ ಆಗಿರುವುವು (ಅಂದರೆ " ಶಿವಂವಿಶ್ವಗುರುಂಸಾಕ್ಷಾ ದ್ಭೋಜಯೇನ್ನಿತ್ಯಮಾತ್ಮನಿ | ಏಕತ್ವೇನಚಿದಾಕಾರೇ ತದಿದಂ ಸಹಭೋಜನಂ " ಎಂಬ ಪ್ರಮಾಣದಂತೆ ಸಹಭೋಜನಸ್ಥಲಾಪನ್ನನಾದ ಚಿತ್ಸ್ವರೂಪನಾದ ತಾನೇಯಾಗಿರುವುದು). ||೨೨||

ಎಲ್ಲಂ ತನ್ನೊಳು ತಾನದೆಲ್ಲವರೊಳೇಕಾಕಾರಮಾಗಿರ್ದುಮ |
ತ್ತಿಲ್ಲೆಂಬಂತೆ ತದನ್ಯನಾಗಿ ಚರಿಸುತ್ತಿರ್ಪಂದಮಂ ನೆಟ್ಟನಾ ||
ರ್ಬಲ್ಲರ್ ಷಟ್ಸ್ಥಲನಿಷ್ಕಳಾಮಳಪರಬ್ರಹ್ಮಾಂಗಲಿಂಗೈಕ್ಯಸೌ |
ಖ್ಯೋಲ್ಲಾಸಾಸ್ಪದ ನಪ್ಪ ಭಕ್ತನನುವಂ ಪೇಳಾ ಶಿವಾವಲ್ಲಭಾ ||೨೩||

ಟೀಕೆ—ಎಲ್ಲಂ-ತೀರ್ಥಕ್ಷೇತ್ರ ಮೊದಲಾದುವೆಲ್ಲವೂ, ತನ್ನೊಳು-ಶರಣನಾದ ತನ್ನಲ್ಲಿ, ತಾಂ-ಆಶರಣನು ತಾನು, ಅದೆಲ್ಲವರೊಳ್-ಆ ಎಲ್ಲವರಲ್ಲಿಯೂ, ಏಕಾಕಾರ ಮಾಗಿರ್ದುಂ-ಏಕಸ್ವರೂಪವಾಗಿರ್ದು, ಮತ್ತೆ-ಮರಳಿ, ಇಲ್ಲೆಂಬಂತೆ-ಅವರಲ್ಲಿ ಪೊರ್ದದಹಾಂಗೆ, ತದನ್ಯನಾಗಿ-ಅದಕ್ಕೆ ವಿಲಕ್ಷಣನಾಗಿ, ಚರಿಸುತ್ತಿರ್ಪ-ಆಚರಿಸುತಿರ್ಪ, ಅಂದಮಂ-ಮಾರ್ಗವನ್ನು, ನೆಟ್ಟನೆ-ಚೆನ್ನಾಗಿ, ಆರ್ಬಲ್ಲರ್-ನೀನಲ್ಲದೆ ಯಾರುಬಲ್ಲರು? ಷಟ್ಸ್ಥಲ......ಸ್ಪದನಪ್ಪ-ಷಟ್ಸ್ಥಲದಲ್ಲಿಯ, ನಿಷ್ಕಳ-ಕಳಾರಹಿತವಾದ, ಅಮಳ-ನಿರ್ಮಳವಾದ, ಪರಬ್ರಹ್ಮ-ಪರಬ್ರಹ್ಮವೆಂಬ, ಅಂಗಲಿಂಗೈಕ್ಯ-ಲಿಂಗಾಂಗಸಮರಸದ, ಸೌಖ್ಯ-ಪರಿಣಾಮದ, ಉಲ್ಲಾಸ-ವಿಲಾಸಕ್ಕೆ, ಆಸ್ಪದನಪ್ಪ-ಸ್ಥಾನನಾದ, ಭಕ್ತನ-ಶಿವಶರಣನ, ಅನುವಂ-ಇರವನ್ನು, ಪೇಳಾ-ಪೇಳು. ||೨೩||

ಟಿಪ್ಪಣಿ—ಶಿವಯೋಗಿಗೆ ಮೇಲೆ ಹೇಳಿದಂತೆ ಜಗತ್ತೆಲ್ಲವೂ ಸ್ವಾನತಿರಿಕ್ತವಾಗಿರುವುದು ಮಾತ್ರವಲ್ಲದೆ, " ಯಥೈಕೋವಾಯುರಾಖ್ಯಾತಸ್ಸರ್ವಪ್ರಾಣಿಗತೋವಿಭುಃ | ತಥಾತ್ಮಾವ್ಯಾಪಕಸ್ಸಾಕ್ಷಾತ್ಸರ್ವಪ್ರಾಣಿಗತಸ್ಸ್ವಯಂ " ಎಂಬ ವಚನರೀತ್ಯಾ ವಾಯುವು ಸರ್ವಪ್ರಾಣಿಗಳಲ್ಲಿಯೂ ಪ್ರಾಣರೂಪವಾಗಿ ವ್ಯಾಪಿಸಿಕೊಂಡಿರುವಂತೆ, ಶಿವಸ್ವರೂಪನಾದ ತಾನು ಸಕಲ ಪ್ರಾಣಿಗಳಲ್ಲಿಯೂ ಆತ್ಮರೂಪನಾಗಿ ವ್ಯಾಪಿಸಿರುವನು. ಆದರೂ ಅವನು " ಸಮಸ್ತ ಜಗದಾತ್ಮಾಪಿಸಂವಿದ್ರೂಪೋಮಹಾಮುನಿಃ | ಲಿಪ್ಯತೇನೈವ ಮಸಂಸಾರ್ಕೈರ್ಯಥಾಧೂಮಾದಿಭಿರ್ನಭಃ " ಎಂಬ ವಚನದಂತೆ ಶಿವಯೋಗಿಯು ಸಕಲ ಜಗ

ಜ್ಯೈತನ್ಯಾತ್ಮಕನಾಗಿದ್ದರೂ, ಆಕಾಶವು ಹೊಗೆ ಮೋಡ ಮೊದಲಾದುವುಗಳ ಲೇಪಕ್ಕೊಳ ಭಿನ್ನವಾಗಿರುವಂತೆ ತಾನು ಅವುಗಳ ಕರ್ಮಲೇಪವನ್ನು ಹೊದ್ದದೆ ಅವುಗಳಿಗೆ ಭಿನ್ನನಾಗಿಯೆ ವನು. ಷಟ್ಸ್ಥಲೋಕ್ತಾಚರಣದಿಂದ ಲಿಂಗಾಂಗಸಾಮರಸ್ಯ ಸೌಖ್ಯಾನುಭವಿಯಾಗಿರುವ ಶರಣನ ರೀತಿಯನ್ನು ಎಲೈ ಶಿವನೆ ! ನಿನ್ನ ಹೊರತು ಮತ್ತಾರು ಬಲ್ಲರು ? ಹೇಳು.

ಶಿವಲಿಂಗಂ ಪತಿ ತಾನೆ ತತ್ಸತಿ ಯೆನಿಪ್ಪಾಭಾವಸತ್ಯವ್ರತೋ |
ತ್ಸವತಾತ್ಪರ್ಯ ಪತಿವ್ರತೈಕನಿಯಮಾತ್ತಪ್ರಾಣಲಿಂಗಾಂಗಸಂ ||
ಗವಿಲಾಸಾಸ್ಪದನಿಷ್ಠೆಯಿಂ ದಿತರತೀರ್ಥಕ್ಷೇತ್ರದೈವಂಗ ಳಂ |
ಬಿವ ನೆಂದುಂಬಗೆಗೊಳ್ಳ ನುದ್ಧತಗುಣಂ ಭಕ್ತಂ ಶಿವಾವಲ್ಲಭಾ ||

ಟೀಕೆ—ಉದ್ಧತಗುಣಂ-ಅಧಿಕವಾದಗುಣವನುಳ್ಳ, ಭಕ್ತಂ-ಶಿವಭಕ್ತ ಶಿವಲಿಂಗಂ-ಶಿವಲಿಂಗವು, ಪತಿ-ಪುರುಷನು, ತಾನೆ, ಆಶರಣತಾನೆ, ತತ್ಸತಿ-ಆ ಗದ ಸತಿಯು, ಎನಿಪ್ಪ-ಹೀಗೆಂಬ, ಆಭಾವಸತ್ಯವ್ರತೋತ್ಸವತಾತ್ಪರ್ಯಪತಿ ಕನಿಯಮಾಪ್ತಪ್ರಾಣಲಿಂಗಾಂಗಸಂಗ ವಿಲಾಸಾಸ್ಪದನಿಷ್ಠೆಯಿಂದೆ-ಆಭಾವ-ಆ ಗಡೆಯಲ್ಲಿಯ, ಸತ್ಯವ್ರತ-ಸಹಜವ್ರತದಲ್ಲಿ, ಉತ್ಸವ-ಒಸಗೆಯನುಳ್ಳ, ತಾತ್ಪ ಎರಕದಿಂದೆ. ಪತಿವ್ರತೈಕನಿಯಮ-ಪಾತಿವ್ರತ್ಯವೊಂದೆಯೆಂಬನಿಯಮದಿಂ, ಆ ಸ್ವೀಕರಿಸಲ್ಪಟ್ಟ, ಪ್ರಾಣಲಿಂಗಾಂಗಸಂಗ-ಪ್ರಾಣಲಿಂಗಾಂಗಸಂಬಂಧದ, ವಿಲಾ ಲೀಲೆಗೆ, ಆಸ್ಪದ-ಸ್ಥಾನವಾದ, ನಿಷ್ಠೆಯಿಂದೆ-ದೃಢತ್ವದಿಂದೆ, ಇತರ ತೀರ್ಥಕ್ಷೇ ದೈವಂಗಳ್-ಅನ್ಯವಾದ ಪುಣ್ಯತೀರ್ಥ ಪುಣ್ಯಕ್ಷೇತ್ರದೈವಂಗಳು, ಎಂಬ ಇ ಎಂಬಿವುಗಳನ್ನು, ಎಂದುಂ-ಆವಕಾಲದಲ್ಲಿಯೂ, ಬಗೆಗೊಳ್ಳಂ-ಮನಸ್ಸಿಗೆ ತಾ

ಟಿಪ್ಪಣಿ—ಶ್ರೇಷ್ಠಗುಣಸಂಪನ್ನನಾದ ಶಿವಭಕ್ತನು, ತಾನು ಸತಿ ಲಿಂಗ ಪತಿಯೆಂಬ ಭಾವವೂ-ಆಜೀವ ಶಿವೈಕಸಮರ್ಚನವ್ರತದಲ್ಲಿ ಸಂತೋಷಪೂರ್ವಕವಾದ ಮನೋವೃತ್ತಿಯೂ-ಪ ತ್ಯನಿಯಮದಿಂದ ಪ್ರಾಪ್ತವಾದ ಲಿಂಗಾಂಗ ಸಾಮರಸ್ಯ ವಿಲಾಸದ ಶ್ರದ್ಧೆಯೂ ಉಳ್ಳವನಾ ಕಾರಣ, ಆತನು “ ಶಿವಸಂಸ್ಕಾರಯೋಗೇನಶಿವಧರ್ಮಾನುಷಂಗಿಣಾಂ | ಪ್ರಾಕೃತಾನಾಂ ಪ್ರವೃತ್ತಿರುಪಪದ್ಯತೆ ” ಎಂಬ ವಚನದಂತೆ ಪ್ರಾಕೃತಜನ ಸೇವ್ಯವಾದ ತೀರ್ಥಕ್ಷೇತ್ರದೈವಗ ಯನ್ನು ಎಂದಿಗೂ ಮನಸ್ಸಿಗೆ ತಂದುಕೊಳ್ಳುವುದಿಲ್ಲ. “ ಸತೀವರಮಣೀಯಸ್ತು ಶಿವೇ ವಿಭಾವರ್ಯ | ತದನ್ಯವಿಮುಖಸ್ಸೋಯಂ ಜ್ಞಾತಶ್ಶರಣನಾಮವಾನ್ ” ಎಂಬುಕ್ತಿಯಂತೆ ಶಿವಾದನ್ಯ ವಿಷಯದಲ್ಲಿ ವಿಮುಖನಾಗಿರುವನೆಂದು ಭಾವ.

ನೆಲನಂ ನೀರುಮ ನಾಹ ಬೆಟ್ಟಮ ನಿದೇಂ ಕೊಂಡಾಡುವರ್ ಕ್ಷೇತ್ರಮೆಂ |
ದೆಲೆ ಪುಣ್ಯಾಮಳತೀರ್ಥಮೆಂದು ಗಿರಿಯೆಂದಯ್ಯೋಶಿವಜ್ಞಾನಯೋ ||
ಗಲಸದ್ಭಕ್ತಿವಿಹೀನ ರಪ್ಪ ಭವಿಗಳ್ ಸುಕ್ಷೇತ್ರಮುಂ ತೀರ್ಥಮುಂ |
ಕುಲಲ್ಲೈಲಂ ಶಿವಭಕ್ತನೆಂದು ತಿಳಿಯ ಸ್ಸೋಂ ಶಿವಾವಲ್ಲಭಾ ||

ಟೀಕೆ—ಶಿವಜ್ಞಾನಯೋಗಲಸದ್ಭಕ್ತಿವಿಹೀನರಪ್ಪ-ಶಿವಜ್ಞಾನಯೋಗ-ಶಿವಜ್ಞಾನಸಂಬಂಧದಿಂದ, ಲಸತ್-ಒಪ್ಪುತ್ತಲಿರುವ, ಭಕ್ತಿ-ಭಕ್ತಿಯತ್ತಣಿಂ, ವಿಹೀನರಪ್ಪ-ರಹಿತರಾದ, ಭವಿಗಳ್-ಪಾಶಬದ್ಧರು, ಕ್ಷೇತ್ರಮೆಂದು-ಪುಣ್ಯಕ್ಷೇತ್ರಮೆಂದು, ಪುಣ್ಯಾಮಳತೀರ್ಥಮೆಂದು-ಪುಣ್ಯ-ಪವಿತ್ರವಾದ, ಅಮಳ-ನಿರ್ಮಳವಾದ, ತೀರ್ಥಮೆಂದು-ತೀರ್ಥವು ಎಂದು, ಗಿರಿಯೆಂದು-ಪರ್ವತಮೆಂದು, ನೆಲನಂ-ನೆಲನನ್ನು, ನೀರುಮಂ-ನೀರನ್ನೂ, ಬೆಟ್ಟಮಂ-ಮೊರಡಿಯನ್ನು, ಇದೇಂಕೊಂಡಾಡುವರ್-ಇದೇನು ಕೊಂಡಾಡುವರು! ಅಯ್ಯೋ-ಅಕ್ಕಟಾ, ಆಹಾ-ಆಶ್ಚರ್ಯವು!! ಸುಕ್ಷೇತ್ರಮುಂ-ಒಳ್ಳಿತ್ತಾದಕ್ಷೇತ್ರವೂ, ತೀರ್ಥಮುಂ-ಪುಣ್ಯತೀರ್ಥವೂ, ಕುಲಶೈಲಂ-ಕುಲಪರ್ವತವೂ, ಶಿವಭಕ್ತನೆಂದು-ಶಿವಶರಣನು ಎಂದು, ತಿಳಿಯರ್-ಅರಿಯರು! ನೋಡಾ-ನೋಡು. ||೨೫||

ಟಿಪ್ಪಣಿ—ಎಲೈ ಶಿವನೆ! ಶಿವಜ್ಞಾನ ಶಿವಯೋಗ ಶಿವಭಕ್ತಿಗಳಿಲ್ಲದ ಭವಿಗಳು ಸಾಮಾನ್ಯವಾದ ಭೂಮಿಯನ್ನು ಕ್ಷೇತ್ರವೆಂದೂ, ಸಾಮಾನ್ಯವಾದ ನೀರನ್ನು ಪರಿಶುದ್ಧವಾದ ತೀರ್ಥವೆಂದೂ, ಸಾಮಾನ್ಯವಾದ ಬೆಟ್ಟವನ್ನು ಕುಲಪರ್ವತವೆಂದೂ, ಇದೇನು ಕಾರಣ ಕೊಂಡಾಡುವರು! ಶಿವಭಕ್ತನೇ ಸುಕ್ಷೇತ್ರವೂ ತೀರ್ಥವೂ ಕುಲಪರ್ವತವೂ ಆಗಿರುವನೆಂದು ಅವರುಗಳು ತಿಳಿಯುವುದಿಲ್ಲವಲ್ಲಾ! ನೋಡು. ||೨೫||

ಸಲೆ ನೀ ರ್ಮೀ ನ್ಮಿಡಿಚಿಲ್ಲ ದುತ್ತಮಮಹಾತೀರ್ಥಂಶಿವಜ್ಞಾನಯೋ |
ಗಲಸದ್ಭಕ್ತಿಪರಾಯಣಂ ಗುಳಿ ತೆವರ್ ಮಣ್ಣಿಲ್ಲದುತ್ಕೃಷ್ಟನಿ ||
ರ್ಮಲಸುಕ್ಷೇತ್ರ ಮುಖಂಡಪೂರ್ಣಸುಮಹಲ್ಲಿಂಗಾಂಗಸಂಬಂಧಿ ತಾ |
ನೆಲೆ ಕೇಳ್ ಕಲ್ಮರಮಟ್ಟಿಯಿಲ್ಲದ ಮಹಾಶೈಲಂ ಶಿವಾವಲ್ಲಭಾ ||೨೬||

ಟೀಕೆ—ಶಿವಜ್ಞಾನಯೋಗಲಸದ್ಭಕ್ತಿಪರಾಯಣಂ-ಶಿವಜ್ಞಾನಯೋಗ-ಶಿವಜ್ಞಾನಸಂಬಂಧದಿಂದ, ಲಸತ್-ಒಪ್ಪುತ್ತಿರುವ, ಭಕ್ತಿಪರಾಯಣಂ-ಭಕ್ತಿಯಲ್ಲಿ ತಾತ್ಪರ್ಯವನುಳ್ಳ, ಅಖಂಡಪೂರ್ಣಸುಮಹಲ್ಲಿಂಗಾಂಗಸಂಬಂಧಿ-ಅಖಂಡ-ಒಂದೆಯಾದ, ಪೂರ್ಣ-ಪರಿಪೂರ್ಣಮಾದ, ಸುಮಹತ್-ಮಿಗೆದೊಡ್ಡಿತ್ತಾದ, ಲಿಂಗಾಂಗಸಂಬಂಧಿ-ಲಿಂಗಾಂಗಸಂಬಂಧನನುಳ್ಳ, ತಾಂ-ಆಶರಣ ತಾನು, ಸಲೆ-ಚೆನ್ನಾಗಿ, ನೀರ್ಮೀನ್ಮಿಡಿಚು-ನೀರು ಮೀನು ಸೀಗುಡಿ, ಇಲ್ಲದ, ಉತ್ತಮಮಹಾತೀರ್ಥಂ-ಸರ್ವೋತ್ಕೃಷ್ಟವಾದ ಮಹಾತೀರ್ಥವು, ಗುಳಿತೆವರ್ಮಣ್ಣಿಲ್ಲದ-ಹಳ್ಳತಿಟ್ಟು ಮಣ್ಣಿಲ್ಲದ, ಉತ್ಕೃಷ್ಟನಿರ್ಮಲಸುಕ್ಷೇತ್ರಂ-ಉತ್ಕೃಷ್ಟ-ಉತ್ತಮವಾದ, ನಿರ್ಮಲ-ಸ್ವಚ್ಛವಾದ, ಸುಕ್ಷೇತ್ರಂ-ಒಳ್ಳಿತ್ತಾದ ಕ್ಷೇತ್ರವು, ಕಲ್ಮರಮಟ್ಟಿಯಿಲ್ಲದ-ಪಾಷಾಣ ಮರ ಮಣ್ಣುಗಳಿಲ್ಲದ, ಮಹಾಶೈಲಂ-ದೊಡ್ಡದಾದ ಪರ್ವತವು. ||೨೬||

ಟಿಪ್ಪಣಿ—ಎಲೈ ಪಾರ್ವತೀಪತಿಯೆ! ಕೇಳು, ಶಿವಯೋಗ ಶಿವಭಕ್ತಿಗಳಲ್ಲಿ ಸ್ವ ಸರ್ವಾಂಗ ಲಿಂಗಸಾಹಿತ್ಯವುಳ್ಳವನೂ ಆದ ಶರಣನೇ, ನೀರು ಮಾನು ಮುಡಿತಗಳೊಂದು ಶ್ರೇಷ್ಠವಾದ ಮಹಾತೀರ್ಥವು. ಆತನೇ ಶ್ರೇಷ್ಠವಾದ ನಿರ್ಮಲಕ್ಷೇತ್ರವು. ಆವನೇ ಕಲ್ಲು ಮಣ್ಣುಗಳಿಲ್ಲದ ಮಹಾಪರ್ವತವು. ಎಂದರೆ-ಮಹಾಶರಣನೇ ತೀರ್ಥಕ್ಷೇತ್ರಗಳಂತೆ ಸೇವ್ಯ ಭಾವ.

ಅವತಾರಿಕೆ—ಇಂತು ಏಕಲಿಂಗನಿಷ್ಠಾಪರನಪ್ಪ ವೀರಮಾಹೇಶ್ವರಂಗೆ ತೀರ್ಥಕ್ಷೇ ತ್ರಾಗಮನವುಂ ಯೋಗ್ಯಮಲ್ಲೆಂದು ಪೇಳ್ದು ಅನಂತರದಲ್ಲಿ ಅಂತಪ್ಪನಾದಿ ಭಕ್ತನ ಮಹ ಹೇಳುತ್ತಿರ್ದಪಂ.—

ಅವಿಭಕ್ತಂ ಶಿವ ನಪ್ರಮೇಯ ನನುಪಾಸ್ಯಂ ಪೂರ್ಣನಾತ್ಮೈಕರೂ |
ಪವಿಶಿಷ್ಟಂ ಭಜಿಸ ಲ್ಕಸಾಧ್ಯತರ ನೆಂದೆಂ ದಾತನಂ ಭಕ್ತಿಗೌ ||
ರವದಿಂ ಭಾವಿಸಿ ಭಕ್ತನಾದ ಪರಮ ಸ್ವಾತಂತ್ರ್ಯಲೀಲಾಕೃತ |
ದ್ವಿವಿಧಾಕಾರ ನನಾದಿಸಿದ್ಧಶಿವಭಕ್ತಂ ಕೇಳ್ ಶಿವಾವಲ್ಲಭಾ

ಟೀಕೆ—ಅವಿಭಕ್ತಂ-ಬೇರ್ಪಡಿಸಲ್ಪಡದಿರ್ಪಂಥ, ಶಿವಂ-ಮಾಂಗಲ್ಯರೂ ದಂಥ, ಅಪ್ರಮೇಯಂ-ತಿಳಿಯಲಳವಲ್ಲದಂಥ, ಅನುಪಾಸ್ಯಂ-ಉಪಾಸಿಸಲಾ ದಂಥ, ಪೂರ್ಣಂ-ಅಖಂಡಿತನಾದಂಥ, ಆತ್ಮೈಕರೂಪವಿಶಿಷ್ಟಂ-ಆತ್ಮೈಕರೂ ಮಾತ್ಮವೆಂಬೊಂದೇ ರೂಪನಾದ, ವಿಶಿಷ್ಟಂ-ಅಧಿಕತರನಾದ, ಭಜಿಸಲ್ಕೆ ಅ ತರಂ-ಸೇವಿಸುವದಕ್ಕಸಾಧ್ಯನಾದಾತನು, ಎಂದು-ಹೀಗೆಂದು, ಎಂದೂ-ಕ ಳೂ, ಆತನಂ-ಆ ಮಹಾದೇವನನ್ನು, ಭಕ್ತಿಗೌರವದಿಂ-ಭಕ್ತಿಯ ಅತಿಶಯ ಭಾವಿಸಿ-ತಿಳಿದು, ಭಕ್ತನಾದ-ಭಕ್ತಿಯುಳ್ಳಾತನಾದ, ಪರಮಸ್ವಾತಂತ್ರ್ಯ ಲೀ ತದ್ವಿವಿಧಾಕಾರಂ-ಪರಮ-ಮಿಗಿಲಾದ, ಸ್ವಾತಂತ್ರ್ಯ-ಸ್ವತಂತ್ರತ್ವದ, ಲೀಲಾ ವಿಲಾಸದಿಂ ಮಾಡಲ್ಪಟ್ಟ, ದ್ವಿವಿಧಾಕಾರಂ-ಶರಣಲಿಂಗವೆಂಬೆರಡು ರೂಪ ಅನಾದಿಸಿದ್ಧಶಿವಭಕ್ತಂ-ಅನಾದಿಸಂಸಿದ್ಧನಾದ ಶಿವಭಕ್ತನಲಾ

ಟಿಪ್ಪಣಿ—ಅಂತಹ ಸೇವ್ಯನಾದ ಭಕ್ತನ ಲಕ್ಷಣವೆಂತೆಂದರೆ—ಶಿವನು ಭೇದ ಮಂಗಳಮಯನು, ತಿಳಿಯಲ್ಪಡುವುದಕ್ಕೆ ಆಗದವನು, ಉಪಾಸಿಸುವುದಕ್ಕೆ ಅಸಾಧ್ಯನು, ಪೂರ್ಣ ಕನು, ಜೀವವಿಲಕ್ಷಣನಾದುದರಿಂದ ಪರಮಾತ್ಮನೆಂಬೊಂದೇಸ್ವರೂಪವುಳ್ಳವನು, ಅಧಿಕ ಸಲು ಅಸಾಧ್ಯನಾದವನು, ಎಂದು ತಿಳಿದು, ವಿಶೇಷವಾದ ಭಕ್ತಿಯಿಂದ ಆ ಪರಶಿವನ ವಾದ ಸ್ವತಂತ್ರಲೀಲೆಯಿಂದ ಅಂಗಲಿಂಗವೆಂಬೆರಡುರೂಪಂಗಳನೈದಿ, ಅನಾದಿಸಂಸಿದ್ಧ ಭ ರುವನು.

ಶ್ರುತಿವಾಕ್ಯಪ್ರತಿಪಾದ್ಯಮಾನಸುಮಹಲ್ಲಿಂಗಾಂಗಸಂಬಂಧನಿ |
ಶ್ಚಿತಸತ್ಯಾರ್ಥವಿಶಿಷ್ಟಷಟ್ಸ್ಥಲಪರಬ್ರಹ್ಮೋಪದೇಶೋಚಿತೋ ||
ನ್ನತನಿರ್ವಾಣಸುಖಾನುಭೂತಿವರಭಕ್ತಿಜ್ಞಾನಯೋಗಕ್ರಿಯಾ |
ಶ್ರಿತನಾ ಗನ್ನಮ ನೇನುವುಂ ಪರಿಕಿಸಂ ಭಕ್ತಂ ಶಿವಾವಲ್ಲಭಾ

ಟೀಕೆ—ಭಕ್ತಂ—ಅನಾದಿಭಕ್ತನು, ಶ್ರುತಿ. . ಆಶ್ರಿತನಾಗಿ—ಶ್ರುತಿವಾಕ್ಯ-ತತ್ತ್ವಮಸ್ಯಾದಿ ಮಹಾವಾಕ್ಯಂಗಳಿಂದೆ, ಪ್ರತಿಪಾದ್ಯಮಾನ-ಪ್ರತಿಪಾದಿಸಲ್ಪಡುತ್ತಿರ್ಪ, ಸುಮಹತ್-ಅಧಿಕತರಮಾದ, ಲಿಂಗಾಂಗಸಂಬಂಧ-ಲಿಂಗಾಂಗಸಮರಸದಲ್ಲಿ, ನಿಶ್ಚಿತ-ನಿರ್ಣೈಸಲ್ಪಟ್ಟ, ಸತ್ಯಾರ್ಥ-ಯಥಾರ್ಥವಾದ, ವಿಶಿಷ್ಟ-ಮಿಗೆಶ್ರೇಷ್ಠವಾದ, ಷಟ್ಸ್ಥಲ-ಷಟ್ಸ್ಥಲಾತ್ಮಕವಾದ, ಪರಬ್ರಹ್ಮ-ಪರಬ್ರಹ್ಮದ, ಉಪದೇಶ-ಉಪದೇಶಕ್ಕೆ, ಉಚಿತ-ಯೋಗ್ಯವಾದಂಥ, ಉನ್ನತ-ಪೆರ್ಚುಗೆಯಾದ, ನಿರ್ವಾಣಸುಖ-ಮೋಕ್ಷಾನಂದದ, ಅನುಭೂತಿ-ಅನುಭವದಿಂದೆ, ವರ-ಉತ್ಕೃಷ್ಟವಾದ, ಭಕ್ತಿಜ್ಞಾನಯೋಗಕ್ರಿಯಾ-ಶಿವಭಕ್ತಿ ಶಿವಜ್ಞಾನ ಶಿವಯೋಗಮೆಂಬ ಸತ್ಕ್ರಿಯೆಗಳನ್ನು ಆಶ್ರಿತನಾಗಿ-ಆಶ್ರೈಸಿದವನಾಗಿ, ಅನ್ಯಮಂ ಏನುಮಂ-ಉಳಿದುದನೇನುವನ್ನೂ, ಪರಿಕಿಸಂ-ಲೆಕ್ಕಿಸನು. ||೨೮||

ಟಿಪ್ಪಣಿ—ಆ ಅನಾದಿಭಕ್ತನು "ತತ್ತ್ವಮಸಿ" ಅಹಂಬ್ರಹ್ಮಾಸ್ಮಿ ಮುಂತಾದ ಮಹಾವಾಕ್ಯಗಳಿಂದ ಹೇಳಲ್ಪಡುತ್ತಿರುವ ಲಿಂಗಾಂಗಸಾಮರಸ್ಯವೆಂಬ ಸಿದ್ಧಾಂತಾರ್ಥದಿಂದ ಕೂಡಿದ ಷಟ್ಸ್ಥಲಪರಬ್ರಹ್ಮೋಪದೇಶಕ್ಕೆ ಯೋಗ್ಯವಾದ ಮುಕ್ತಿಸೌಖ್ಯಾನುಭವವುಳ್ಳವನಾದುದರಿಂದಲೇ ಅತಿಶಯವಾದ-ಶಿವಭಕ್ತಿ ಶಿವಜ್ಞಾನ ಶಿವಯೋಗದ ಆಚರಣೆಗಳನ್ನವಲಂಬಿಸಿದವನಾಗಿದ್ದುಕೊಂಡು, ಅದಕ್ಕೆ ಭಿನ್ನವಾದುದೇನನ್ನೂ ಲಕ್ಷೀಕರಿಸದೆ ಇರುವನು ||೨೮||

ಭಸಿತಾಭ್ಯಸ್ತಧೃತತ್ರಿಪುಂಡ್ರ ವರರುದ್ರಾಕ್ಷಾಂಗಲಿಂಗಾಂಗಯೋ |
ಗಸಮಾಧಿಸ್ಥಿತಿಸಾಧ್ಯಸಿದ್ಧ ಮನುರಾಟ್ಪಂಚಾಕ್ಷರೀಮಂತ್ರಜಾ ||
ಪಸಮೇತಾತ್ಮಶಿವಸ್ವರೂಪವಿಲಸಚ್ಚಿಂತಾಂತರಂಗಾನುಭಾ |
ವಸುಖಾಕಾರ ನಪಾರಪಾರಮಹಿಮಂ ಭಕ್ತಂ ಶಿವಾವಲ್ಲಭಾ ||೨೯||

ಟೀಕೆ—ಭಸಿತಾ. . ಸುಖಾಕಾರಂ-ಭಸಿತ-ಶ್ರೀವಿಭೂತಿಯಿಂ, ಅಭ್ಯಸ್ತ-ಸದಾಭ್ಯಾಸಮಾಡಲ್ಪಟ್ಟ, ಧೃತ-ಧರಿಸಲ್ಪಟ್ಟ, ತ್ರಿಪುಂಡ್ರ-ತಿರ್ಯಕ್ಪುಂಡ್ರದಿಂ, ವರ-ಶ್ರೇಷ್ಠವಾದ, ರುದ್ರಾಕ್ಷ-ರುದ್ರಾಕ್ಷದಿಂದ, ಅಂಗ-ಮುಖ್ಯವಾದ ('' ಅಂಗಂ ಮುಖ್ಯಾಭ್ಯುಪಾಯಯೋಃ '' ಎಂದು ಜಯಕೋಶಮುಂಟು) ಲಿಂಗಾಗಯೋಗ-ಲಿಂಗಾಂಗಸಂಬಂಧದಲ್ಲಿ, ಸಮಾಧಿ-ಚಿತ್ತೈಕಾಗ್ರತೆಯ, ಸ್ಥಿತಿ-ನಿಲುಕಡೆಯಿಂದ, ಸಾಧ್ಯ-ಸಾಧಿಸಲ್ತಕ್ಕ, ಸಿದ್ಧ-ಪ್ರಸಿದ್ಧವಾದ, ಮನುರಾಟ್-ಮಂತ್ರರಾಜನಾದ, ಪಂಚಾಕ್ಷರೀಮಂತ್ರ-ಶಿವಪಂಚಾಕ್ಷರೀಮಂತ್ರದ, ಜಾಪ-ಜಪದೊಡನೆ, ಸಮೇತ-ಕೂಡಿದ, ಆತ್ಮ-ಶರೀರವನುಳ್ಳ, ಶಿವಸ್ವರೂಪ-ಪರಮಮಂಗಲಸ್ವರೂಪವಾದ, ವಿಲಸತ್-ಒಪ್ಪುತ್ತಲಿರುವ, ಚಿಂತಾ-ಧ್ಯಾನವನುಳ್ಳ, ಅಂತರಂಗ-ಅಂತರಂಗದಲ್ಲಿ, ಅನುಭಾವ-ತತ್ತ್ವನಿಶ್ಚಯದಿಂದಲಾದ, ಸುಖಾಕಾರಂ-ಪರಿಣಾಮಸ್ವರೂಪನಾದಂಥ, ಅಪಾ

ರಪಾರಮಹಿಮಂ-ಅಪಾರ-ಕಾಣಿಸಿಕೊಳ್ಳದಿರ್ಪ, ಪಾರ-ಕಾಣಿಸಿಕೊಳಲ್ಪಕ್ಕ ಮಂ-ಮಹತ್ವವನುಳ್ಳಾತನು, ಭಕ್ತಂ-ಅನಾದಿಸಂಸಿದ್ಧನಾದ ಭಕ್ತನು.

ಟಿಪ್ಪಣಿ—ಮತ್ತೂ ಆತನು ಸದಾ ಭಸ್ಮತ್ರಿಪುಂಡ್ರಧಾರಿಯಾಗಿಯೂ, ರುದ್ರಾಕ್ಷ ಸಂಪನ್ನನಾಗಿಯೂ, ಲಿಂಗಾಂಗಸಾಮರಸ್ಯದಲ್ಲಿ ನಿಂತ ಮನಸ್ಸುಳ್ಳತನದಿಂದ ಸಾಧಿಸತಕ್ಕ ವಾದ ಶಿವ ಪಂಚಾಕ್ಷರೀ ಮಂತ್ರದ ಜಪದಿಂದ ಕೂಡಿಯೂ, ಶಿವಾನುಭವ ಸೌಖ್ಯವುಳ್ಳ ಭಕ್ತಿದೂರರಿಗೆ ಅಗೋಚರವೂ ಭಕ್ತರಿಗೆ ಗೋಚರವೂ ಆದ ಮಹತ್ವವುಳ್ಳವನಾಗಿಯೂ ರುವನು.

ಅವತಾರಿಕೆ—ಇಂತು ಅನಾದಿಭಕ್ತನ ಮಹತ್ವವನ್ನು ಪೇಳಿದನಂತರದಲ್ಲಿ ಆತನ ನಿಷ್ಠಾಪರತ್ವಮಂ ಪೇಳುತ್ತಿರ್ದಪಂ.

ಶ್ರೀ ಗುರುದತ್ತಾನುಪಮೇಷ್ಟಲಿಂಗಮೆ ನಿಜಪ್ರಾಣೇಶ್ವರಂ ಮಿಕ್ಕಪಾ |
ಮರಲೋಕಸ್ಥಿತ ಮಪ್ಪ ಲಿಂಗಮನಿತೆಲ್ಲಂ ಮಿಥ್ಯೆಯೆಂಬೇಕಭಾ ||
ವರತಿಪ್ರತ್ಯಯಭಕ್ತಿನಿಷ್ಠೆ ನೆಲೆಗೊಂಡಿರ್ಪ್ಪಾರ್ತನೇ ಶಶ್ವದು |
ತ್ತರನಿರ್ವಾಣಪದಪ್ರಸಿದ್ಧಶರಣಂ ಸತ್ಯಂ ಶಿವಾವಲ್ಲಭಾ

ಟೀಕೆ—ಗುರುದತ್ತಾನುಪಮೇಷ್ಟಲಿಂಗಮೆ-ಗುರು-ಶ್ರೀಗುರುವಿನಿಂದ ಕೊಡಲ್ಪಟ್ಟ, ಅನುಪಮ-ಉಪಮಿಸಬಾರದ, ಇಷ್ಟಲಿಂಗವೆ-ಇಷ್ಟಲಿಂಗವೆ, ಪ್ರಾಣೇಶ್ವರಂ-ತನ್ನ ಪ್ರಾಣವಲ್ಲಭನು, ಮಿಕ್ಕ-ಉಳಿದ, ಪಾಮರಲೋಕಸ್ಥಿತ ಪಾಮರ-ಜಡಮಾದ, ಲೋಕ-ಲೋಕದಲ್ಲಿ, ಸ್ಥಿತಮಪ್ಪ-ಇರುತ್ತಲಿರುವ, ಲಿಂಗವು, ಅನಿತೆಲ್ಲಂ-ಅಷ್ಟೆಲ್ಲವೂ, ಮಿಥ್ಯೆಯೆಂಬ-ಪುಸಿಯೆಂಬ, ಏಕಭಾವ-ಏ ಯಲ್ಲಿ, ರತಿ-ಪ್ರೀತಿಯಿಂದ, ಪ್ರತ್ಯಯ-ಜ್ಞಾನದಿಂದ, ಭಕ್ತಿನಿಷ್ಠೆ-ಶಿವಭಕ್ತಿ ತ್ವವು, ನೆಲೆಗೊಂಡಿರ್ಪಾರ್ತನೆ-ಸ್ಥಿರವಾಗಿರ್ಪಾರ್ತನೆ, ಶಶ್ವತ್-ಎಲ್ಲಾಗಳೂ, ನಿರ್ವಾಣಪದಪ್ರಸಿದ್ಧಶರಣಂ-ಉತ್ತರ-ಶ್ರೇಷ್ಠವಾದ, ನಿರ್ವಾಣಪದ-ಮೋ ದಿಂದ, ಪ್ರಸಿದ್ಧ-ಪ್ರಖ್ಯಾತನಾದ, ಶರಣಂ-ಶರಣನು, ಸತ್ಯಂ-ಯಥಾರ್ಥವ

ಟಿಪ್ಪಣಿ—ಗುರುವಿನಿಂದ ಕೊಡಲ್ಪಟ್ಟ ಉಪಮಾರಹಿತವಾದ ಇಷ್ಟಲಿಂಗವೇ ತನಗೆ ಕಾಂತನೆಂದು ತಿಳಿದು, ಉಳಿದ ಜಡಲೋಕದಲ್ಲಿರುತ್ತಿರುವ ಲಿಂಗಗಳೆಲ್ಲವೂ ಅಸತ್ಯವಾದುವ ಭಾವವೂ, ಅನುರಾಗವೂ, ನಂಬುಗೆಯೂ, ಭಕ್ತಿಯೂ, ಶ್ರದ್ಧೆಯೂ ಸ್ಥಿರವಾಗುಳ್ಳವನೇ ತೋತ್ತಮವಾದ ಮುಕ್ತಿಪದವಿಯಿಂದ ಪ್ರಖ್ಯಾತನಾದ (ಜೀವನ್ಮುಕ್ತನಾದ) ಶರಣನೆನಿಸಿಕೊ

ಪುರುಷಾಕಾರಸಮತ್ವದಿಂ ಪುರುಷರಂ ಮಿಕ್ಕಾದರಂ ತನ್ನ ಸ |
ತ್ಪುರುಷಂಗೇಂ ಸರಿಗಾಣ್ಬಳೇ ಪರಮಪಾತಿವ್ರತ್ಯಸಂಪನ್ನೆಯಾ ||
ಪರಿ ಲಿಂಗಾಕೃತಿಯಿಂ ಸಮಾನತೆ ಯದಾಗಲ್ ಸ್ವೇಷ್ಟಲಿಂಗಕ್ಕೆ ಪಾ |
ಮರಲಿಂಗಗಳ ಸಮಹ ಕಾಣ್ಬನೆ ಸಮಾ ಭಕ್ತಂ ಶಿವಾವಲ್ಲಭಾ

ಟೀಕೆ—ಪರಮಪಾತಿವ್ರತ್ಯಸಂಪನ್ನೆ-ಪರಮ-ಉತ್ಕೃಷ್ಟವಾದ, ಪಾತಿವ್ರತ್ಯ-ಪತಿವ್ರತಾಧರ್ಮದಿಂದೆ, ಸಂಪನ್ನೆ-ಕೂಡಿದಂಥವಳು, ಪುರುಷಾಕಾರ ಸಮತ್ವದಿಂ-ಪುರುಷ-ಪುರುಷನ, ಆಕಾರ-ದೇಹದ, ಸಮತ್ವದಿಂ-ಸಾಮ್ಯದಿಂದೆ, ಪುರುಷರಂ-ಪುರುಷರುಗಳಾದ, ಮಿಕ್ಕಾದರಂ-ಉಳಿದವರುಗಳನ್ನು, ತನ್ನ ಸತ್ಪುರುಷಂಗೆ-ತನ್ನ ಪ್ರಾಣವಲ್ಲಭಂಗೆ, ಸರಿಗಾಣ್ಬಳೇ-ಸದೃಶವೆಂದು ನೋಡುವಳೆ ? ಅಪರಿ-ಆತೆರದಿಂದೆ, ಭಕ್ತಂ-ಶಿವಭಕ್ತನು, ಲಿಂಗಾಕೃತಿಯಿಂ-ಲಿಂಗಾಕಾರದಿಂದೆ, ಅದು ಸಮಾನತೆ-ಅಸದೃಶತ್ವವು, ಆಗಲ್-ಆಗಲಾಗಿ, ಸ್ವೇಷ್ಟಲಿಂಗಕ್ಕೆ-ತನ್ನ ಇಷ್ಟಲಿಂಗಕ್ಕೆ, ಪಾಮರಲಿಂಗಂಗಳಂ-ಜಡಲಿಂಗಗಳನ್ನು, ಸಮಂ-ಸರಿಯಾಗಿ, ಕಾಣ್ಣನೆ-ನೋಡುವನೆ ? (ನೋಡನೆಂಬುದರ್ಥಂ,) ಆಹ-ಆಶ್ಚರ್ಯವು. ||೩೧||

ಟಿಪ್ಪಣಿ—ಉತ್ಕೃಷ್ಟವಾದ ಪತಿವ್ರತಾಧರ್ಮದಿಂದ ಕೂಡಿರುವ ಸತಿಯು, ತನ್ನ ಪತಿಗೆ ಉಳಿದ ಗಂಡುಸರು ಆಕಾರದಿಂದ ಸಮಾನರಾಗಿ ತೋರುತ್ತಿದ್ದರೂ, ಅವರೆಲ್ಲರನ್ನೂ ಆಕೆಯು ತನ್ನ ಪತಿಯಂತೆ ಕಾಣುವುದುಂಟೆ ? ಎಂದಿಗೂ ಇಲ್ಲ. ಇದರಂತೆಯೇ ಶಿವೈಕವ್ರತಿಯಾದ ಭಕ್ತನು ತನ್ನ ಇಷ್ಟಲಿಂಗಕ್ಕೆ ಉಳಿದ ಪ್ರಾಕೃತಲಿಂಗಗಳೆಲ್ಲವೂ ಆಕಾರಮಾತ್ರದಲ್ಲಿ ಹೋಲುತ್ತಿದ್ದರೂ, ಅವುಗಳನ್ನು ತನ್ನ ಇಷ್ಟಲಿಂಗಕ್ಕೆ ಸಮನೆಂದು ಭಾವಿಸುವುದುಂಟೆ ? ಇಲ್ಲ. ||೩೧||

ಪತಿನಿಷ್ಠಾನಿಯಮವ್ರತಾಂಗಿ ಯಹ ಪುಣ್ಯಸ್ತ್ರೀಗೆ ಮತ್ತನ್ಯನಿ |
ಷ್ಠಿತನೇಮವ್ರತಮೇನುಮಂ ಭಜನೆಯಿಂದಂ ಮಾಡದಿರ್ದಲ್ಲಿ ದು ||
ಷ್ಕೃತಮುಂಟೇ ಪುಸಿಮಾತದಿಲ್ಲ ಶರಣಂ ಗಾತ್ಮೇಷ್ಟಲಿಂಗವ್ರತೋ |
ಚಿತನಿಷ್ಠಾನಿಯತಂಗೆ ಸತ್ಯ ಮಿದೆ ದೃಷ್ಟಾಂತಂ ಶಿವಾವಲ್ಲಭಾ ||೩೨||

ಟೀಕೆ—ಪತಿನಿಷ್ಠಾನಿಯಮವ್ರತಾಂಗಿಯಹ-ಪತಿ-ಪುರುಷನಲ್ಲಿ, ನಿಷ್ಠಾ-ಭಕ್ತಿಯೆಂಬ, ನಿಯಮ-ನಿತ್ಯವಾದ, ವ್ರತ-ವ್ರತಮೆ, ಅಂಗಿಯಹ-ಅಂಗವಾಗುಳ್ಳ, ಪುಣ್ಯಸ್ತ್ರೀಗೆ-ಪತಿವ್ರತಾ ಸ್ತ್ರೀಗೆ, ಮತ್ತೆ-ಮರಳಿ, ಅನ್ಯನಿಷ್ಠಿತನೇಮವ್ರತಮೇನುಮಂ-ಅನ್ಯ-ಬೇರಾದ, ನಿಷ್ಠಿತ-ಭಕ್ತಿಯಿಂದ, ನೇಮವ್ರತಮೇನುಮಂ-ನೋಂಪಿ ಮೊದಲಾದ ಕಾಮ್ಯವ್ರತಗಳನೇನುವನ್ನೂ, ಭಜನೆಯಿಂದಂ-ಭಜಿಸುವುದರಿಂದ, ಮಾಡದಿರ್ದಲ್ಲಿ-ಮಾಡದೆ ಬಿಟ್ಟಿದ್ದಲ್ಲಿ, ದುಷ್ಕೃತಮುಂಟೇ-ಪಾಪವುಂಟೆ ? ಇಲ್ಲ, ಅದು-ಆ ಪಾಪವುಂಟೆಂಬುದು, ಪುಸಿಮಾತು-ಸಟೆಯಮಾತು, ಆತ್ಮೇಷ್ಟಲಿಂಗವ್ರತೋಚಿತನಿಷ್ಠಾನಿಯತಂಗೆ-ಆತ್ಮ-ತನ್ನ, ಇಷ್ಟಲಿಂಗ-ಇಷ್ಟಲಿಂಗದ, ವ್ರತ-ವ್ರತದಲ್ಲಿ, ಉಚಿತ-ತಕ್ಕಂಥ, ನಿಷ್ಠಾ-ಭಕ್ತಿಯಲ್ಲಿ, ನಿಯತಂಗೆ-ಯತ್ನವುಳ್ಳಾತನಾದ, ಶರಣಂಗೆ-ಶಿವಶರಣಂಗೆ, ಇದೆದೃಷ್ಟಾಂತಂ-ಈ ಪತಿವ್ರತಾಂಗನೆಯರೀತಿಯೇ ದೃಷ್ಟಾಂತವು, ತಥ್ಯಂ-ಇದೇ ಸಹಜವು (ಏಕಲಿಂಗನಿಷ್ಠಾಪರನಾದ ಶರಣಂಗೆ ಕಾಮ್ಯಕರ್ಮಂಗಳು ಯೋಗ್ಯವಲ್ಲವೆಂಬುದಭಿಪ್ರಾಯಂ) ||೩೨||

ಟಿಪ್ಪಣಿ—ತನ್ನ ಪತಿಯ ಭಕ್ತಿಯೊಂದನ್ನೇ ದೃಢವಾಗಿ ಹಿಡಿದಿರುವ ಪತಿವ್ರತೆಯು ವ್ರ ನೋಂಪಿ ಮೊದಲಾದುವುಗಳನ್ನು ಮಾಡದೆಯಿದ್ದರೂ ಆಕೆಗೆ ಪಾಪವಾವುದೂ ಸಂಘಟಿಸ ವಂತೆ, ಇಷ್ಟಲಿಂಗಪೂಜೈಕವ್ರತತತ್ಪರನಾದ ಶರಣನು ಮತ್ತಾವ ದೈವೋಪಾಸನೆ ಮೊದಲಾದ ಕರ್ಮಗಳನ್ನು ಮಾಡದಿದ್ದರೂ ಆತನಿಗೆ ದೋಷವಿಲ್ಲ

ಭಕ್ತಂ ಲೋಕವಿಭಕ್ತ ನೀಶ್ವರಪರಂ ಮಾಹೇಶ್ವರಂ ತತ್ಪ್ರಸಾ |
*ದಾತ್ತಂ ತಾನೆ ಲಸತ್ಪ್ರಸಾದಿ ನಿಜಲಿಂಗಪ್ರಾಣಿಯುಂ ಪ್ರಾಣಲಿಂ ||
ಗ್ಯುಕ್ತಾರ್ಥಂ ಸ್ವಸಮರ್ಪಕಂ ಶರಣ ನೈಕ್ಯಂ ದ್ವೈತಭಾವಾತಿಗಂ |
ವ್ಯಕ್ತಂ ಷಟ್ಸ್ಥಲಯೋಗಮಾರ್ಗ ಪರಮಾದ್ವೈತಂ ಶಿವಾವಲ್ಲಭಾ

ಟೀಕೆ—ಲೋಕವಿಭಕ್ತಂ-ಲೋಕಕ್ಕೆ ವಿಲಕ್ಷಣನಾದಾತನು, ಭಕ್ತ ನೆನಿಸುವನು, ಈಶ್ವರಪರಂ-ಈಶ್ವರನೇ ಪರವಾಗುಳ್ಳಾತನು, ಮಾಹೇಶ್ವರಂ-ಮ ಶ್ವರನು, ತತ್ಪ್ರಸಾದ-ಆ ಶಿವಪ್ರಸಾದದಿಂದ, ಆತ್ತಂ-ಸ್ವೀಕರಿಸಲ್ಪಟ್ಟ, ತಾನೆ- ಲಸತ್ಪ್ರಸಾದಿ-ಒಪ್ಪುವ ಪ್ರಸಾದಿಯು, ನಿಜಲಿಂಗಪ್ರಾಣಿಯುಂ-ನಿಜಲಿಂ ಲಿಂಗವೇ, ಪ್ರಾಣಿಯುಂ-ಪ್ರಾಣವಾಗುಳ್ಳಾತನು, ಪ್ರಾಣಲಿಂಗ್ಯುಕ್ತಾರ್ಥ- ಣಲಿಂಗಿ-ಪ್ರಾಣಲಿಂಗಿಸ್ಥಲದಲ್ಲಿ, ಉಕ್ತ-ಹೇಳಲ್ಪಟ್ಟ, ಅರ್ಥಂ-ಅರ್ಥವು ಸ್ವಸಮರ್ಪಕಂ-ತನ್ನನೇ ಲಿಂಗಕ್ಕೆ ಸಮರ್ಪಿಸುವಾತನು, ಶರಣಂ-ಶರಣನು, ಭಾವಾತಿಗಂ-ಭೇದಭಾವವಮೀರಿ ವರ್ತಿಸುವಾತನು, ಐಕ್ಯಂ-ಲಿಂಗೈಕ್ಯನು, ಲಯೋಗಮಾರ್ಗಪರಮಾದ್ವೈತಂ-ಷಟ್ಸ್ಥಲಯೋಗಮಾರ್ಗ-ಷಟ್ಸ್ಥಲಸಂ ದ ಮಾರ್ಗವೇ, ಪರಮ-ಉತ್ಕೃಷ್ಟವಾದ, ಅದ್ವೈತಂ-ಎರಡಿಲ್ಲದುದೆಂದು, ವ್ಯ ಸ್ಫುಟವು

ಟಿಪ್ಪಣಿ—ಪ್ರಾಕೃತಲೋಕಕ್ಕೆ ವಿಲಕ್ಷಣವಾದ ಸದಾಚಾರಗಳುಳ್ಳವನು ಭಕ್ತನು, ಸತಿ ತಾನೇ ಪತಿ ಶಿವನಹೊರತು ಮತ್ತೊಂದು ದೈವವಿಲ್ಲವೆಂದು ನಂಬಿದಾತನು ಮಾಹೇ ಶಿವಸಮರ್ಪಿತವಾದ ವಸ್ತುವನ್ನು ಮಾತ್ರವೇ ಸ್ವೀಕರಿಸತಕ್ಕವನು ಪ್ರಸಾದಿಯು, ಇಷ್ಟ ತನ್ನ ಪ್ರಾಣವಾಗಿವುಳ್ಳವನು ಪ್ರಾಣಲಿಂಗಿಯು, ಶಿವನಿಗೆ ಆತ್ಮಾರ್ಪಣವನ್ನು ಮಾಡಿರುವವ ಣನು, ತಾನೇ ಶಿವನು ಶಿವನೇ ತಾನಾಗಿರುವವನು ಐಕ್ಯನು, ಇದೇ ಷಟ್ಸ್ಥಲಸಂಬಂಧವಾದ ವೆನಿಸಿಕೊಳ್ಳುವ ಉತ್ಕೃಷ್ಟವಾದ ಅದ್ವೈತವು

ಅವತಾರಿಕೆ—ಇಂತು ಏಕಲಿಂಗನಿಷ್ಠಾಪರನಾಗಿ ಷಟ್ಸ್ಥಲಜ್ಞಾನಿಯಾದ ಶರಣಂಗೆ ಬಾಧ್ಯಾಸವಿಲ್ಲೆಂದು ಪೇಳುತ್ತಿರ್ದಪಂ.—

ಪರಿಪೂರ್ಣಭ್ರಮೆಯಿಂ ಬಯಲ್ವಿಡಿದು ಭಕ್ತಿಜ್ಞಾನಯೋಗಕ್ರಿಯಾ |
ಚರಣಂಗೆಟ್ಟು ವೃಥಾಂತ್ಯದಲ್ಲಿ ತೊಳಲಂ ಪ್ರಾದೇಶಿಕಭ್ರಾಂತಿಯಿಂ ||

* ಪಾ|| ದೋಕ್ತಂ ತಾನೆ.

ಪರಿದಾಡಂ ನಿಜನಿಷ್ಠೆಯಂ ಮರೆದು ಮತ್ತನ್ಯತ್ರ ಕಾಣ್ಬಾಸೆಯಿಂ |
ಶರಣಂ ದ್ವಂದ್ವವಿಮುಕ್ತ ನಿರ್ಪಿರವ ನೇನೆಂಬೆಂ ಶಿವಾವಲ್ಲಭಾ ||೩೪||

ಟೀಕೆ—ಪರಿಪೂರ್ಣಭ್ರಮೆಯಿಂ-ತುಂಬಲ್ಪಟ್ಟ ಭ್ರಾಂತಿಯಿಂದ, ಬಯಲ್ವಿಡಿದು-ನಿರಾಕಾರವೇ ಬ್ರಹ್ಮವೆಂದುಪಿಡಿದು, ಭಕ್ತಿಜ್ಞಾನಯೋಗಕ್ರಿಯಾಚರಣಂಗೆಟ್ಟು-ಭಕ್ತಿ-ಶಿವಭಕ್ತಿಯ, ಜ್ಞಾನ-ಶಿವಜ್ಞಾನದ, ಯೋಗ-ಶಿವಯೋಗದ, ಕ್ರಿಯಾ-ಸತ್ಕ್ರಿಯೆಗಳ, ಆಚರಣಂಗೆಟ್ಟು-ಆಚಾರಭ್ರಷ್ಟನಾಗಿ, ವೃಥಾ-ವ್ಯರ್ಥವಾಗಿ, ಅಂತ್ಯದಲ್ಲಿ-ಕಡೆಯಲ್ಲಿ, ತೊಳಲಂ-ಭವಕ್ಕೆಬಾರನು, ಮತ್ತೆ-ಮರಳಿ, ಅನ್ಯತ್ರ-ಬೇರೊಂದು ತಾಣದಲ್ಲಿ, ಕಾಣ್ಬಾಸೆಯಿಂ-ನೋಡುವ ಬಯಕೆಯಿಂದ, ನಿಜನಿಷ್ಠೆಯಂ-ತನ್ನ ಭಕ್ತಿಯಂ, ಮರೆದು-ಆದರ ನೆನಹಿಲ್ಲದೆ, ಪ್ರಾದೇಶಿಕಭ್ರಾಂತಿಯಿಂ-ಇಲ್ಲಿಯುಂಟು ಅಲ್ಲಿಯುಂಟೆಂದು ಪರಿಚ್ಛಿನ್ನಭ್ರಾಂತಿಯಿಂದ, ಪರಿದಾಡಂ-ಎಡೆಯಾಡನು, ದ್ವಂದ್ವವಿಮುಕ್ತಂ-ದ್ವಂದ್ವದುಃಖವಿಲ್ಲದಾತನಾದ, ಶರಣಂ-ಶರಣನು, ಇರ್ಪಿರವಂ-ಇರುವ ಮಾರ್ಗವನ್ನು, ಏನೆಂಬೆಂ-ಏನೆಂದು ಪೇಳುವೆನು ! ||೩೪||

ಟಿಪ್ಪಣಿ—ಇಷ್ಟಲಿಂಗನಿಷ್ಠಾಪರನಾಗಿ ವಿಕಲ್ಪವಳಿದಿರುವ ಶರಣನು, ಭ್ರಾಂತಿತುಂಬಿಕೊಂಡು ಶೂನ್ಯವನ್ನೇ ಬ್ರಹ್ಮವೆಂದು ಹಿಡಿದುಕೊಂಡು, ಶಿವಸಂಬಂಧವಾದ ಭಕ್ತಿ, ಶಿವಸಂಬಂಧವಾದ ಜ್ಞಾನ, ಶಿವಸಂಬಂಧವಾದ ಯೋಗ, ಶಿವಸಂಬಂಧವಾದ ಕ್ರಿಯೆಗಳನ್ನಾಚರಿಸುವುದಂ ಬಿಟ್ಟು ಕಡೆಗೆ ಭವದಲ್ಲಿ ವ್ಯರ್ಥವಾಗಿ ತೊಳಲುವುದಿಲ್ಲ; ಮತ್ತೂ ಒಂದು ಕಡೆ ನೆಲೆಯಾದ ಭಕ್ತಿಯಿಲ್ಲದೆ, ಅಲ್ಲಿ ದೈವವುಂಟು ಇಲ್ಲಿ ದೈವವುಂಟೆಂಬ ಭ್ರಾಂತಿಯಿಂದ ಆ ಕ್ಷೇತ್ರದರ್ಶನವಂ ಮಾಡಬೇಕು, ಈ ತೀರ್ಥಸೇವನೆಯಂ ಮಾಡಬೇಕು ಎಂಬ ಆಸೆಗೊಂಡು, ಅಡ್ಡಾಡುವುದಿಲ್ಲ. ಪಾಪಪುಣ್ಯಾದಿ ದ್ವಂದ್ವದುಃಖಗಳಿಲ್ಲದ ಆ ಶರಣನ ರೀತಿಯನ್ನು ನಾನೇನು ಹೇಳಲಿ ! ||೩೪||

ಕರುಹಂ ತೋರುವ ಹಾಂಗೆ ತಾನೆ ಶಿವನೆಂದೆಲ್ಲರ್ಗೆ ತನ್ನಂಗದೊಳ್ |
ಕುರುಹಿಲ್ಲೆಂದೆನಿಸಿರ್ಪ ದಿವ್ಯಶಿವಲಿಂಗಾಕಾರದಿಂ ದೊಪ್ಪುವಾ ||
ಕುರುಹಂ ತಾಳ್ದಿಹ ನೈಸೆ ಜೀವಪರಮೈಕ್ಯಪ್ರತ್ಯಯಾರ್ಥಾತ್ಮಕಂ |
ಕುರುಹುಂಟೇ ಶರಣಂಗೆ ಬೇರೆ ಪೆರತೊಂದೋಹೋ ಶಿವಾವಲ್ಲಭಾ || ||೩೫||

ಟೀಕೆ—ಜೀವಪರಮೈಕ್ಯಪ್ರತ್ಯಯಾರ್ಥಾತ್ಮಕಂ-ಜೀವಪರಮೈಕ್ಯ-ಲಿಂಗಾಂಗೈಕ್ಯದಲ್ಲಿ, ಪ್ರತ್ಯಯ-ಜ್ಞಾನವೇ, ಅರ್ಥ-ಪ್ರಯೋಜನವಾಗುಳ್ಳ, ಆತ್ಮಕಂ-ಸ್ವಭಾವವುಳ್ಳಶರಣನು, ತಾನೆ ಶಿವನೆಂದು-ತಾನೇ ಪರಶಿವನೆಂದು, ಎಲ್ಲರ್ಗೆ-ಸರ್ವರ್ಗೆಯೂ, ಕುರುಹಂ-ಆಕಾರವನು, ತೋರುವಹಾಂಗೆ-ಕಾಣಿಸುವಹಾಂಗೆ, ತನ್ನಂಗದೊಳ್-ತನ್ನ ಶರೀರದಲ್ಲಿ, ಕುರುಹಿಲ್ಲೆಂದೆನಿಸಿರ್ಪ-ಸಾಕಾರರೂಪಿಲ್ಲೆಂದೆನಿಸಿರ್ಪ, ದಿವ್ಯಶಿವಲಿಂಗಾಕಾರದಿಂದೆ-ದಿವ್ಯ-ಮನೋಹರವಾದ, ಶಿವಲಿಂಗಾಕಾರದಿಂದೆ-ಮಂಗಲವಾದ ಲಿಂಗಾಕಾರದಿಂದೆ, ಒಪ್ಪುವ-ಮಿಗೆರಂಜಿಸುವ, ಕುರುಹಂ-ಆಕಾರವನ್ನು, ತಾಳ್ದಿಹ

ನ್ಯೈಸ್–" ಧ್ಯಾನಪೂಜಾನಿಮಿತ್ತಾರ್ಥಂನಿಷ್ಕಳಂಸಕಳಂಭವೇತ್ " ಎಂಬ ವಾಕ್ಯ ಶಾಸ್ತ್ರಾರ್ಥಪ್ರಮಾಣದಿಂ ಧರಿಸಿರ್ಪನಿಷ್ಟೆ, ಶರಣಂಗೆ–ಶಿವಶರಣಂಗೆ, ಬೇರೆ–ಮತ್ತೊಂದು–ಅನ್ಯವಾದುದೊಂದು, ಕುರುಹುಂಟೆ–ಆಕಾರವುಂಟೆ ? ಇಲ್ಲ. ಟಕ್ಕು ಸಾಕು–ಸಾಕು (ಶಿವಶರಣಂಗೆ ಶಿವಲಿಂಗದ ಶರೀರವೇ ಶರೀರವಲ್ಲದೆ ಬೇರೆ ಶರೀರವಿಲ್ಲವೆಂಬುದಭಿಪ್ರಾಯಂ).

ಟಿಪ್ಪಣಿ—ಲಿಂಗಾಂಗಸಾಮರಸ್ಯಜ್ಞಾನವೇ ಇಷ್ಟಾರ್ಥವಾಗುಳ್ಳ ಶರಣನು, ಕಾಣಬುದನ್ನು ಜಗತ್ತಿಗೆ ತೋರಿಸುವಹಾಗೆ ತಾನು ನಿರಾಕಾರಿಯಾಗಿದ್ದರೂ, ಭಕ್ತಾನುಗ್ರಹಾರ್ಥ ಲಿಂಗರೂಪವನ್ನು ಧರಿಸಿರುವ ಶಿವನ ಲಾಂಛನವನ್ನು ಧರಿಸಿರುವನಲ್ಲವೆ ? ಅಂತಪ್ಪ ಶರಣ ಲಿಂಗದ ಆಕಾರವು ಸಹಜವಾದುದಲ್ಲದೆ ಮತ್ತಾವ ಭೌತಿಕದೇಹಾಕಾರವಾದರೂ ಇರುವ್ವ ಲೋಕಾನುಗ್ರಹಾರ್ಥವಾಗಿ ಅಂತಪ್ಪ ಶರಣನು ಲಿಂಗಶರೀರಿಯಾಗಿರುತ್ತಿರುವನೆಂದು ಭಾವವು

ಅರಿಯಂ ತಾ ನರಿದಿರ್ದ್ದ ತನ್ನ ಮರಹಿಂದಂ ತೋರ್ಪ ಮಿಥ್ಯಾರ್ಥಮಂ
ಮರೆಯಂ ತಾಂ ಮರೆದಿರ್ದ್ದ ತನ್ನರಿವಿನಿಂದಂ ತೋರ್ಪ ಸತ್ಯಾರ್ಥಮಂ
ಮರಹಂ ತಟ್ಟದೆ ಮುಟ್ಟ ದೊಂದರಿವಿ ನೇಕಾಕಾರಮಾದಂಗೆ ಮ |
ತ್ತರಿವೆಂದುಂ ಮರಹೆಂದು ಮೋಹೊ ಕುರುಹೆಂದುಂಟೇ ಶಿವಾವಲ್ಲಭಾ ||

ಟೀಕೆ—ತಾನರಿದಿರ್ದ್ದ–ಇದೇ ನಿತ್ಯವೆಂದು ತಾತಿಳಿದಿರ್ದ್ದಂಥ, ತನ್ನ, ಮರಹಿಂದಂ–ಮಾಯೆಯಿಂದ, ತೋರ್ಪ–ತೋರುವ, ಮಿಥ್ಯಾರ್ಥಮಂ–ಮಿಥ್ಯಾಪ್ರಪಂಚವನ್ನು, ಅರಿಯಂ–ಜ್ಞಾನೋದಯವಾದನಂತರದಲ್ಲಿ ಅರಿಯನು. ತಾಂಮರೆದಿರ್ದ್ದ–ತಾನೆ ನಿತ್ಯವೆಂಬುವದನ್ನು ಮರೆತಿರ್ದ್ದಂಥ ಶರಣನು, ತನ್ನರಿವಿನಿಂದಂ–ತನ್ನ ಜ್ಞಾನದಿಂದೆ, ತೋರ್ಪ–ತೋರುವಂಥ, ಸತ್ಯಾರ್ಥಮಂ–ಪರಮಾರ್ಥವನ್ನು, ಮರೆಯಂ–ಮೊದಲಂತೆ ಮರೆಯನು. ಮರಹಂ–ಅಜ್ಞಾನವನ್ನು, ತಟ್ಟದೆ ಮುಟ್ಟದೆ–ಸ್ವಲ್ಪವೂ ಸೋಂಕದೆ, ಒಂದರಿವಿನ–ಒಂದು ಜ್ಞಾನದ, ಏಕಾಕಾರಮಾದಂಗೆ–ಒಂದು ಸ್ವರೂಪವಾದಾತಂಗೆ, ಮತ್ತೆ–ಮರಳಿ, ಅರಿವೆಂದುಂ–ಜ್ಞಾನವೆಂದೂ, ಮರಹೆಂದುಂ–ಅಜ್ಞಾನವೆಂದೂ, ಕುರುಹೆಂದು–ಆಕಾರವೆಂದೂ, ಉಂಟೆ ? ಇಲ್ಲ, ಓಹೋ–ಸಾಕು (" ಸ್ವಾವಿದ್ಯಯಾಸಂಸರತಿ ಸ್ವವಿದ್ಯಯಾಮುಚ್ಯತೆ " ಎಂದು ಮೊದಲಾದ ಉಪನಿಷತ್ತುಂಟು).

ಟಿಪ್ಪಣಿ—ತನಗೆ ಜ್ಞಾನೋದಯ ವಾಗುವುದಕ್ಕೆ ಮುಂಚೆ ಅಜ್ಞಾನದಿಂದ ಯಾವ ಪ್ರಪಂಚವನ್ನು ಇದೇ ನಿತ್ಯವಾದುದೆಂದು ತಿಳಿದಿದ್ದನೋ, ಆದನ್ನು ಅರಿವುಂಟಾದಮೇಲೆ ತಿಳಿಯನು. ಮೊದಲು ತಾನು ಮರೆತಿದ್ದ ತಾನೇ ನಿತ್ಯನೆಂಬ ಸತ್ಯಾರ್ಥವನ್ನು ಅರಿವುಂಟಾದ ಎಂದಿಗೂ ಮರೆಯನು. ಅಂಥ ಮರವೆಯನ್ನು ಲೇಶಮಾತ್ರವೂ ಸೋಂಕದೆ ಜ್ಞಾನಸ್ವರೂಪ ತಾನಾದ ಬಳಿಕ ಅಂತಪ್ಪ ಶರಣನಿಗೆ ಅರಿವು–ಮರವೆ–ಮಾಯೆ–ಆಕಾರ–ವೆಂಬಿವುಗಳಾವುದರೂ ...

ಅವತಾರಿಕೆ—ಇನ್ನು ಆಚಾರ್ಯಂ ಬಾಹ್ಯಾಭ್ಯಂತರ ಪೂಜೆಗಳ ನೆರಡು ಪದ್ಯಂಗಳಿಂ ಪೇಳುತ್ತಿರ್ದಪಂ.

ಜಲಗಂಧಾಕ್ಷತಪುಷ್ಪ ಧೂಪ ವಿಲಸದ್ದೀಪಾನುನೈವೇದ್ಯನಿ |
ರ್ಮಲತಾಂಬೂಲಸಮರ್ಚನಾರ್ಪಣವಿವೇಕಾದಿಕ್ರಿಯಾಕಾರನಿ ||
ಷ್ಕಳಲಿಂಗಾನುಭವೈಕ್ಯಭಾವಭರಿತಂ ಪ್ರತ್ಯಕ್ಪ್ರಸಾದಪ್ರಭಾ |
ವಲಯಜ್ಯೋತಿರಖಂಡಪೂರ್ಣಚರಿತಂ ಭಕ್ತಂ ಶಿವಾವಲ್ಲಭಾ ||೩೭||

ಟೀಕೆ—ಭಕ್ತಂ-ಶಿವಶರಣನು, ಜಲ...ಭಾವಭರಿತಂ-ಜಲ-ಉದಕವು, ಗಂಧ-ಗಂಧವು, ಅಕ್ಷತ-ಅಕ್ಷತೆಯು, ಪುಷ್ಪ-ಪುಷ್ಪವು, ಧೂಪ-ಧೂಪವು, ವಿಲಸತ್-ಒಪ್ಪುವ, ದೀಪ-ದೀಪವು, ಅನು-ಬಳಿಕ, ನೈವೇದ್ಯ-ನಿವೇದನವು, ನಿರ್ಮಲ-ಶುದ್ಧವಾದ, ತಾಂಬೂಲ-ತಾಂಬೂಲವು, ಈ ವಿಧವಾದ, ಸಮರ್ಚನ-ಪೂಜೆಯ, ಅರ್ಪಣ-ಸಮರ್ಪಿಸುವುದರಲ್ಲಿ, ವಿವೇಕ-ವಿಚಾರವು, ಆದಿ-ಮೊದಲಾದ, ಕ್ರಿಯಾಕಾರ-ಜ್ಞಾನಕ್ರಿಯಾಕಾರರೂಪಮಾದ, ನಿಷ್ಕಳ-ಕಳಾತೀತವಾದ, ಲಿಂಗ-ಶಿವಲಿಂಗದ, ಅನುಭವ-ಜ್ಞಾನದಿಂದ, ಐಕ್ಯ-ಸಾಮರಸ್ಯದಲ್ಲಿ, ಭಾವ-ತಾರತಮ್ಯದಿಂದ, ಭರಿತಂ-ತುಂಬಲ್ಪಟ್ಟಾತನು, ಪ್ರತ್ಯಕ್ಪ್ರಸಾದ-ಪ್ರತ್ಯಕ್-ಜೀವನಿಯಾಮಕವಾದ ಪರಬ್ರಹ್ಮದ, ಪ್ರಸಾದ-ಪ್ರಸನ್ನತೆಯಿಂದ, ಪ್ರಭಾವಲಯ-ಕಾಂತಿಮಂಡಲದ, ಜ್ಯೋತಿঃ-ಜ್ಞಾನಪ್ರಕಾಶದಿಂದೆ, ಅಖಂಡ-ಎಡೆವಿಡದಿರ್ಪ, ಪೂರ್ಣ-ಸಕಲಜಗತ್ಪರಿಪೂರ್ಣಮಾದ, ಚರಿತಂ-ಚರಿತ್ರವುಳ್ಳಾತನು "ಅತ್ರಾಯಂಪುರುಷಸ್ಸ್ವಯಂಜ್ಯೋತಿಃ" ಎಂದು ಬ್ರಹ್ಮಬಿಂದೂಪನಿಷತ್ತುಂಟು. ||೩೭||

ಟಿಪ್ಪಣಿ—ಆಭಕ್ತನು ತನ್ನ ಇಷ್ಟಲಿಂಗಕ್ಕೆ ನೀರು ಗಂಧ ಅಕ್ಷತೆ ಹೂವು ಧೂಪ ನೈವೇದ್ಯ ತಾಂಬೂಲ ಈ ಅಷ್ಟ ವಿಧೋಪಚಾರ ಪೂಜೆಯನ್ನು ಸಮರ್ಪಿಸುವ ವಿಚಾರವೇ ಮೊದಲಾದ ಬಾಹ್ಯ ಕ್ರಿಯೆಗಳನ್ನು ಮಾಡುವವನಾಗಿಯೂ, ಕಳಾತೀತವಾದ ಅಂತರ್ಲಿಂಗದ ಅನುಭವದಿಂ ಸಿದ್ಧವಾದ ಸಾಮರಸ್ಯದಿಂ ತುಂಬಿದವನಾಗಿಯು, ತೇಜೋಮಂಡಲವುಳ್ಳ ಪರಂಜ್ಯೋತಿಸ್ವರೂಪನಾಗಿಯೂ, ಲೋಕವ್ಯಾಪ್ತವಾದ ಸಚ್ಚರಿತ್ರೆಯುಳ್ಳವನಾಗಿಯೂ ಇರುವನು. ||೩೭||

ಒಂದೇ ಯಗ್ಗಣಿ ಯೊಂದೆಗಂಧರಸ ಮೊಂದೇಯಕ್ಷತಂ ಪುಷ್ಪಮ |
ಪ್ಪೊಂದೇ ಧೂಪ ಮದೊಂದೆ ದೀಪವಿಧಿ ಯೊಂದೇ ನೋಡೆನೈವೇದ್ಯರೂ ||
ಪೊಂದೇ ಯರ್ಚನವೊಂದೆಯರ್ಪಣಮತಂ ತಾಂಬೂಲವೊಂದೇ ಸಮಂ |
ತೊಂದೇ ಲಿಂಗ ಮನಾದಿಮಧ್ಯನಿಧನಂ ಸತ್ಯಂ ಶಿವಾವಲ್ಲಭಾ ||೩೮||

ಟೀಕೆ—ಒಂದೇಯಗ್ಗಣಿ-ಕ್ಷಮೆಯೆಂಬುದೊಂದೇ ಲಿಂಗಕ್ಕೆ ಮಜ್ಜನೋದಕವು, ಒಂದೆ ಗಂಧರಸಂ-ಸಮಾಧಿಸಂಪತ್ತಿಯೆಂಬುದೊಂದೇ ಗಂಧವು, ಒಂದೇ

ಅಕ್ಷತಂ-ನಿರಹಂಕಾರವೆಂಬುದೊಂದೇ ಅಕ್ಷತೆಯು, ಮತ್ತೆ-ಮರಳಿ, ವೈರಾಗ್ಯವೊಂದೇ ಪುಷ್ಪವು, ಧೂಪಮದೊಂದೆ-ವಿಶ್ವಾಸವೆಂಬುದೊಂದೇ ದೀಪವಿಧಿಯೊಂದೇ-ಜ್ಞಾನವೊಂದೇ ದೀಪವಿಧಿಯು, ನೋಡೆ-ವಿಚಾರಿಸಲಾಗಿ, ದ್ಯರೂಪೊಂದೇ-ಸ್ವಾತ್ಮಾರ್ಪಣರೂಪವೊಂದೇ ನೈವೇದ್ಯವು, ತಾಂಬೂಲಂ ಭಕ್ತಿರಾಗರಸವೊಂದೇ ತಾಂಬೂಲವು, ಅರ್ಚನಮೊಂದೇ-ಒಂದೆಯಾದ ಪೂಜೆಯು, ಅರ್ಪಣಮತಂ-ಸಮರ್ಪಿಸುವಸ್ವರೂಪವು, ಸಮಂತು-ಹಾಂಗೆ, ಮಧ್ಯನಿಧನಂ-ಆದಿಮಧ್ಯಾವಸಾನವಿಲ್ಲದ, ಲಿಂಗಂ-ಮಹಾಲಿಂಗವು, ಪೇಳ್ದಂಟುತೆರನಾದುದೂ ಒಂದೇ, ಸತ್ಯಂ-ಯಥಾರ್ಥವು.

ಟಿಪ್ಪಣಿ—ಅಂಥಪ್ಪ ಭಕ್ತನು ಆರಾಧಿಸುವ ಹೊರಗಣ ಇಷ್ಟಲಿಂಗವೂ ಪ್ರಾಣಲಿಂಗವೂ ಒಂದೇ ಆಗಿ, ಆದಿ ಮಧ್ಯಾಂತ ಶೂನ್ಯವಾದ ಮಹಾಲಿಂಗವಾಗಿರುವುದು. ಕಾರಣ, ಆ ಭಕ್ತನು ಬಾಹ್ಯಾಭ್ಯಂತರಾನುಸಂಧಾನದಿಂದ ಆಚರಿಸುವ ಉಪಚಾರಗಳೂ ಬಾಹ್ಯೋಪಚಾರಗಳೂ ಒಂದೇಯಾಗಿರುವುವು. ಬಾಹ್ಯಪೂಜೆಯಲ್ಲಿ ರ್ಥಗಳು ಉಪಚಾರ ಯೋಗ್ಯಗಳು; ಅಂತಃಪೂಜೆಯಲ್ಲಿ ಮಾನಸಿಕವಸ್ತುಗಳು ಯೋಗ್ಯವು. ದರೆ.—ಪ್ರಾಣಲಿಂಗಪೂಜೆಗೆ ಕ್ಷಮೆಯೇ ಅಭಿಷೇಕಜಲವು, ಚಿತ್ತೈಕಾಗ್ರತೆಯೇ ಗಂಧವು; ರಾಭಾವವೇ ಅಕ್ಷತೆಯು, ವಿರತಿಯೇ ಹೂವು, ಶ್ರದ್ಧೆಯೇ ಧೂಪವು. ಜ್ಞಾನವೇ ಬೆಳಗುವ ದೀಪವು, ಆತ್ಮಸಮರ್ಪಣೆಯೇ ನೈವೇದ್ಯವು, ಭಕ್ತಿರಸವೇ ತಾಂಬೂಲವು. ಹೀಗೆ ಪಚಾರಗಳು ಅಲ್ಲೂ ಇಲ್ಲೂ ಒಂದೇ ತೆರನಾಗಿ ಭಕ್ತನಿಂದ ಆಚರಿಸಲ್ಪಡುವವೆಂದು ಭಾವ.

ಅವತಾರಿಕೆ—ಇಂತು ಬಾಹ್ಯಾಭ್ಯಂತರ ಪೂಜೆಯಂ ಪೇಳಿ, ದೇಹಾದಿಪ್ರಪಂಚವ ತ್ಮಸ್ವರೂಪನಾದ ಶರಣಂಗಿಲ್ಲೆಂದು ಪೇಳುತ್ತಿರ್ದಪಂ—

ದೇಹಪ್ರಾಣಮನೋಹೃಷೀಕನಿಕರಂ ಮಿಥ್ಯಾವಿಕಾರಂಗಡಾ |
ದೇಹಾದಿವ್ಯತಿರಿಕ್ತನಪ್ಪ ಪುರುಷಂ ನಿತ್ಯಂ ವಿಶುದ್ಧಂಗಡಾ ||
ಓಹೋಪ್ರಾಕೃತತದ್ವಿಕಾರಕೃತಮಿಥ್ಯಾಕರ್ಮಮಂ ಮತ್ತೆ ನಿ |
ರ್ದೇಹಾತ್ಮಂಗಿರದುಂಟು ಮಾಳ್ಪರಕಟಾ ಮೂಢರ್ ಶಿವಾವಲ್ಲಭಾ

ಟೀಕೆ—ದೇಹಪ್ರಾಣಮನೋಹೃಷೀಕನಿಕರಂ-ದೇಹ-ಶರೀರವು, ಪ್ರಾಣವು, ಮನಃ-ಮನಸ್ಸು, ಹೃಷೀಕ-ಇಂದ್ರಿಯಂಗಳು-ಇವುಗಳ, ನಿಕರಂ- ಹವು, ಮಿಥ್ಯಾವಿಕಾರಂಗಡಾ-ಮಾಯಾವಿಕಾರವುಕಂಡ ! ದೇಹಾದಿವ್ಯತಿರಿಕ್ತ ದೇಹೇಂದ್ರಿಯಾದಿ ವಿಲಕ್ಷಣನಾದಂಥ, ಪುರುಷಂ-ಆತ್ಮನು, ನಿತ್ಯಂ- ನಾದ, ವಿಶುದ್ಧಂಗಡಾ-ನಿರ್ಮಲನು ಕಂಡ ! ಓಹೋ-ಸಾಕು ಸಾಕು, ಅಜ್ಞಾನಿಗಳು, ಮತ್ತೆ-ಮರಳಿ, ನಿರ್ದೇಹಾತ್ಮಂಗೆ-ದೇಹವ್ಯತಿರಿಕ್ತನಾದ ಪ್ರಾಕೃತತದ್ವಿಕಾರಕೃತಮಿಥ್ಯಾಕರ್ಮಮಂ-ಪ್ರಾಕೃತ-ಮಾಯಾಸಂಬಂಧ

ತದ್ವಿಕಾರ-ಆ ಮಾಯಾಗುಣವಿಕಾರಂಗಳಿಂ, ಕೃತ-ಮಾಡಲ್ಪಟ್ಟ,ಮಿಥ್ಯಾಕರ್ಮಮಂ ವ್ಯರ್ಥವಾದ ಕರ್ಮವನ್ನು, ಇರದೆ-ಸುಮ್ಮನಿರದೆ, ಉಂಟುಮಾಳ್ಪರ್-ಉಂಟುಮಾಡುವರು, ಅಕಟಾ-ಅಯ್ಯೋ ! ||೩೯||

ಟಿಪ್ಪಣಿ—ದೇಹ-ಪ್ರಾಣ-ಮನಸ್ಸು-ಇಂದ್ರಿಯ-ಇವುಗಳೆಲ್ಲಾ ಮಾಯಾವಿಕಾರಗಳು. ಇವೆಲ್ಲಕ್ಕೂ ವಿಲಕ್ಷಣನಾದ ಆತ್ಮನು ಅವಿನಾಶಿಯೂ, ನಿರ್ಮಲನೂ, ಆಗಿರುವನಲ್ಲವೆ ? "ಶಿವಜ್ಞಾನೈಕನಿಷ್ಠಸ್ಯ ನಾಹಂಕಾರಭವಭ್ರಮಃ । ನಚೇಂದ್ರಿಯಭವಂದುಃಖಂತ್ಯಕ್ತದೇಹಾಭಿಮಾನಿನಃ" ಎಂಬ ಸಿದ್ಧಾಂತಶಿಖಾಮಣಿ ವಚನರೀತ್ಯಾ ಶಿವಭಾವಸ್ಥಿತನಾದುದರಿಂದ. ದೇಹಾದಿವಿಕಾರಗಳೊಂದೂ ಇಲ್ಲದಿರುವ ಶರಣಂಗೆ ಮಾಯಾವಿಕಾರಮಯವಾಗಿರುವ ಕರ್ಮದ ಸಂಬಂಧವನ್ನು ಆದೇಕೆ ಉಂಟುಮಾಡುವರು ? ||೩೯||

ದೇಹಪ್ರಾಣಮನಂಗಳೈದೆ ತನಗನ್ಯಂ ತಾ ನವಲ್ಲೆಂ ದುಸಿ |
ದ್ರ್ದಹಾ ಮತ್ತವರಿಚ್ಛೆಯೊ ಳ್ವಿಷಯಸಂಗಂಗೈದು ನಿಷ್ಕಾರಣಂ ||
ಹೋಹಾತಂ ನಿರಯಕ್ಕೆ ಯೋಗಿಯೆ ಶಿವೈಕ್ಯಜ್ಞಾನ ನಿಷ್ಪನ್ನದಾ |
ಸೋಹಂಭಾವವಿಶಿಷ್ಟನೇ ಪರಮಯೋಗೀಂದ್ರಂ ಶಿವಾವಲ್ಲಭಾ ||೪೦||

ಟೀಕೆ—ದೇಹಪ್ರಾಣಮನಂಗಳ್-ಶರೀರಪ್ರಾಣಮನಸ್ಸುಗಳು, ಐದೆ-ಚೆನ್ನಾಗಿ, ತನಗೆ-ಆತ್ಮಂಗೆ, ಅನ್ಯಂ-ಭಿನ್ನವು, ಅವು-ಆ ದೇಹಾದಿಪ್ರಪಂಚಗಳು, ತಾನಲ್ಲವೆಂದು-ತಾನಾಗಿಲ್ಲವೆಂದು, ಉಸಿದ್ರ್ದ-ನುಡಿದು, ಮತ್ತೆ-ಮರಳಿ, ಅವರಿಚ್ಛೆಯೊಳ್-ಅವರ ವಶದಲ್ಲಿ, ವಿಷಯಸಂಗಂಗೈದು-ವಿಷಯಂಗಳಲ್ಲಿ ಕೂಡಿದ್ರ್ದ, ನಿಷ್ಕಾರಣಂ-ಕಾರಣವಿಲ್ಲದೆ, ನಿರಯಕ್ಕೆ-ನರಕಕ್ಕೆ, ಹೋಹಾತಂ-ಹೋಗುವಾತನು, ಯೋಗಿಯೆ-ಶಿವಯೋಗಿಯೆ ? ಅಲ್ಲ. ಶಿವೈಕ್ಯಜ್ಞಾನನಿಷ್ಪನ್ನ ದಾಸೋಹಂಭಾವವಿಶಿಷ್ಟನೇ-ಶಿವೈಕ್ಯಜ್ಞಾನ-ಶಿವಸಾಮರಸ್ಯಜ್ಞಾನದಿಂದ, ನಿಷ್ಪನ್ನ-ಆದಂಥ, ದಾಸೋಹಂಭಾವ-ತಾನೆ ಭೃತ್ಯನೆಂಬಭಾವದಿಂದ, ವಿಶಿಷ್ಟನೇ-ಅಧಿಕನಾದಾತನೇ, ಪರಮಯೋಗೀಂದ್ರಂ-ಉತ್ಕೃಷ್ಟನಾದ ಯೋಗೀಶ್ವರನು. ||೪೦||

ಟಿಪ್ಪಣಿ—ದೇಹ ಪ್ರಾಣ ಮನಸ್ಸುಗಳು ತಾನಲ್ಲ, ಅವು ತನಗೆ ಭಿನ್ನವಾದುವುಗಳು ಎಂದು ಬಾಯಿಂದ ಹೇಳುತ್ತ, ಅವುಗಳಿಗೆ ತಾನು ಅಧೀನನಾಗಿ ಸ್ವಚ್ಛಂದನವನಿತಾದಿ ವಿಷಯಸಂಗವುಳ್ಳವನಾಗಿ, ವ್ಯರ್ಥವಾಗಿ ನರಕಕ್ಕೆ ಹೋಗತಕ್ಕವನು ಶಿವಯೋಗಿಯಾದಾನೆ ? ಶಿವೈಕ್ಯಜ್ಞಾನದಿಂದ ಕಡೆಗೆ ಹುಟ್ಟಿದ ದಾಸೋಹಂ (ಶಿವನು ಸೇವ್ಯ, ನಾನು ಸೇವಕ) ಎಂಬ ಭಾವದಿಂದ ಕೂಡಿರುವವನೇ ಉತ್ಕೃಷ್ಟನಾದ ಶಿವಯೋಗಿಯು. ||೪೦||

ಅವತಾರಿಕೆ—ಇಂತು ದೇಹಾದಿಪ್ರಪಂಚದಿಂ ವ್ಯತಿರಿಕ್ತನಾದ ಶರಣನು ನಾಹಂ ಕೋಹಂ ಸೋಹಮೆಂಬ ಭ್ರಮತ್ರಯವಿಲ್ಲದೆ ನಿರಹಂಭಾವಿಯಾಗಿರ್ಪನೆಂದು ಪೇಳುತ್ತಿರ್ದಪಂ.—

ನಾಹಂಭಾವ ಮದಾತ್ಮನಲ್ಲ ದಿಟ ತಾಂ ಮತ್ತಾವನೆಂದೆಂಬುದೇ |
ಕೋಹಂಭಾವಪದಾರ್ಥ ಸಾಕ್ಷಿ ಯೆನಿಪಾತ್ಮಂ ಸತ್ಯ ಮಾನೆಂಬುದೇ ||

ಸೋಹಂಭಾವಪದಾರ್ಥ ಮಾತ್ಮಪತಿಗಾಂ ದಾಸಂ ಶಿವಂಗೆಂಬದಾ |
ಸೋಹಂಭಾವ ಮದೇ ನಿರೀಹನಿರಹಂಭಾವಂ ಶಿವಾವಲ್ಲಭಾ ||

ಟೀಕೆ—ನಾಹಂಭಾವಂ-ನಾಹಂಭಾವವೆಂದೊಡೆ ಅನಾತ್ಮವಾದ ದೇ ಅದು-ತಾನು, ಆತ್ಮನಲ್ಲ-ಆತ್ಮನಲ್ಲವೆಂಬುದರ್ಥ, ದಿಟ-ನಿಶ್ಚಯ, ಮತ್ತೆ ಕೋಹಂಭಾವಪದಾರ್ಥ-ಕೋಹಮೆಂಬ ವಾಕ್ಯಾರ್ಥವು, ತಾಂ-ತಾನು, ಎಂಬುದೇ-ಆವಾತನೋಯೆಂಬುದೇ, ಸೋಹಂಭಾವಪದಾರ್ಥಂ-ಸೋಹಂಭಾ ಪದಕ್ಕರ್ಥವು, ಸಾಕ್ಷಿಯೆನಿಪ ಆತ್ಮಂ-ದೇಹಾದಿಪ್ರಪಂಚಕ್ಕೆ ಸಾಕ್ಷಿಯಾದಾ ಆನೆಂಬುದೇ-ನಾನೆಂದೆಂಬುದೇ, ಸತ್ಯಂ-ಸಹಜವಾದರ್ಥವು, ಆತ್ಮಪತಿಗೆ-ಪ ಯಾದ, ಶಿವಂಗೆ-ಮಹಾದೇವಂಗೆ, ಆಂ-ನಾನು, ದಾಸನೆಂಬ-ಬಂಟನೆಂಬ, ದಾ ಹಂಭಾವಂ-ದಾಸೋಹಂ ಎಂಬ ಪದಾರ್ಥವು, ಅದೇ-ಅದುತಾನೇ, ನಿರೀಹ ಹತ್ವವುಳ್ಳ, ನಿರಹಂಭಾವಂ-ನಿರಹಂಕಾರತ್ವವು (ಈ ಅರ್ಥದಲ್ಲಿ-"ನಾಹಮನಾ ಪಶ್ಚಾತ್ಕೋಽಹಂ ಯೋಽಹಂಪದಸ್ಥ ಆತ್ಮಾ ಸಾಕ್ಷೀ | ಸೋಽಹಂ ತತ್ಪತಿಶಿವದಾ ಹಂದಾಸೋಽಹಮಿತಿಚರೇದುಪರಿ" ಎಂದುಂಟಾಗಿ)

ಟಿಪ್ಪಣಿ—ಆತ್ಮಭಿನ್ನವಾದ ದೇಹವು ನಾನಲ್ಲವೆಂಬರ್ಥವುಳ್ಳುದು ನಾಹಂಭಾವವು, ಯಾರೆಂಬರ್ಥವುಳ್ಳುದು ಕೋಹಂಭಾವವು, ಸರ್ವಸಾಕ್ಷಿಯಾದ ಆತ್ಮನೇ ನಾನು ಎಂಬರ್ಥ ಸೋಹಂಭಾವವು. ಆತ್ಮರೂಪಿಯಾದ ಶಿವನಿಗೆ ನಾನು ಭೃತ್ಯನೆಂಬರ್ಥವುಳ್ಳುದೇ ನಿರಹಂಕ ದಾಸೋಹಂಭಾವವು.

ನಾಹಂ ಎನ್ನ ನನಾತ್ಮದೃಷ್ಟಿ ಮೊದಲಿಂ ಗಿಲ್ಲಾಗಿ ತಾಂ ಮೋಹದಿಂ |
ಕೋಹಂ ಎನ್ನ ನನಾದಿಸಿದ್ಧಪುರುಷಂ ತಾನಾಗಿ ಸಂದೇಹದಿಂ ||
ಸೋಹಂ ಎನ್ನ ನಿದಿರ್ಚ್ಚಿ ಕಾಣ್ಬುಭಯಭಾವಭ್ರಾಂತಿ ಯಿಲ್ಲಾಗಿ ದಾ |
ಸೋಹಂ ಎನ್ನ ನುಪಾಸ್ಯನಾಗಿ ಶರಣಂ ತಾನೇ ಶಿವಾವಲ್ಲಭಾ ||

ಟೀಕೆ—ಮೋಹದಿಂ-ಪ್ರೀತಿಯಿಂದ, ಅನಾತ್ಮದೃಷ್ಟಿ-ದೇಹವೆಂಬಭಾ ಮೊದಲಿಂಗೆ ಇಲ್ಲಾಗಿ-ಮುನ್ನವೇ ಇಲ್ಲವಾದಕಾರಣ, ನಾಹಂ ಎನ್ನಂ-ನಾಹ ಬವನಲ್ಲ, ತಾಂ-ತಾನು, ಅನಾದಿಸಿದ್ಧಪುರುಷಂ ಆಗಿ-ಅನಾದಿಸಂಸಿದ್ಧವಾದ ತ್ಮನಾದಕಾರಣ, ಸಂದೇಹದಿಂ-ಸಂಶಯದಿಂದೆ, ಕೋಹಂ ಎನ್ನಂ-ಕೋಹಮೆ ನಲ್ಲ, ಇದಿರ್ಚಿ-ಇದಿರಿಸಿಟ್ಟು, ಕಾಣ್ಬ-ತೋರುವ, ಉಭಯಭಾವಭ್ರಾಂತಿಯಿಲ್ಲ ದೃಷ್ಟಾದೃಷ್ಟಭಾವಭ್ರಾಂತಿಯಿಲ್ಲವಾದಕಾರಣ, ಸೋಹಂ ಎನ್ನಂ-ಸೋಹಮೆ ನಲ್ಲ, ಶರಣಂ-ಶರಣನು, ತಾನೇ-ಸ್ವಯಂತಾನಾಗಿ, ಉಪಾಸ್ಯನಾಗಿ-ಉಪಾಸನೆ ಡಲ್ತಕ್ಕವಸ್ತುವಾಗಿ, ದಾಸೋಹಂ ಎನ್ನಂ-ದಾಸೋಹಂ ಎಂಬುವವನಲ್ಲ

ಟಿಪ್ಪಣಿ—ಶರಣನಿಗೆ ತಾನು ದೇಹವೆಂಬ ಭಾವವು ಮೊದಲೇ ಇಲ್ಲವಾದಕಾರಣ ಆತನು "ನಾಹಂ" ಎಂದು ಹೇಳಿಕೊಳ್ಳತಕ್ಕವನಲ್ಲ. ತಾನು ಅನಾದಿ ಸಂಸಿದ್ಧ ಪರಬ್ರಹ್ಮನೇ ಆಗಿರುವ ಕಾರಣ, ಆ ಶರಣನು ನಾನು ಯಾರೆಂಬ ಸಂಶಯಾರ್ಥದ "ಕೋಹಂ" ಎಂಬ ವಾಕ್ಯವನ್ನು ಉಚ್ಚರಿಸತಕ್ಕವನಲ್ಲ. ತನಗೆ ಭಿನ್ನವಾದ ಮತ್ತೊಂದು ವಸ್ತುವನ್ನು ಮುಂದಿರಿಸಿಕೊಂಡು, ಆ ವಸ್ತುವೇ ನಾನೆಂದು ಹೇಳುವ ಉಭಯಭಾವ ಕಲ್ಪನೆಯುಳ್ಳವನಲ್ಲವಾದಕಾರಣ ಆತನು ಸೋಹಂ ವಚನವನ್ನೂ ಹೇಳತಕ್ಕವನಲ್ಲ. ಮತ್ತೂ ತಾನೇ ಉಪಾಸ್ಯನಾಗಿರುವ ಕಾರಣ, ಸ್ವಾಮಿ ಭೃತ್ಯತ್ವ ರೂಪ ಉಭಯಭಾವವೂ ಇಲ್ಲವಾಗಿ ದಾಸೋಹಂವಾಕ್ಯವನ್ನೂ ನುಡಿಯತಕ್ಕವನಲ್ಲ. ||೪೨||

ದಾನಂ ದ್ರವ್ಯಸಮರ್ಪಣಂನಿರುತಮಾದ್ರವ್ಯಾರ್ಪಣಂ ದಾನಮೊಂ |
ದೇ ನಿರ್ಣೀತಪದಾರ್ಥ ಮಾದ ವಿಲಸದ್ದಾಧಾತುಶಬ್ದಕ್ರಿಯಾ ||
ಧೀನಾತ್ಮೀಯತನುತ್ರಯಾದಿಸಕಲದ್ರವ್ಯಂಗಳಂ ಕೊಟ್ಟುನಿಂ |
ದಾನೀಗಳ್ ಶಿವ ನಪ್ಪೆ ನೆಂಬುದಿದು ದಾಸೋಹಂ ಶಿವಾವಲ್ಲಭಾ ||೪೩||

ಟೀಕೆ—ದಾನಂ-ದಾನವೆಂಬುದು, ದ್ರವ್ಯಸಮರ್ಪಣಂ-ದ್ರವ್ಯವಂಸಮರ್ಪಿಸುವಿಕೆಯು, ನಿರುತಂ-ನಿಶ್ಚಯವಾಗಿ, ಆದ್ರವ್ಯಾರ್ಪಣಂ-ಆದ್ರವ್ಯಾರ್ಪಣವೆಂಬುದು, ದಾನಂ-ದಾನವು, ಒಂದೇನಿರ್ಣೀತಪದಾರ್ಥಮಾದ-ನಿಶ್ಚೈಸಲ್ಪಟ್ಟ ಒಂದೇ ಶಬ್ದಾರ್ಥಮಾದ, ವಿಲಸತ್......ದ್ರವ್ಯಂಗಳಂ-ವಿಲಸತ್-ಒಪ್ಪುತ್ತಿರುವ, ದಾಧಾತು-("ದಾ ದಾನೆ") ಎಂಬ ಧಾತುವಿನ, ಶಬ್ದಕ್ರಿಯಾ-ಪದಾರ್ಥವ್ಯಾಪಾರಕ್ಕೆ, ಅಧೀನಂ-ವಶವಾದ, ಆತ್ಮೀಯ-ತನ್ನ ಸಂಬಂಧವಾದ, ತನುತ್ರಯಾದಿ-ಶರೀರತ್ರಯ ಮೊದಲಾದ, ಸಕಲ ದ್ರವ್ಯಂಗಳಂ-ಸಮಸ್ತಪದಾರ್ಥವನ್ನು, ಕೊಟ್ಟು-ಸಮರ್ಪಿಸಿ, ನಿಂದು-ಸ್ಥಿರವಾಗಿ, ಅಂ-ನಾನು, ಈಗಂ-ಈಗಳ್, ಶಿವನಪ್ಪೆಂ-ಶಿವನಪ್ಪೆನು, ಎಂಬುದು-ಹೀಗೆಂಬುದು, ಇದು-ಇದು ತಾನು, ದಾಸೋಹಂ-ದಾಸೋಹಂಭಾವವು. ಈ ಅರ್ಥದಲ್ಲಿ, "ಶರೀರಾದಿಪದಾರ್ಥಂಚ ದತ್ವಾದಾನಂಸಮರ್ಪಣಂ" ಎಂದುಂಟು.

ಟಿಪ್ಪಣಿ—ದಾನವೆಂದರೆ-ದ್ರವ್ಯವನ್ನು ಸಮರ್ಪಿಸುವುದೆಂದರ್ಥ: ದ್ರವ್ಯಸಮರ್ಪಣೆಯೆಂದರೆ-ದಾನವೆಂದರ್ಥ. ಹೀಗೆ ಕೊಡುವಿಕೆಯೆಂಬ ಶಬ್ದಾರ್ಥದಿಂದ ವ್ಯವಹರಿಸಲ್ಪಡುವುದಕ್ಕೆ ಯೋಗ್ಯವಾದ ತನ್ನ ದೇಹಕರಣಾದಿಗಳನ್ನೆಲ್ಲಾ ಸಮರ್ಪಿಸಿ, ನಿರಭಿಮಾನಿಯಾಗಿ ನಿಂತು, ಈಗ ನಾನು ಶಿವನಾದೆನೆಂಬ ನಿಶ್ಚಯಜ್ಞಾನವುಳ್ಳತನವೇ ನಿರಹಂಭಾವವುಳ್ಳ ದಾಸೋಹಂಭಾವವು ||೪೩||

ಆನೆಂದೆಂಬಭಿಮಾನ ಮೆಲ್ಲವರೊ ಳೇನುಂ ಪೊರ್ದ್ದ ದಭ್ಯರ್ಚನ |
ಜ್ಞಾನಧ್ಯಾನಸಮಾಧಿನೈಷ್ಠಿಕತೆಯಿಂ ಸ್ವಾತ್ಮಾರ್ಪಣಂಗೆಯ್ವನು ||
ಪ್ಪಾನಪ್ರಕ್ರಿಯೆ ತಾನೆ ಮತ್ತೆ ನಿರಹಂತಾಮುಕ್ತಿ ಸದ್ಭಕ್ತಿ ಕೇಳ್ |
ನೀನೆಂದೆಂ ಬಭಿಮಾನ ಮೆಲ್ಲವರೊಳತ್ಯರ್ಥಂ ಶಿವಾವಲ್ಲಭಾ ||೪೪||

ಟೀಕೆ—ಶಿವಾವಲ್ಲಭಾ-ಎಲೈ ಪಾರ್ವತೀರಮಣನೆ, ಅತ್ಯರ್ಥಂ-ಮಿಗೆ, ಎಲ್ಲವರೊಳ್-ಎಲ್ಲಾ ಪದಾರ್ಥಂಗಳಲ್ಲಿಯೂ, ನೀನೆಂಬಭಿಮಾನಂ-ನೀನೆಯೆಂಬ ಅಭಿಮಾನವು, ಅಭ್ಯರ್ಚನಜ್ಞಾನಧ್ಯಾನಸಮಾಧಿನೈಷ್ಠಿಕತೆಯಿಂ, ಅಭ್ಯರ್ಚನ-ಪೂಜೆ, ಜ್ಞಾನ-ಜ್ಞಾನದಲ್ಲಿ, ಧ್ಯಾನ-ಧ್ಯಾನದಲ್ಲಿ, ಸಮಾಧಿ-ಸಮಾಧಿಯಲ್ಲಿ, ನೈಷ್ಠಿಕತೆ-ನಿಷ್ಠೆಯುಳ್ಳಹತನದಿಂದ, ಎಲ್ಲವರೊಳ್-ಸಮಸ್ತಪದಾರ್ಥಂಗಳಲ್ಲಿ, ಆನೆಂಬಭಿಮಾನಂ-ನಾನೆಂದೆಂಬಭಿಮಾನವು, ಏನುಂಪೊರ್ದದೆ-ಕಿಂಚಿತ್ತೂ ಹೊಂದದೆ, ಸ್ವಾರ್ಪಣಂಗೆಯ್ವ-ತನ್ನನೆ ಶಿವಂಗೆ ಸಮರ್ಪಿಸುವುದರ, ಅನುಷ್ಠಾನಪ್ರಕ್ರಿಯೆ-ಅನುಷ್ಠಾನ-ಅನುಷ್ಠಾನಮಾಡುವಲ್ಲಿ, ಪ್ರಕ್ರಿಯೆ-ವ್ಯಾಪಾರವು, ತಾನೆ-ಅದೇ, ಮತ್ತೆ-ಮರಳಿ, ನಿರಹಂತಾಮುಕ್ತಿಸದ್ಭಕ್ತಿ-ನಿರಹಂತಾಮುಕ್ತಿ-ನಿರಹಂಕಾರ ಲಕ್ಷಣವಾಗುಳ್ಳ ಮುಕ್ತಿಯು, ಸದ್ಭಕ್ತಿ-ಅಕಳಂಕವಾದ ಭಕ್ತಿಯು ||

ಟಿಪ್ಪಣಿ—ಎಲೈ ಪಾರ್ವತೀಪತಿಯೆ, ಸಕಲಪದಾರ್ಥಗಳಲ್ಲೂ ನಾನು ನನ್ನದೆಂಬುದನ್ನು, ವಹಿಸದೆ, ಎಲ್ಲ ಪದಾರ್ಥಗಳಲ್ಲೂ ನೀನೇಯೆಂಬ ಭಾವವಳವಟ್ಟು, ಪೂಜಾ ಜ್ಞಾನ ಚಿತ್ತೈಕಾಗ್ರತೆಗಳ ಸಮಯದಲ್ಲೆಲ್ಲಾ ಅದೇ ವಿಧದ ನಿಷ್ಠೆಯನ್ನು ಪಡೆದಿದ್ದು ಆತ್ಮಾರ್ಪಣ ಮಾಡುವ ರೀತಿಯೇ ಅಹಂಭಾವಶೂನ್ಯತೆಯುಳ್ಳ ಮುಕ್ತಿಯೆನಿಸಿಕೊಳ್ಳುತ್ತ, ಅದೇ ಸದ್ಭಕ್ತಿ ರುವುದು.

ತನು ಪಂಚೇಂದ್ರಿಯಪಜ್ತ್ತಿ ಬುದ್ಧಿಕರಣಪ್ರಾಣಾದಿಕಂ ಸರ್ವಮಿಂ |
ತೆನಗಾನೆಂಬಭಿಮಾನಮಂ ಪರಮಭಕ್ತಿಜ್ಞಾನಯೋಗೈಕವಾ ||
ಸನೆಯಿಂ ದರ್ಪಿಸಿ ಲಿಂಗದಲ್ಲಿ ಮೆರೆವಾಲಿಂಗಾಭಿಮಾನಿತ್ವವ |
ರ್ತನವಿಾಗಾತ್ಮಸಮರ್ಪಣಂ ವೃಷೆ ಒಳಿಕ್ಕೆಲ್ಲಂ ಶಿವಾವಲ್ಲಭಾ ||

ಟೀಕೆ—ತನು...ಪ್ರಾಣಾದಿಕಂ-ತನು-ದೇಹವು, ಪಂಚೇಂದ್ರಿಯ-ಪಂಚೇಂದ್ರಿಯಗಳ, ಪಜ್ತ್ತಿ-ಸಾಲುಗಳು, ಬುದ್ಧಿಕರಣ-ಬುದ್ಧಿ ಮೊದಲಾದ ಕರಣಂ, ಪ್ರಾಣಾದಿಕಂ-ಪ್ರಾಣವಾಯು ಮೊದಲಾದುದು, ಸರ್ವಂ-ಎಲ್ಲವೂ, ಇಂತು-ಈ ಕಾರದಿಂದೆ, ಎನಗೆ-ಎನ್ನವು, ಆಂ-ಇವೆಲ್ಲವೂ ಆನು, ಎಂಬ-ಹೀಗೆಂಬ, ಅಭಿಮಾನಮಂ-ಅಭಿಮಾನವನ್ನು, ಪರಮಭಕ್ತಿಜ್ಞಾನಯೋಗೈಕವಾಸನೆಯಿಂದೆ, ಪರಮ-ಉತ್ಕೃಷ್ಟವಾದ, ಭಕ್ತಿಜ್ಞಾನಯೋಗ ಭಕ್ತಿಯೋಗಜ್ಞಾನಯೋಗಂಗಳಿಂದ, ಏಕ-ಮುಖ್ಯವಾದ, ವಾಸನೆಯಿಂದೆ-ಸಂಸ್ಕಾರದಿಂದೆ (ಸಂಸ್ಕಾರವೆಂದೊಡೆ-ಭಾವವೆಂಬುದರ್ಥಂ), ಲಿಂಗದಲ್ಲಿ-ಶಿವಲಿಂಗದಲ್ಲಿ, ಅರ್ಪಿಸಿ-ಸಮರ್ಪಿಸಿ, ಮೆರೆವ-ಒಪ್ಪುವಂಥ, ಲಿಂಗಾಭಿಮಾನಿತ್ವವರ್ತನಂ-ಲಿಂಗಾಭಿಮಾನಿತ್ವ-ಸರ್ವವೂ ಲಿಂಗಸ್ವರೂಪವೆಂಬ ಅಭಿಮಾನವನುಳ್ಳತನದ, ವರ್ತನಂ-ನಡತೆಯು, ಈಗ-ಈಗಳು, ಆತ್ಮ

ರ್ಪಣಂ-ಆತ್ಮಸಮರ್ಪಣವು, ಬಳಿಕ್ಕೆ-ಮರಳಿ, ಎಲ್ಲಂ-ನಾನು ನನ್ನದೆಂಬುದು ಮೊದಲಾದುದೆಲ್ಲವೂ, ಮೃಷೆ-ಅಬದ್ಧವು. ||೪೫||

ಟಿಪ್ಪಣಿ—ದೇಹೇಂದ್ರಿಯಕರಣಾದಿಗಳೆಲ್ಲವೂ ನನ್ನವು ಅವೆಲ್ಲವೂ ನಾನು ಎಂಬ ಅಭಿಮಾನವನ್ನು ಭಕ್ತಿಯೋಗ ಜ್ಞಾನಯೋಗಗಳ ಬಲದಿಂದ ಶಿವಲಿಂಗದಲ್ಲೀ ಸಮರ್ಪಿಸಿ, ಕಳೆದುಬಿಟ್ಟು, « ಶಿವಪ್ರಸಾದಸಂಪತ್ತ್ಯಾ ಶಿವಭಾವಮುಪೇಯುಷಾ | ಶಿವಾದನ್ಯಜ್ಜಗಜ್ಜಾಲಂದೃಶ್ಯತೆನಡದೃಶ್ಯತೆ » ಎಂಬ ಪ್ರಮಾಣದಂತೆ ಎಲ್ಲವನ್ನೂ ಶಿವಲಿಂಗಸ್ವರೂಪವನ್ನಾಗಿಯೇ ತಿಳಿದು ನಡೆಯುವುದೇ ಆತ್ಮಾರ್ಪಣವೆನಿಸಿಕೊಳ್ಳುವುದು. ಉಳಿದ ನಾನು ನನ್ನದೆಂಬ ಭಾವಗಳೆಲ್ಲಾ ವ್ಯರ್ಥವಾದುವು. ||೪೫||

ಶಿರಮಂಜಿಹ್ವೆಯ ನಕ್ಷಿಯಂ ಕರಮ ನೇಕೀವ ವ್ಯರ್ಥಾ ಭಕ್ತಿತ |
ತ್ಪರಭಾವಂ ನೆಲೆಗೊಳ್ಳ ದಜ್ಞ ಏದರಿಂದೇಂ ಸಿದ್ಧಿ ತನ್ನಂ ಶಿವಂ ||
ಗರದೀವುತ್ತಮಸತ್ವಮಂ ಮರೆದು ತನ್ನಿಂ ದನ್ಯ ಮಪ್ಪಂಗಮಂ |
ಅರಿದಿತ್ತಲ್ಲಿ ವಿಮುಕ್ತಿಸೌಖ್ಯಪದ ಮುಂಟೇ ಪೇಳ್ ಶಿವಾವಲ್ಲಭಾ ||೪೬||

ಟೀಕೆ—ಅಜ್ಞರ್-ಮೂಢರು, ಭಕ್ತಿತತ್ಪರಭಾವಂ-ಭಕ್ತಿತಾತ್ಪರ್ಯವು, ನೆಲೆಗೊಳ್ಳದೆ-ಸ್ಥಿರವಾಗದೆ, ಶಿರಮಂ-ತಲೆಯನ್ನು, ಜಿಹ್ವೆಯಂ-ನಾಲಗೆಯನ್ನು, ಅಕ್ಷಿಯಂ-ಕಣ್ಣನ್ನು, ಕರಮಂ-ಹಸ್ತವನ್ನು, ವೃಥಾ-ವ್ಯರ್ಥವಾಗಿ, ಏಕೀವರ್-ಏತಕ್ಕೆ ಕೊಡುವರು ? ಇದರಿಂದೆ ಏಂಸಿದ್ಧಿ-ಇವಂ ಕೊಡುವುದರಿಂದೇನುಪ್ರಯೋಜನ ? ತನ್ನಂ-ತನ್ನನ್ನು, ಶಿವಂಗೆ-ಶಿವಲಿಂಗಕ್ಕೆ, ಇರದೆ-ನಿಲ್ಲದೆ, ಈವ-ಕೊಡುವ, ಉತ್ತಮ ಸತ್ವಮಂ-ಶ್ರೇಷ್ಠವಾದ ಸಾತ್ವಿಕಗುಣವನ್ನು, ಮರೆದು-ನೆನೆಯದೆ, ತನ್ನಿಂದೆ-ಆತ್ಮನಿಂ, ಅನ್ಯಮಪ್ಪ-ಬೇರಾದ, ಅಂಗಮಂ-ಅವಯವಂಗಳನು, ಅರಿದು-ಕೊಯ್ದು, ಇತ್ತಲ್ಲಿ-ಕೊಟ್ಟಲ್ಲಿ, ವಿಮುಕ್ತಿಸೌಖ್ಯಪದಂ-ವಿಮುಕ್ತಿ-ಮೋಕ್ಷವೆಂಬ, ಸೌಖ್ಯಪದಂ-ಆನಂದವಾದ ಪದವು, ಉಂಟೆ ? ಪೇಳ್-ಹೇಳು. ಇಲ್ಲವೆಂದರ್ಥ. ||೪೬||

ಟಿಪ್ಪಣಿ—ಭಕ್ತಿತತ್ಪರತೆಯಿಲ್ಲದ ಮೂಢರು ನಿಜದೈವಕ್ಕಾಗಿ ತಲೆಯನ್ನೂ, ನಾಲಗೆಯನ್ನೂ, ಕಣ್ಣನ್ನೂ, ಕೈಯನ್ನೂ ವ್ಯರ್ಥವಾಗಿ ಆದೇಕೆ ಒಪ್ಪಿಸುವರು ? ಹಾಗೆ ಅರ್ಪಿಸುವುದರಿಂದ ಪ್ರಯೋಜನವೇನು ? ಪರಶಿವನಿಗೆ ಆತ್ಮಾರ್ಪಣವನ್ನು ಮಾಡುವ ಶ್ರೇಷ್ಠಸಾತ್ವಿಕ ಗುಣವನ್ನು ಅನುಷ್ಠಾನ ಮಾಡುವುದನ್ನು ಮರೆದು, ತನಗೆ ಭಿನ್ನವಾದ ಅವಯವಗಳನ್ನು ಕೊಯ್ದು ಕೊಟ್ಟರೆ ಅದರಿಂದ ಮೋಕ್ಷಾನಂದವು ಲಭಿಸುವುದೆ ? ||೪೬||

ನಿರಹಂಭಾವ ಮದುಳ್ಳೊಡೆಲ್ಲವರೊಳೇನುಂಬೇಡ ದಾನಂ ತಪ |
ಶ್ಚರಣಂ ಪೂಜನ ಮಂತದಿಲ್ಲದೊಡದೆಲ್ಲಂ ಬಂಧಹೇತುಕ್ರಿಯಾ ||
ಕರಣಂ ಕೊಟ್ಟೊಡ ಮಾಹ ಪೂಜಿಸಿದೊಡಂ ನೋಡಾ ತಪಂಗೈದೊಡಂ |
ಪರಮಾರ್ಥಂ ನಿರಹಂಕೃತಿಕ್ರಿಯೆ ಬಳಿಕ್ಕೆಲ್ಲಂ ಶಿವಾವಲ್ಲಭಾ ||೪೭||

ಟೀಕೆ—ಎಲ್ಲವರೊಳ್-ಸಕಲದಲ್ಲಿಯೂ, ನಿರಹಂಭಾವಂ-ನಿರಹಂಕಾ[illegible] ಅದುಳ್ಳೊಡೆ-ಅದುಂಟಾದೊಡೆ, ದಾನಂ-ದ್ರವ್ಯತ್ಯಾಗವು, ತಪಶ್ಚರಣಂ-ಚಾ[illegible] ಯಣಾದಿತಪದಾಚರಣೆಯು, ಪೂಜನಂ-ಪೂಜೆಯು, ಏನುಂಬೇಡ-ಎಲ್ಲವೂ[illegible] ಕೊಟ್ಟೊಡಂ—ದಾನಮಾಡಿದೊಡೆಯೂ, ಪೂಜಿಸಿದೊಡಂ—ಪೂಜೆಯನ್ನು[illegible] ಯೂ, ತಪಂಗೈದೊಡಂ-ತಪಮಂಮಾಡಿದೊಡೆಯೂ, ಅಂತದು-ಆ ನಿರಹಂ[illegible] ಯೆಂಬುದು, ಇಲ್ಲದೊಡೆ-ಇಲ್ಲದಿರ್ದೊಡೆ, ಅದೆಲ್ಲಂ-ಆ ದಾನಮೊದಲಾದು[illegible] ಬಂಧಹೇತುಕ್ರಿಯಾಕರಣಂ-ಸಂಸಾರಬಂಧಕ್ಕೆ ಕಾರಣವಾದ ವ್ಯಾಪಾರಕ್ಕೆ [illegible] ನವು, ಆಹ-ಆಶ್ಚರ್ಯವು, ಬಳಿಕ್ಕೆ-ಮರಳಿ, ಎಲ್ಲಂ-ಸರ್ವವೂ, ನಿರಹಂಕೃ[illegible] ನೋಡಾ-ನಿರಹಂಭಾವವೆಂಬುದೇ ನೋಡು, ಪರಮಾರ್ಥಂ-ಇದೀಗ ನಿಶ್ಚಯ[illegible]

ಟಿಪ್ಪಣಿ—ತನಗೆ ನಿರಹಂಭಾವವೊಂದಿದ್ದರೆ ಅಷ್ಟೇಸಾಕು ; ದಾನ ತಪಃ ಪೂಜೆ[illegible] ಬೇಕಿಲ್ಲ. ಆ ನಿರಹಂಭಾವವಿಲ್ಲದೆ ಯಾವ ದಾನಮಾಡಿದರೂ, ಯಾವ ಪೂಜೆಯನ್ನು ಮಾ[illegible] ಯಾವ ತಪವನ್ನಾಚರಿಸಿದರೂ ಅವೆಲ್ಲ ಸಂಸೃತಿಬಂಧವ್ಯಾಪಾರಕ್ಕೆ ಸಾಧನವಾಗುವುವು (ಪ್ರ[illegible] ನಿರಹಂಭಾವವೊಂದನ್ನು ತಾಳಲಾರದೆ ನಾನಾ ಕ್ರಿಯಾಚರಣೆಯಲ್ಲಿ ತೊಳಲುವುದು ಆ[illegible] ರ್ಥವು). ಅದುಕಾರಣ, ನಿರಹಂಭಾವಾಚರಣೆಯೆಂಬುದೇ ಮೋಕ್ಷಸಾಧನವು.

ಅವತಾರಿಕೆ—ದ್ವೈತಾದ್ವೈತಗಳಿಂದ ವಿಲಕ್ಷಣವಾದುದೇ ಶರಣಮಾರ್ಗವೆಂದು [illegible] ದರ್ಶಪಂ.—

ಪರಿಪೂರ್ಣಂಗಡ ಬೊಮ್ಮ ಮಕ್ಕಟ ಮಗುಳ್ದೇಕೊಂದು ಠಾವಿಂಗೆ ಪೋ[illegible]
ಪರೊ ಠಾವಿರ್ದ್ದೆಡೆಯಲ್ಲಿ ಕಾಣದೆ ವೃಥಾ ವಾಗ್ಬ್ರಹ್ಮದದ್ವೈತಿಗ ||
ಳ್ಗಿರಿ ಯೆಂದಂಬುಧಿಯೆಂದು ಪುಣ್ಯನದಿಯೆಂದು ಕ್ಷೇತ್ರದ್ವೈವಂಗಳೆಂ |
ದಿರದಯ್ಯೋ ನಿಜನಿಷ್ಠೆ ಯಿಲ್ಲದವರಂ ನೋಡಾಶಿವಾವಲ್ಲಭಾ

ಟೀಕೆ—ಠಾವಿರ್ದ್ದ-ಠಾವಿರುವ, ಎಡೆಯಲ್ಲಿ-ಸ್ಥಾನದಲ್ಲಿ, ಕಾಣ[illegible] ಯದ, ವೃಥಾವಾಗ್ಬ್ರಹ್ಮದ-ವೃಥಾ-ವ್ಯರ್ಥವಾಗಿ, ವಾಗ್ಬ್ರಹ್ಮದ-ವಾಕ[illegible] ದಿಂದ ಬ್ರಹ್ಮವನುಡಿವ, ಅದ್ವೈತಿಗಳ್-ಅಭೇದವಾದಿಗಳು, ಬೊಮ್ಮಂ-ಬ್ರ[illegible] ಪರಿಪೂರ್ಣಂಗಡ-ವ್ಯಾಪಕವಂತಕಂಡ ! ಗಿರಿಯೆಂದು-ಪರ್ವತವೆಂದು, [illegible] ಯೆಂದು-ಸಮುದ್ರವೆಂದು, ಪುಣ್ಯನದಿಯೆಂದು-ಪುಣ್ಯತೀರ್ಥಮೆಂದು, ಕ್ಷೇತ್ರ[illegible] ಗಳೆಂದು-ಪುಣ್ಯಕ್ಷೇತ್ರದ್ವೈವಂಗಳೆಂದು, ಇರದೆ-ಸ್ಥಿರವಾಗದೆ, ಮಗುಳ್ದು-[illegible] ಅಕ್ಕಟ-ಅಯ್ಯೋ, ಒಂದು ಠಾವಿಂಗೆ-ಸ್ಥಳಾಂತರಕ್ಕೆ, ಏಕೆಪೋಪರೋ-ಏನು[illegible] ಹೋಗುವವರೊ ! ನಿಜನಿಷ್ಠೆಯಿಲ್ಲದವರಂ-ಸಹಜವಾದ ಬ್ರಹ್ಮದಲ್ಲಿ ನಿಷ್ಠೆಯ[illegible] ರನ್ನು, ನೋಡಾ-ನೋಡು, ಅಯ್ಯೋ-ಅಕ್ಕಟ, ಅಹಾ-ಆಶ್ಚರ್ಯವು !

ಟಿಪ್ಪಣಿ—ಅದ್ವೈತಸಿದ್ಧಾಂತಪ್ರಕಾರ ಬ್ರಹ್ಮವು ಸರ್ವತ್ರ ಪರಿಪೂರ್ಣವಾದುದಷ್ಟೆ ? ಹಾಗೆಂದು ಬಾಯಿಯಲ್ಲಿ ಬ್ರಹ್ಮವಾದವನ್ನು ಮಾಡತಕ್ಕ ಅದ್ವೈತಿಗಳು ತಾವಿರುವ ಸ್ಥಳದಲ್ಲೇ ಬ್ರಹ್ಮವಿರುವುದನ್ನು ಕಾಣದೆ, ಪರ್ವತ-ಸಮುದ್ರ-ಪುಣ್ಯನದಿ-ಪುಣ್ಯಕ್ಷೇತ್ರ-ದೈವವೆಂದು ಹೇಳಿಕೊಂಡು, ಸ್ಥಳಾಂತರಗಳಿಗೆ ಅರಸಿಕೊಂಡು ಏತಕ್ಕೆ ಹೋಗುವರೊ ! ಅಯ್ಯೋ ! ದೃಢವಾದ ನಂಬುಗೆಯಿಲ್ಲದ ಆ ಭ್ರಾಂತರ ರೀತಿಯನ್ನು ನೋಡು ಇದು ಆಶ್ಚರ್ಯಕರವು. ||೪೮||

ದ್ವೈತಂ ನೋಳ್ಪೊಡೆ ಬೊಮ್ಮಮಂ ನುಡಿವ ವಾಗದ್ವೈತಿಗಳ್ಗೆಲ್ಲವುಂ |
ಮಾತೊಂದಲ್ಲದೆ ಮಿಕ್ಕ ವರ್ತನ ಮದೇಂ ಸದ್ಭಕ್ತ ನಂತಲ್ಲ ಕೇಳ್ ||
ದ್ವೈತಾದ್ವೈತವಿಹೀನ ನೇನುಮರಿಯಂ ತಾನೆಂಬ ಹಂಮಿಲ್ಲಮಾ |
ಯಾತೀತಂ ಬರಿಬೊಮ್ಮಗಿಮ್ಮದೊಡಕಂ ಪೊರ್ದ್ದಂ ಶಿವಾವಲ್ಲಭಾ ||೪೯||

ಟೀಕೆ—ಬೊಮ್ಮಮಂ-ಬ್ರಹ್ಮವನ್ನು, ನುಡಿವ-ಹೇಳವ, ವಾಗದ್ವೈತಿಗಳ್ಗೆ-ಒಣವಾಗದ್ವೈತಿಗಳಿಗೆ, ಮಾತೊಂದಲ್ಲದೆ-ನುಡಿಯೊಂದಲ್ಲದೆ, ಮಿಕ್ಕವರ್ತನಮದೆಂ-ಮಿಕ್ಕನಡತೆಗಳಾವುದೂ, ನೋಳ್ಪೊಡೆ-ವಿಚಾರಿಸುವೊಡೆ, ಎಲ್ಲವುಂ-ಅವರ ವರ್ತನವೆಲ್ಲವೂ, ದ್ವೈತಂ-ಭೇದವೇ, ಸದ್ಭಕ್ತಂ-ಶಿವಭಕ್ತನು, ಅಂತಲ್ಲ-ಒಣವಾಗದ್ವೈತಿಯು ಹಾಂಗಲ್ಲ, ಕೇಳ್-ಅದೆಂತೆಂದೊಡೆ, ದ್ವೈತಾದ್ವೈತವಿಹೀನಂ-ಭೇದಾಭೇದಕ್ಕೆ ವಿಲಕ್ಷಣನು, ಏನುಮರಿಯಂ-ಏನನ್ನೂ ಅರಿಯನು. ತಾನೆಂಬ ಹಮ್ಮಿಲ್ಲ-ತಾನುಎಂಬ ಹಂಕಾರವಿಲ್ಲ, ಮಾಯಾತೀತಂ-ಮಾಯೆಯನು ದಾಟಿದಾತನು, ಬರಿಬೊಮ್ಮಗಿಮ್ಮದೊಡಕಂ-ವ್ಯರ್ಥವಾದ ಬೊಮ್ಮಗಿಮ್ಮ ವೆಂಬ ವಿಘ್ನವನ್ನು, ಪೊರ್ದ್ದಂ-ಹೊಂದನು.

ಟಿಪ್ಪಣಿ—ಬಾಯಿಯಲ್ಲಿ ಬ್ರಹ್ಮವನ್ನು ನುಡಿವ ಬರಿಯ ಒಣ ಅದ್ವೈತಿಗಳಿಗೆ ಆ ಅದ್ವೈತವು ಮಾತಿನಲ್ಲೇ ಹೊರತು ವಿಚಾರಮಾಡಿದರೆ ಅವರ ನಡೆಯಲ್ಲೇನಾದರೂ ಉಂಟೆ ? ನಡೆಯೆಲ್ಲಾ ದ್ವೈತವೇ. ಶಿವಶರಣನ ನಡೆಯಾದರೊ ಆ ಅದ್ವೈತಿಯ ಹಾಗಲ್ಲ. ಅವನು ಭೇದಾಭೇದಕ್ಕೆ ವಿಲಕ್ಷಣನಾಗಿಯೂ, ಸೋಹಂ ಕೋಹಂ ಎಂಬುದು ಮೊದಲಾದ ಅಹಂಭಾವಗಳೊಂದನ್ನೂ ಅರಿಯದವನಾಗಿಯೂ, ನಿರಹಂಭಾವಸಂಪನ್ನನಾಗಿಯೂ, ಮಾಯೆಯನ್ನು ಮೀರಿದವನಾಗಿಯೂ, ವಾಗ್ಬ್ರಹ್ಮಜಾಲದ ತೊಡಕಿಗೆ ಸಿಲ್ಕದವನಾಗಿಯೂ ಇರುತ್ತಿರುವನು. ||೪೯||

ತನ್ನಿಂ ದನ್ಯಮ ನೇನುಮಂ ಬಗೆಯನಾಗಿ ದ್ವೈತಹೀನಂ ಸುಸಂ |
ಪನ್ನಂ ತಾನೆನಿ ಪೊಂದಹಂತೆ ತನಗಿಲ್ಲಂತಾಗ ಲದ್ವೈತಹೀ ||
ನಂನಿರ್ವಾಣಪದಪ್ರಸಿದ್ಧಶರಣಂ ದ್ವಂದ್ವಾತಿಗಂ ವಾಕ್ಕ್ರಿಯಾ |
ಭಿನ್ನಾಚಾರವಿಶಿಷ್ಟ ಷಟ್ಸ್ಥಲಪರಬ್ರಹ್ಮಂ ಶಿವಾವಲ್ಲಭಾ ||೫೦||

ಟೀಕೆ—ತನ್ನಿಂದೆ-ಶರಣನು ತನ್ನತ್ತಣಿಂ, ಅನ್ಯಮಂ-ಬೇರೊಂದನ್ನು, ಏನುಮಂ-ಏನನ್ನೂ, ಬಗೆಯನಾಗಿ-ನೆನೆಯನಾಗಿ, ದ್ವೈತಹೀನಂ-ಭೇದವಿಲ್ಲದಾತನು, ತಾಂ-ತಾನು, ಸುಸಂಪನ್ನಂ ಎನಿಪ-ಜ್ಞಾನಸಂಪನ್ನನೆನಿಸುವ, ಒಂದಹಂತೆ-ಒಂದ

ಹಂಕಾರವು, ತನಗಿಲ್ಲ–ತನಗೆ ಇಲ್ಲವು, ಅಂತಾಗಲ್–ಹಾಂಗಾಗಲಾಗಿ, ಅದ್ವೈ
ನಂ–ಅಭೇದವಿಲ್ಲದಾತನು, ನಿರ್ವಾಣಪದಪ್ರಸಿದ್ಧಶರಣಂ–ನಿರ್ವಾಣಪದ–ಮೋಕ್ಷ
ದಲ್ಲಿ, ಪ್ರಸಿದ್ಧ–ಪ್ರಖ್ಯಾತನಾದ, ಶರಣಂ–ಶಿವಶರಣನು, ದ್ವಂದ್ವಾತಿಗಂ–ದ್ವಂ
ಖಗಳಂಮೀರಿದಾತನು, ವಾಕ್ಕ್ರಿಯಾಭಿನ್ನಾಚಾರವಿಶಿಷ್ಟ ಷಟ್ಸ್ಥಲಪರಬ್ರಹ್ಮ
ಕ್ಕ್ರಿಯಾ–ನುಡಿನಡೆಗಳಲ್ಲಿ, ಅಭಿನ್ನ–ಬೇರಿಲ್ಲದ, ಆಚಾರ–ಆಚರಣೆಯಿಂದ, ವಿ
ಕೂಡಿಂದಥ, ಷಟ್ಸ್ಥಲ–ಷಟ್ಸ್ಥಲಮಾರ್ಗದಲ್ಲಿಯು, ಪರಬ್ರಹ್ಮಂ–ಅಧಿಕವಾದ
ಸ್ವರೂಪನು. ಈ ಅರ್ಥದಲ್ಲಿ–" ದ್ವೈತಾದ್ವೈತಮಯಂಭವತಿ " ಎಂದು ಅಷ್ಟ
ದೋಪನಿಷತ್ತುಂಟು

ಟಿಪ್ಪಣಿ—ಶಿವಶರಣನು = ನಿರಸ್ತಭೇದಜಲ್ಪಸ್ಯನಿರೀಹಸ್ಯಪ್ರಶಾಮ್ಯತಃ | ಸ್ವೇನುಪ್ಲು
ನಸ್ಯಕಿಮನ್ಯದ್ದ್ರಷ್ಟ್ಯಯಮುಚ್ಯತೆ = ಎಂಬ ವಚನದಂತೆ ತನಗೆ ಭಿನ್ನವಾಗಿ ಯಾವ ವಸ್ತು
ಕಾಣುವುದಿಲ್ಲವಾದಕಾರಣ, ಆತನಲ್ಲಿ ದ್ವೈತವೂ ಇರುವುದಿಲ್ಲ. = ಅಕರ್ತಾಹಮವೇತ್ತಾ
ಹೋಹಂನಿರಂಜನಃ | ಇತಿಚಿಂತಯತಸ್ಸಾಕ್ಷಾತ್ಸಂವಿದೇವಪ್ರಕಾಶತೆ = ಎಂಬ ಪ್ರಮಾಣದ
ಜ್ಞಾನಿ ಸರ್ವಾತ್ಮ ಎಂಬೊಂದು ಅಹಂಕಾರವು ಆ ಶರಣನಿಗಿಲ್ಲವಾದಕಾರಣ ಅದ್ವೈತವೂ
ದಿಲ್ಲ. ಅದುಕಾರಣ ಮೋಕ್ಷಪದಪ್ರಾಪ್ತಿಯಲ್ಲಿ ಪ್ರಸಿದ್ಧನಾದ ಶಿವಶರಣನು ದ್ವೈತಾದ್ವೈ
ದ್ವದುಃಖಗಳನ್ನು ಮೀರಿದವನಾಗಿಯುತ್ತ, ನಡೆನುಡಿಗಳೆರಡರಲ್ಲೂ ಒಂದೇ ವಿಧವಾಗಿ ಷಟ್ಸ್ಥ
ಹ್ಮಸ್ವರೂಪನಾಗಿರುವನು.

ಅವತಾರಿಕೆ—ಶಿವಶರಣಂಗೆ ಅರಿಷಡ್ವರ್ಗಂಗಳಿಲ್ಲೆಂದು ಪೇಳುತ್ತಿರ್ದಪಂ—

ಬಿಡಬೇಕೆಂಬರು ಕಾಮಮುಖ್ಯರಿಪುಷಡ್ವರ್ಗಂಗಳಂ ಸಾಧುಗ |
ಳ್ಬಡವ ರ್ಬಿಟ್ಟೊಡೆ ಒಲ್ಲಿದ ರ್ಬಿಡುವರೇ ತದ್ವೈರಮಂ ವೈರಿಗಳ್ ||
ಬಿಡ ರೇಗೈದೊಡೆ ಯಾರುಮಂ ಹರಿಸುರಬ್ರಹ್ಮಾದಿದೇವರ್ಕಳಂ |
ತೊಡಕಿನ್ನೆಂತಹುದೋ ತ್ವದೀಯಕೃತಕಂ ನೋಡಾ ಶಿವಾವಲ್ಲಭಾ ||

ಟೀಕೆ—ಸಾಧುಗಳ್–ಸತ್ಪುರುಷರುಗಳು, ಕಾಮಮುಖ್ಯರಿಪುಷಡ್ವರ್ಗಂ
ಳಂ–ಕಾಮ ಮೊದಲಾದ ಅರಿಷಡ್ವರ್ಗಂಗಳನ್ನು, ಬಿಡಬೇಕೆಂಬರು–ಬಿಡಬೇಕೆಂ
ಬರು, ಬಡವರ್–ಬಡವರಾದವರು, ಬಿಟ್ಟೊಡೆ–ಬಿಟ್ಟರೆ, ತದ್ವೈರಮಂ–ಆ ಹ
ವನ್ನು, ಬಲ್ಲಿದರ್–ಬಲವಂತರಾದವರು, ಬಿಡುವರೇ–ಬಿಡರು. ವೈರಿಗಳ್–ಕಾಮ
ಶತ್ರುಗಳು, ಹರಿಸುರಬ್ರಹ್ಮಾದಿದೇವರ್ಕಳಂ–ವಿಷ್ಣು ದೇವೇಂದ್ರ ಬ್ರಹ್ಮ ಮೊದ
ವರನ್ನು, ಆರುಮಂ–ಯಾರನ್ನೂ, ಏಗೈದೊಡೆ–ಏನುಮಾಡಿದೊಡೆಯೂ, ಬಿಡರು–
ಜೆಸರು. ತೊಡಕು–ಈ ಪ್ರತಿಬಂಧವು, ಇನ್ನೆಂತಹುದೋ–ಇನ್ನೆಂಥಾದ್ದೋ! ತ್ವ
ಯಕೃತಕಂ–ನೀನಿಕ್ಕಿದಕಪಟವು, ನೋಡಾ–ನೋಡು.

ಟಿಪ್ಪಣಿ—ಸತ್ಪುರುಷರು ಕಾಮಾದ್ಯರಿಷಡ್ವರ್ಗಗಳನ್ನು ದೂರೀಕರಿಸಬೇಕೆಂದು ಸ್ವಾ
ನುಡಿಯುವರು. ಆದರೆ ಅವುಗಳನ್ನು ಬಡವರೇನೊ ಬಿಟ್ಟರೂ ಬಿಡಬಹುದು ; ಬಲವಂ

ಬಿಡುವುದುಂಟೆ ? ಆ ಕಾಮಾದಿಷಡ್ವರ್ಗವು ವಿಷ್ಣುಬ್ರಹ್ಮಾದಿಗಳಾರನ್ನು ಸಹ ಯಾವ ಪ್ರಕಾರದಿಂದಲೂ ಬಿಟ್ಟುವುಗಳಲ್ಲ. ಎಲೈ ಪರಶಿವನೆ ! ಈ ಷಡ್ವರ್ಗಗಳ ತೊಡಕು ಎಷ್ಟು ಬಲವತ್ತರವಾದುದು! ಅದು ನೀನೆಸಗಿರುವ ಕಪಟವಲ್ಲವೆ ? ||೫೧||

ಅರಿಷಡ್ವರ್ಗಮ ನಕ್ಕಟಾ ಬಿಡದೆ ಕೂಡಿರ್ದ್ದಲ್ಲಿ ತಾನಪ್ಪ ತ |
ತ್ಪುರುಷಾರ್ಥಂ ಕಡೆಗೇನು ಮೇನುವಹುದಿಲ್ಲಂತಾಗಿ ಬಿಟ್ಟಿರ್ಪ್ಪವೆಂ ||
ಬರು ಧೀಮಂತರು ತದ್ಗ್ರಹಂಗಳವು ತಾವೇ ತಮ್ಮ ಸಾಮರ್ಥ್ಯನಿ |
ರ್ಭರದಿಂದಂ ಪಿಡಿದಿರ್ಪ್ಪುವಿನ್ನವ ರದೇಗೈವ ಶಿವಾವಲ್ಲಭಾ ||೫೨||

ಟೀಕೆ—ಧೀಮಂತರು-ಬುದ್ಧಿವಂತರು, ಅರಿಷಡ್ವರ್ಗಮಂ-ಕಾಮಾದಿ ಷಡ್ವರ್ಗಂಗಳನ್ನು, ಬಿಡದೆ-ವಿಸರ್ಜಿಸದೆ, ಕೂಡಿರ್ದಲ್ಲಿ-ಕೂಡಿಕೊಂಡಿರ್ದಲ್ಲಿ, ತಾನಪ್ಪ-ತಾನಾಗುವ, ತತ್ಪುರುಷಾರ್ಥಂ-ಆ ಪುರುಷಾರ್ಥವು, ಕಡೆಗೇನು-ಕಡೆಗೇನುಂಟು ? ಏನುವಹುದು-ಏನುಪ್ರಯೋಜನವಾಗುವುದಕ್ಕೆ, ಇಲ್ಲ-ನಾಸ್ತಿ, ಅಕಟಾ-ಅಯ್ಯೋ, ಅಂತಾಗಿ-ಅದುಕಾರಣವಾಗಿ, ಬಿಟ್ಟಿರ್ಪ್ಪವೆಂಬರು-ವಿಸರ್ಜಿಸಿರ್ಪೆವೆಂಬರು, ತದ್ಗ್ರಹಂಗಳವು-ಕಾಮಾದಿ ಪಿಶಾಚಂಗಳವು, ತಾವೇ, ತಮ್ಮ ಸಾಮರ್ಥ್ಯನಿರ್ಭರದಿಂದಂ-ತಾವು ತಮ್ಮ ಬಲ್ಮೆಯ ಪೆರ್ಚುಗೆಯಿಂದೆ, ಪಿಡಿದಿರ್ಪ್ಪುವು-ಹಿಡಿದುಕೊಂಡಿರ್ಪುವು, ಇನ್ನು-ಇಷ್ಟರಮೇಲೆ, ಅವರ್-ಆ ಸಾಧುಗಳು, ಏಗೈವರ್-ಏನುಮಾಡುವರು ? ||

ಟಿಪ್ಪಣಿ—ಅರಿಷಡ್ವರ್ಗವನ್ನು ಕೂಡಿಕೊಂಡಿದ್ದರೆ ಕಡೆಗಾಗುವ ಪುರುಷಾರ್ಥವೇನು ? ಅದರಿಂದಾವ ಪ್ರಯೋಜನವೂ ಇಲ್ಲ. ಅದುಕಾರಣವೇ ಅವುಗಳನ್ನು ಪರಿತ್ಯಜಿಸಿದ್ದೇವೆಯೆಂದು ಬುದ್ಧಿಶಾಲಿಗಳು ನುಡಿಯುವರು. ಆದರೆ, ಆ ಕಾಮಾದಿ ಪಿಶಾಚಗಳು ತಾವಾಗಿಯೇ ಬಲವಾಗಿ ಅವರುಗಳನ್ನು ಹಿಡಿದುಕೊಂಡಿರುವಾಗ ಅವರೇನುಮಾಡುವರು ? ||೫೨||

ಕಾಮ ಕ್ರೋಧ ವಿಲೋಭ ಮೋಹ ಮದ ಮಾತ್ಸರ್ಯಂಗಳಂ ಬಿಟ್ಟುಸ |
ದ್ಯೋಮುಕ್ತಿಸ್ಥಿತಿಯಲ್ಲಿ ನಿತ್ಯಸುಖಿಯಾಗಿರ್ಪ್ಪೊಂದು ನಿರ್ಬಾಧೆ ವಿ ||
ಶ್ರಾಮಂ ಪೊಲ್ಲ ಮದೊಳ್ಳಿತೇ ಹಗೆಯಕೂಟಂ ಕೂಡಿಕೊಂಡಿರ್ಪ್ಪೊಡ |
ಯ್ಯೋಮಾಯಾನಿಯತಪ್ರವೃತ್ತಿ ಗವ ರೇಗೈವ ಶಿವಾವಲ್ಲಭಾ ||೫೩||

ಟೀಕೆ—ಕಾಮಕ್ರೋಧ ವಿಲೋಭಮೋಹಮದಮಾತ್ಸರ್ಯಂಗಳಂ-ಕಾಮ ಮೊದಲಾದ ಅರಿಷಡ್ವರ್ಗಂಗಳನ್ನು, ಬಿಟ್ಟು-ಸಾಧುಗಳಾದವರು ವಿಸರ್ಜಿಸಿ, ಸದ್ಯೋಮುಕ್ತಿಸ್ಥಿತಿಯಲ್ಲಿ-ಜೀವನ್ಮುಕ್ತಿಸ್ಥಿತಿಯಲ್ಲಿ, ನಿತ್ಯ ಸುಖಿಯಾಗಿರ್ಪ-ಸದಾನಂದಸ್ವರೂಪವಾಗಿರ್ಪ, ಒಂದು-ಅದುತಾನೊಂದು, ನಿರ್ಬಾಧೆ-ಬಾಧೆಯಿಲ್ಲದ, ವಿಶ್ರಾಮಂ-ವಿಶ್ರಾಂತಿಯು, ಹಗೆಯಕೂಟಂಕೂಡಿಕೊಂಡಿರ್ಪ್ಪೊಡೆ—ವೈರಿಗಳ ಕೂಟವನ್ನು ಕೂಡಿಕೊಂಡಿರುವೊಡೆ, ಒಳ್ಳಿತೆ-ಒಳ್ಳಿತಲ್ಲ, ಅದುಪೊಲ್ಲಂ-ಅದುಸಲ್ಲದು, ಮಾಯಾ

ನಿಯತಿಪ್ರವೃತ್ತಿಗೆ—ಮಾಯಾ--ಮಾಯೆಯೆಂಬ, ನಿಯತಿ—ನಿಯಮನರೂ ಶಕ್ತಿಯ, ಪ್ರವೃತ್ತಿಗೆ-ಪ್ರವರ್ತನೆಗೆ, ಅವರ್-ಆ ಸಾಧುಗಳು, ಏನ್ನೈವರ್ ಮಾಡುವರು ? ಅಯ್ಯೋ-ಅಕಟ !

ಟಿಪ್ಪಣಿ—ಕಾಮಕ್ರೋಧಾದಿ ಷಡ್ವರ್ಗಗಳನ್ನು ತ್ಯಜಿಸಿ, ಜೀವನ್ಮುಕ್ತಸ್ಥಿತಿಯಲ್ಲಿ ಮಯವಾಗಿದ್ದರೆ, ಅದೇ ನಿರುಪಾಧಿಕವಾದ ಸಂಸೃತಿ ವಿಶ್ರಾಂತಿಯಾಗಿರುವುದು. ಅದು ಕಾಮಾದಿರಿಪುಗಳನ್ನು ಕೂಡಿಕೊಂಡಿದ್ದರೆ ಅದು ಒಳ್ಳೆಯದೆ ? ಆದರೆ, ದುರ್ಲಂಘ್ಯವಾ ಯ ಶಾಸನರೂಪವಾದ ಶಕ್ತಿಯು ಅವರುಗಳನ್ನು ಹಾಗೆ ನಡೆಯಿಸುತ್ತಿರುವಾಗ, ಅದು ಸಾಧುಗಳೇನುಮಾಡುವರು ?

ಸುಖಮಂ ಕಾಂಕ್ಷಿಪ ರ್ಪೈಸೆ ಸರ್ವರು ಮನೇಕಾಯಾಸದಿಂ ಯತ್ನದಿಂ |
ದಖಿಲೋಪಾಯದಿ ನಲ್ಲದೂಹಿಪರೆ ನಾನಾಯುಕ್ತಿಯಿಂ ದುಃಖಮಂ ||
ಸುಖಕೆಂದಿಟ್ಟ ಸೊಡ ರ್ನಿಮಿರ್ದ್ದು ಮನೆಯಂ ಸುಟ್ಟಂದದಿಂ ದುಃಖಮಂ
ಸುಖಕಾಮತ್ವವೆ ಮಾಳ್ಪು ಡಂತದು ಭವತ್ಕೃತ್ಯಂ ಶಿವಾವಲ್ಲಭಾ ||

ಟೀಕೆ—ಸರ್ವಂ—ಎಲ್ಲರೂ, ಅನೇಕಾಯಾಸದಿಂ—ಬಹಳ ಪ್ರಯಾಸ ಯತ್ನದಿಂದೆ--ಪ್ರಯತ್ನದಿಂದ, ಅಖಿಲೋಪಾಯದಿಂ--ಸಮಸ್ತೋಪಾಯ ನಾನಾಯುಕ್ತಿಯಿಂ-ಹಲವುಯುಕ್ತಿಗಳಿಂದ, ಸುಖಮಂ-ಪರಿಣಾಮವನ್ನು, ಕಾ ಪರ್ರೈಸೆ-ಬಯಸುವರಲ್ಲದೆ, ದುಃಖಮಂ-ಕ್ಲೇಶವನ್ನು, ಊಹಿಪರೆ-ನೆನೆಯು ಸುಖಕೆಂದು-ಸುಖಕ್ಕೆಂದು, ಇಟ್ಟ-ಮಡಗಿದ, ಸೊಡರ್-ದೀಪವು, ನಿಮಿ ರ್ಪರ್ಬಿ, ಮನೆಯಂ-ಗೃಹವನ್ನು, ಸುಟ್ಟಂದದಿಂ-ದಹಿಸಿದಹಾಂಗೆ, ಸುಖಕಾಮ ಸುಖವಬಯುಸುವತನವೇ, ದುಃಖಮಂ-ಕ್ಲೇಶವನ್ನು, ಮಾಳ್ಪುಡೆ-ಮಾಡು ಅಂತದು-ಅದುತಾನು, ಭೋಶಿವಾವಲ್ಲಭಾ-ಎಲೈ ಪಾರ್ವತೀರಮಣನೆ, ಭ ತ್ಯಂ-ನಿನ್ನ ಕಪಟವಲಾ.

ಟಿಪ್ಪಣಿ—ಎಲ್ಲರೂ ಬಹು ಪ್ರಯಾಸದಿಂದಲೂ, ನಾನಾಪ್ರಯತ್ನಗಳಿಂದಲೂ, ಉಪಾ ಯಗಳಿಂದಲೂ, ಯುಕ್ತಿಗಳಿಂದಲೂ, ತಮಗೆ ಸೌಖ್ಯವನ್ನುಂಟುಮಾಡಿಕೊಳ್ಳಬೇಕೆಂದು ಆಶಿ ವರೇ ಹೊರತು, ದುಃಖವುಂಟಾಗಬೇಕೆಂದು ಬಯಸುವರೆ ? ಇಲ್ಲ. ಆದರೆ, ಸೌಖ್ಯಕ್ಕಾಗಿ ದೀಪವು ಹೊತ್ತಿಕೊಂಡು ಮನೆಯನ್ನೇ ಸುಟ್ಟಹಾಗೆ, ಆ ಸತ್ಪುರುಷರುಗಳ ಸುಖಾಪೇಕ್ಷೆಯ ರಿಗೆ ದುಃಖವನ್ನುಂಟುಮಾಡಬೇಕಾದರೆ, ಎಲೈ ಪರಶಿವನೆ ! ಅದು ನೀನು ಮಾಡಿದ ಮಾಟವ

ಅರಿಯಂ ವ್ಯಾಘ್ರಮ ನಗ್ನಿಯಂ ಭುಜಗನಂ ದಾರಿದ್ರ್ಯಮಂ ರೋಗಮಂ
ಜರೆಯಂ ಮೃತ್ಯುಮ ನಕ್ಕಟಾ ಬಿಡದ ರುಂಟೇ ಲೋಕದೊಳ್ಬಿಟ್ಟಪರೀ ||
ಶ್ವರಸೌಖ್ಯಾಸ್ಪದ ರಾಗಬೇಕೆನುತೆ ಯತ್ನಂಗೈವ ರ್ಪೈಸಲ್ಲದಾ |
ದರದಿಂ ಕೂಡಿರಬೇಕೆನು ತ್ತಿಪರೆ ದೀಮುಂತರ್ಪ ಶಿವಾವಲ್ಲಭಾ

ಟೀಕೆ—ಲೋಕದೊಳ್-ಜಗತ್ತಿನಲ್ಲಿ, ಅರಿಯಂ-ಹಗೆಯನ್ನು, ವ್ಯಾಘ್ರಮಂ-ಹುಲಿಯನ್ನು, ಅಗ್ನಿಯಂ-ಬೆಂಕಿಯನ್ನು, ಭುಜಗನಂ-ಸರ್ಪವನ್ನು, ದಾರಿದ್ರ್ಯಮಂ-ದರಿದ್ರತ್ವವನ್ನು, ರೋಗಮಂ-ವ್ಯಾಧಿಯನ್ನು, ಜರೆಯಂ-ಮುಪ್ಪನ್ನು, ಮೃತ್ಯುಮಂ-ಮರಣವನ್ನು, ಬಿಡದರ್-ಬಿಡದವರು, ಉಂಟೆ ? ಬಿಟ್ಟರ್-ಬಿಟ್ಟವರೇ, ಧೀಮಂತರ್-ಬುದ್ಧಿವಂತರು, ಈಶ್ವರಸೌಖ್ಯಾಸ್ಪದರ್-ಈಶ್ವರ-ಪರಮೇಶ್ವರನಲ್ಲಿಯ, ಸೌಖ್ಯ-ಸುಖಕ್ಕೆ, ಆಸ್ಪದರ್-ಸ್ಥಾನರು, ಆಗಬೇಕೆನುತೆ-ಆಗಬೇಕೆನುತ್ತ, ಯತ್ನಂಗೈವರೈಸಲ್ಲದೆ-ಪ್ರಯತ್ನಂಗೈವರೈಸಲ್ಲದೆ, ಆದರದಿಂ-ಪ್ರೀತಿಯಿಂದ, ಕೂಡಿರಬೇಕೆನುತ್ತಿಹರೆ-ಕಾಮಾದಿಗಳಲ್ಲಿ ಕೂಡಿರಬೇಕೆನುತ್ತಿಹರೆ ? ಇರರು. ||೫೫||

ಟಿಪ್ಪಣಿ—ಲೋಕದಲ್ಲಿ ಶತ್ರುವನ್ನೂ, ಹುಲಿಯನ್ನೂ, ಬೆಂಕಿಯನ್ನೂ, ಸರ್ಪವನ್ನೂ, ಬಡತನವನ್ನೂ, ರೋಗವನ್ನೂ, ಮುಪ್ಪನ್ನೂ, ಮರಣವನ್ನೂ ಬಿಡದೆ ಕಟ್ಟಿಕೊಂಡಿರಬೇಕೆನ್ನುವವರುಂಟೆ ? ಅವುಗಳನ್ನು ಪರಿತ್ಯಜಿಸಿದವರೇ ಬುದ್ಧಿಶಾಲಿಗಳು. ಅಂತಹವರು ಶಿವೈಕ್ಯಸುಖಾನುಭವಿಗಳಾಗಬೇಕೆಂದು ಪ್ರಯತ್ನಿಸುವರೇ ಹೊರತು, ಕಾಮಾದಿಷಡ್ರಿಪುಗಳಲ್ಲಿ ಪ್ರೀತಿಯಿಂದ ಕೂಡಿಕೊಂಡಿರಬೇಕೆಂದು ಬಯಸುವರೆ ? ||೫೫||

ಬಿಡುವಾಗೇಂ ಪಿಡಿದಿರ್ದ್ದರುಂಟೆ ರಿಪುವಂ ಕಾಮಾದಿಯಂ ಮುನ್ನವಂ |
ಪಿಡಿವಾಗೇನದು ಮುಕ್ತಿಸೌಖ್ಯಕರಮೇ ವ್ಯರ್ಥಕ್ಕೆ ಮಾತಾಡುವ ||
ರ್ಬಿಡಬೇಕೆನ್ನುತೆ ತಾವೆ ಬಲ್ಪಿಡಿವವೋಲ್ ಮಾಳ್ಪಾಭವನ್ಮಾಯೆಯಂ |
ಬಿಡ ಲೇಂ ಮಾತಿನ ಮಾಲೆಯುಂತಹುದೆ ದುರ್ಲಂಘ್ಯಂ ಶಿವಾವಲ್ಲಭಾ ||೫೬||

ಟೀಕೆ—ಕಾಮಾದಿಯಂ—ಕಾಮಾದಿಗಳಾದ, ರಿಪುವಂ—ಅರಿಷಡ್ವರ್ಗಂಗಳನ್ನು, ಬಿಡುವಾಗ-ವಿಸರ್ಜಿಸುವಾಗ, ಪಿಡಿದಿರ್ದ್ದರುಂಟೇಂ-ಪಿಡಿದುಕೊಂಡಿರ್ದವರುಂಟೇನು ? ಅವಂ-ಆ ಕಾಮಾದಿಗಳನ್ನು, ಮುನ್ನೆ-ಮೊದಲು, ಪಿಡಿವಾಗ-ಗ್ರಹಿಸುವಾಗ, ಅದು-ತಾನು, ಮುಕ್ತಿಸೌಖ್ಯಕರಮೇ-ಮೋಕ್ಷಸುಖವಮಾಡುವುದೇನು ? ಅಲ್ಲ. ವ್ಯರ್ಥಕ್ಕೆ-ಬರಿದೆ, ಬಿಡಬೇಕೆನ್ನುತೆ-ಬಿಡಬೇಕೆಂದು, ಮಾತಾಡುವರ್-ಮಾತನುಡಿವರು, ತಾವೆ-ಆ ಕಾಮಾದಿಗಳು ತಾವೇ, ಬಲ್ಪಿಡಿವವೋಲ್-ಬಲ್ಲಿತಾಗಿ ಪಿಡಿವಹಾಂಗೆ, ಮಾಳ್ಪ-ಮಾಡುವಂಥ, ಭವನ್ಮಾಯೆಯಂ-ನಿನ್ನಮಾಯೆಯನ್ನು, ಬಿಡಲ್-ಬಿಡಲು, ಮಾತಿನಮಾಲೆಯುಂತಹುದೆ-ಮಾತಿನಮಾಲೆಯಹಾಗಹುದೆಯೇನು ? ದುರ್ಲಂಘ್ಯಂ-ದಾಂಟಲಶಕ್ಯವು. ||೫೬||

ಟಿಪ್ಪಣಿ—ಎಲೈ ಪಾರ್ವತೀಪತಿಯೆ ? ಕಾಮಕ್ರೋಧಾದಿ ರಿಪುಗಳು ಬಿಟ್ಟುಹೋಗುವಾಗ ಅವನ್ನು ಬಿಡದಂತೆ ಹಿಡಿದುಕೊಂಡಿದ್ದವರಾರಾದರೂ ಉಂಟೆ ? ಮತ್ತೂ, ಮೊದಲು ಆ ಕಾಮಾದಿಗಳು ತನ್ನನ್ನು ಹಿಡಿಯುವಾಗ "ಆ ಕಾಮಾದಿಗಳ ಕೂಟವು ಮೋಕ್ಷಾನಂದವನ್ನುಂಟುಮಾಡುವುದೊ ? ಆದನ್ನು ಬಿಡಬೇಕು" ಎಂದು ಸುಮ್ಮಸುಮ್ಮನೆ ಮಾತನಾಡತಕ್ಕವರು, ಅವರಾಗಿಯೇ

ಆ ಕಾಮಾದಿಗಳನ್ನು ಬಲವಾಗಿ ಹಿಡಿದುಕೊಳ್ಳುವಂತೆ ಮಾಡತಕ್ಕ ಪ್ರಸಿದ್ಧವಾದ ... ಯನ್ನು ಪರಿತ್ಯಜಿಸಬೇಕಾದರೆ ಅದೇನು ಬರಿಯಮಾತನಾಡಿದಂತೆ ಸುಲಭವೆ? ಆ ... ಯನ್ನು ದಾಂಟುವುದು ಸುಲಭವಲ್ಲ.

ಘಡ ಕಾಮಾದಿಗ ಳೆಂಬಿವಿಲ್ಲವರ ಸಂಗಂ ಮುನ್ನೆ ತಾ ನಿಲ್ಲವಂ |
ಬಿಡಬೇಕೆಂಬುದದೇನು ಮಿಲ್ಲವರೊ ಳಿರ್ಪ್ಪಾಸಕ್ತಿಯಿಷ್ಟಿಲ್ಲವ ||
ಕ್ಕೆಡೆಯಾಗಿರ್ಪ್ಪಭಿಮಾನವೃತ್ತಿ ಸಿನೆಯಿಲ್ಲೇನೆಂಬೆ ನಾಶ್ಚರ್ಯಮಂ |
ಮೃಡ ನಿನ್ನುದ್ಧತಭಕ್ತನುನ್ನತಿಕೆಯಂ ನೋಡಾ ಶಿವಾವಲ್ಲಭಾ

ಟೀಕೆ—ಮೃಡ—ಭಕ್ತರ್ಗೆಸುಖವಂಮಾಡುವ, ಭೋಶಿವಾವಲ್ಲಭಾ—ಪಾರ್ವತೀರಮಣನೆ, ಕಾಮಾದಿಗಳೆಂಬಿವು—ಕಾಮ ಮೊದಲಾದ ಅರಿಷಡ್ವರ್ಗ... ಇಲ್ಲ—ನಿನ್ನಭಕ್ತಂಗೆ ಇಲ್ಲ, ಅವರ—ಆ ಕಾಮಾದಿಗಳ, ಸಂಗಂ—ಸಂಪರ್ಕವು ... ಮೊದಲೇ, ತಾಂಇಲ್ಲ—ನಷ್ಟವಾಗಿಹೋದುವು, ಅವಂ—ಆ ಕಾಮಾದಿಗಳ... ಬೇಕೆಂಬುದು—ವಿಸರ್ಜಿಸಬೇಕೆಂಬುದು, ಅದೇನುಮಿಲ್ಲ—ಅದರಸುದ್ದಿಯೇನೂ ... ಅವರೊಳ್. ಇರ್ಪ್ಪ—ಆ ಕಾಮಾದಿಗಳಲ್ಲಿರ್ಪ, ಆಸಕ್ತಿ—ಬಯಕೆ, ಇಷ್ಟಿಲ್ಲ—... ತ್ರವೂ ಇಲ್ಲ, ಅವಕ್ಕೆ—ಆ ಕಾಮಾದಿಗಳಿಗೆ, ಎಡೆಯಾಗಿರ್ಪ—ವಶವಾಗಿರ್ಪ, ... ನವೃತ್ತಿ—ಅಭಿಮಾನಪ್ರವರ್ತನೆಯು, ಸಿನೆಯಿಲ್ಲ—ಏನೂಯಿಲ್ಲ, ಆಶ್ಚರ್ಯಮ... ದ್ಯವನು, ಏನೆಂಬೆಂ—ಏನೆಂದು ಹೇಳುವೆನು! ಘಡ—ಭಲರೆ! ನಿನ್ನುದ್ಧತಭಕ್ತ—ಸಂಬಂಧವಾಗಿ ಸಲುಗೆಯುಳ್ಳ ಭಕ್ತನ, ಉನ್ನತಿಕೆಯಂ—ಪೆರ್ಚುಗೆಯನ್ನು, ... ಡಾ—ವಿಚಾರಿಸಿನೋಡು.

ಟಿಪ್ಪಣಿ—ಎಲೈ ಪರಶಿವನೆ, ನಿನ್ನ ಭಕ್ತನಿಗೆ ಕಾಮಕ್ರೋಧಾದಿಗಳಿರುವದಿಲ್ಲ. ... ಸಂಬಂಧವು ಮೊದಲೇ ನಷ್ಟವಾಗಿ ಹೋಗಿರುವುದು. ಆ ಕಾಮಾದಿಗಳಲ್ಲಿ ಕೂಡಿರಬೇಕೆಂಬ... ಕೆಯು ಭಕ್ತನಿಗೆ ಲೇಶಮಾತ್ರವೂ ಇಲ್ಲ. ಅವುಗಳಿಗಧೀನನಾಗಿ ನಡೆಯಬೇಕೆಂಬ ... ಇಲ್ಲವೇ ಇಲ್ಲ. ಈ ಆಶ್ಚರ್ಯವನ್ನೇನುಹೇಳಲಿ! ನಿನ್ನ ಒಲುಮೆಯುಳ್ಳ ಭಕ್ತನ ಮಹ... ನೋಡು.

ಅವತಾರಿಕೆ—ಇಂತು ಅರಿಷಡ್ವರ್ಗಂಗಳಲ್ಲಿ ರಾಗದ್ವೇಷವೇ ಮುಖ್ಯವಾದ ... ರಾಗದ್ವೇಷಂಗಳೆರಡೂ ಶರಣಂಗುಂಟಾಗಿಯೂ ಇಲ್ಲವೆಂದು ಪೇಳುತ್ತಿರ್ದಪಂ.—

ಅನುರಕ್ತಂ ವಿಷಯಂಗಳೊ ...ಳ್ನಿರೆ ವಿರಕ್ತಂ ನೋಡ ನೋಡಲ್ಮಹಾ |
ಘನಲಿಂಗೈಕ್ಯಸುಖಪ್ರಸಾದಪರಿಪೂರ್ಣಾಂತರ್ಬಹಿಶ್ಶುದ್ಧವಾ ||
ಸನೆಯಿಂ ರಾಗವಿರಾಗ ಮೆಂಬೆರಡುಮೆಯ್ಯಂ ಮೀರಿ ನಿರ್ಲೇಪ ನೆಂ |
ದೆನಿಪಂ ದ್ವಂದ್ವವಿಮುಕ್ತ ... ಭಕ್ತಂ ಶಿವಾವಲ್ಲಭಾ

ಟೀಕೆ—ದ್ವಂದ್ವವಿಮುಕ್ತಂ-ದ್ವಂದ್ವದುಃಖಂಗಳಿಂಬಿಡಲ್ಪಟ್ಟ, ಊರ್ಜಿತ ಯಶಂ-ಉನ್ನತಕೀರ್ತಿಯನುಳ್ಳ, ಭಕ್ತಂ-ಶಿವಶರಣನು, ವಿಷಯಂಗಳೊಳ್-ಶಬ್ದಾದಿ ವಿಷಯಂಗಳಲ್ಲಿ, ಅನುರಕ್ತಂ-ಪ್ರೀತಿಯನುಳ್ಳವನಾಗಿರ್ಪನು, ನೋಡನೋಡಲ್-ವಿಚಾರಿಸಿ ನೋಡಲಾಗಿ, ನೆರೆ-ಚೆನ್ನಾಗಿ, ವಿರಕ್ತಂ-ಪ್ರೀತಿಯಿಲ್ಲದವನಾಗಿರ್ಪನು, ಮಹಾ······ವಾಸನೆಯಿಂ-ಮಹಾಘನಲಿಂಗೈಕ್ಯ-ದೊಡ್ಡಿತ್ತಾದ ಮಹಾಘನಲಿಂಗಸಾಮರಸ್ಯದಲ್ಲಿಯ, ಸುಖ-ಆನಂದದಿಂದಲಾದ, ಪ್ರಸಾದ-ಪ್ರಸನ್ನತೆಯಿಂದ, ಪರಿಪೂರ್ಣ-ತುಂಬಲ್ಪಟ್ಟ, ಅಂತರ್ಬಹಿಃ-ಅಂತರಂಗ ಬಹಿರಂಗದಲ್ಲಿಯೂ, ಶುದ್ಧ-ನಿರ್ಮಲವಾದ, ವಾಸನೆಯಿಂ-ಸಂಸ್ಕಾರದಿಂದ, ರಾಗವಿರಾಗಮೆಂಬ-ರಾಗದ್ವೇಷವೆಂಬ, ಎರಡುಮೆಯ್ಯಂ—ಎರಡುಪಕ್ಷವನ್ನು, ಮೀರಿ-ದಾಂಟಿ, ನಿರ್ಲೇಪಂಎಂದೆನಿಪಂ-ನಿರ್ಲೇಪನೆಂದೆನಿಸುವನು. ||೫೮||

ಟಿಪ್ಪಣಿ—ಎಲೈ ಪರಶಿವನೆ ! ದ್ವೈತಾದ್ವೈತದುಃಖಗಳಿಗೆ ದೂರನಾದ ಕೀರ್ತಿವಂತನಾದ ನಿನ್ನ ಭಕ್ತನು " ಸರ್ವೇಂದ್ರಿಯನಿರೂಢೋಪಿ ಸರ್ವೇಂದ್ರಿಯ ವಿಹೀನವಾ‌ | ಶಿವಾಹಿತಮನಾಯೋಗೀ ಶಿವಂಪಶ್ಯತಿನಾಪರಂ " ಎಂಬ ಸಿದ್ಧಾಂತಶಿಖಾಮಣಿವಚನದಂತೆ ಚಕ್ಷುರಾದಿಬಾಹ್ಯೇಂದ್ರಿಯವಿಷಯಗಳಲ್ಲಿ ಅನುರಕ್ತನಾದವನಂತೆ ಕಾಣುತ್ತಿದ್ದರೂ ವಿಚಾರಮಾಡಿ ನೋಡಿದರೆ ಅವನು ವಿರಕ್ತನಾಗಿಯೇ ಇರುವನು. ಏಕೆಂದರೆ—ಅವನು ಮಹಾಲಿಂಗಾಂಗಸಾಮರಸ್ಯಸೌಖ್ಯಾನುಭವದಿಂದ ತುಂಬಿ, ಪರಿಶುದ್ಧವಾದ ಅಂತರ್ಬಹಿಃಕರಣವಾಸನೆಯುಳ್ಳವನಾದಕಾರಣ, ರಾಗದ್ವೇಷಗಳೆರಡನ್ನೂ ಮೀರಿ, ಒಳಗೂ ಹೊರಗೂ ಶಿವನನ್ನೇ ಕಾಣುತ್ತಿರುವನಾದುದರಿಂದ, ಆಯಾ ಇಂದ್ರಿಯಗಳಿಗೆ ತಮ್ಮತಮ್ಮ ವಿಷಯ ಸಂಬಂಧವಿಲ್ಲವಾಗಿ ಅವನು ವಿರಕ್ತನಾಗಿಯೇ ಇರುವನು. ||೫೮||

ತ್ಯಾಗಸ್ವೀಕರಣದ್ವಯಂ ಸಕಲಧರ್ಮಾಧರ್ಮಕರ್ಮಂಗಳೊ |
ಳ್ಭೋಗಾಭೋಗವಿರಾಗರಾಗಬಹಿರಂತರ್ಲೇಪ ವೆಂದಂತದಂ ||
ನೀಗಿದ್ವಂದ್ವವಿಮುಕ್ತನಾಗಿ ನಿಜಲೀಲಾಲೋಲಶೀಲಂ ಮಹಾ |
ಯೋಗಕ್ಕಾಭರಣಂ ಶಿವೈಕ್ಯಶರಣಂ ತೋರ್ಪಂ ಶಿವಾವಲ್ಲಭಾ ||೫೯||

ಟೀಕೆ—ಸಕಲ ಧರ್ಮಾಧರ್ಮಕರ್ಮಂಗಳೊಳ್-ಪುಣ್ಯಪಾಪವ್ಯಾಪಾರಂಗಳಲ್ಲಿ, ತ್ಯಾಗಸ್ವೀಕರಣದ್ವಯಂ-ತ್ಯಾಗ-ಬಿಡುವುದು, ಸ್ವೀಕರಣ-ಹಿಡಿಯುವುದು, ದ್ವಯಂ-ಈ ಎರಡು, ಭೋಗಾಭೋಗವಿರಾಗರಾಗಬಹಿರಂತರ್ಲೇಪವೆಂದು-ಭೋಗ-ಭೋಗದಲ್ಲಿಯೂ, ಅಭೋಗ-ಭೋಗಿಸದಿಹುದರಲ್ಲಿಯೂ, ವಿರಾಗ-ವೈರಾಗ್ಯದಲ್ಲಿಯೂ, ರಾಗ-ಬಯಕೆಯಲ್ಲಿಯೂ, ಬಹಿರಂತರ್ಲೇಪವೆಂದು-ಅಂತರಂಗಬಹಿರಂಗಂಗಳಲ್ಲಿ ಲೇಪಿಸಿಕೊಂಡಿರ್ಪುದೆಂದು, ಅಂತದಂ-ಆ ತ್ಯಾಗಸ್ವೀಕರಣವನು, ನೀಗಿ-ಕಳೆದು, ದ್ವಂದ್ವವಿಮುಕ್ತನಾಗಿ-ದ್ವಂದ್ವದುಃಖಂಗಳಿಂಬಿಡಲ್ಪಟ್ಟಾತನಾಗಿ, ನಿಜಲೀಲಾಲೋ

ಲಶೀಲಂ-ನಿಜ-ತನ್ನ ಸಂಬಂಧವಾದ, ಲೀಲಾ-ವಿಲಾಸದಲ್ಲಿ, ಲೋಲ-ವಿರಕ್ತ ಶೀಲಂ-ಚರಿತ್ರವನುಳ್ಳ, ಮಹಾಯೋಗಕ್ಕೆ-ಅಧಿಕತರವಾದ ಶಿವಯೋಗಕ್ಕೆ ಣಂ-ಅಲಂಕಾರವಾದ, ಶಿವೈಕ್ಯಶರಣಂ-ಶಿವಸಾಮರಸ್ಯವುಳ್ಳ ಶರಣನು, ಶೋ ಕಾಣಿಸುವನು.

ಟಿಪ್ಪಣಿ—ಸಕಲ ಪುಣ್ಯಪಾಪಕರ್ಮಗಳ ವಿಷಯದಲ್ಲಿಯೂ, ಪರಿತ್ಯಾಗವೇ ಆಗಲೀ ರವೇ ಆಗಲೀ ಇವೆರಡೂ ಅವುಗಳ ಅನುಭವಾನುಭವಗಳಲ್ಲಿಯೂ, ಅಸಕ್ತ್ಯನಾಸಕ್ತಿಗಳು ಬಹಿರ್ಲೇಪ-ಅಂತರ್ಲೇಪಗಳಾಗಿ ತೊಡಕಾಗಿರುವುವಾದಕಾರಣ, ಆ ತ್ಯಾಗಸ್ವೀಕಾರಗಳೆರಡ ಧವನ್ನೂ ತೊರೆದು, ಶಿವಶರಣರನು ದ್ವಂದ್ವದುಃಖರಹಿತನಾಗಿ, ಆತ್ಮಲೀಲಾಲೋಲನಾಗಿ, ಗಾಲಂಕಾರನಾಗಿ ಒಪ್ಪುತ್ತಿರುವನು.

ಅವತಾರಿಕೆ—ಶರಣನೆಂತಿರ್ದ್ದೊಡೆಯೂ ಲಿಂಗಕ್ಕೆ ಪ್ರೀತಿಕರವೆಂದು ಪೇಳುತ್ತಿರ್ಪ

ಪತಿಗಾತ್ಮಾರ್ಪಣಮಂ ಸಮಸ್ತವಿಧದಿಂ ಮಾಡಿ ಸ್ವಭರ್ತೃಪ್ರಸ |
ನ್ನತೆಯಂ ತಾಂ ಪಡೆದಿರ್ದ್ದತತ್ಸತಿಯ ಕಾಮಕ್ರೋಧಲೋಭಾದಿಸಂ ||
ಗತಿ ಯಾತಂಗೆ ಸದಾಪ್ರಮೋದಕರ ಮಾಗಿರ್ಪ್ಪಂತೆ ಸದ್ಭಕ್ತನ |
ಸ್ಥಿತಿ ಲಿಂಗಕ್ಕೆ ಮಹಾಪ್ರಿಯಂ ಹಲವುಮಾತಿನ್ನೇಂ ಶಿವಾವಲ್ಲಭಾ ||

ಟೀಕೆ—ಪತಿಗೆ-ಪುರುಷಂಗೆ, ಸಮಸ್ತವಿಧದಿಂ-ನಾನಾಪ್ರಕಾರದಿಂದ ತ್ಮಾರ್ಪಣಮುಂ-ತನ್ನ ಶರೀರವನರ್ಪಿಸುವುದನು, ಮಾಡಿ, ಸ್ವಭರ್ತೃಪ್ರಸನ್ನತೆ ತನ್ನ ಗಂಡನ ಲಾಲನೆಯನು, ತಾಂಪಡೆದಿರ್ದ್ದ-ತಾನಾರ್ಜಿಸಿಕೊಂಡಿರ್ದ, ಯ-ಆ ಸ್ತ್ರೀಯ, ಕಾಮಕ್ರೋಧಲೋಭಾದಿಸಂಗತಿ-ಕಾಮಕ್ರೋಧಲೋಭ ಲಾದವರ ಸಂಪರ್ಕವು, ಆತಂಗೆ-ಆ ಪುರುಷಂಗೆ, ಸದಾ-ಅವಾಗಲೂ, ಪ್ರ ಕರಮಾಗಿರ್ಪ್ಪಂತೆ-ಸಂತೋಷವಮಾಡುವುದಾಗಿರ್ಪಂತೆ, ಸದ್ಭಕ್ತನ-ಶರಣನ ನಿಲುಕಡೆಯು, ಲಿಂಗಕ್ಕೆ-ಶಿವಲಿಂಗಕ್ಕೆ, ಮಹಾಪ್ರಿಯಂ-ಅತ್ಯಂತ ಪ್ರೀತಿಯ ದಾಗಿರ್ಪುದು. ಇನ್ನು, ಹಲವುಮಾತೇಂ-ಹಲವನುಡಿವುದರಿಂದೇನುಪ್ರಯೋ

ಟಿಪ್ಪಣಿ—ಸಕಲ ಪ್ರಕಾರದಿಂದಲೂ ಪತಿಗೆ ತನ್ನನ್ನು ಸಮರ್ಪಿಸಿ, ಆ ಗಂಡನನ್ನು ಕೊಂಡಿರುವ ಪತ್ನಿಯು ಆಚರಿಸುವ ಕಾಮಕ್ರೋಧಾದಿವ್ಯಾಪಾರಗಳೆಲ್ಲವೂ ಗಂಡನಿಗೆ ಯಾ ಸಂತೋಷಪ್ರದವಾಗಿರುವಂತೆ, ಶಿವಶರಣನ ರೀತಿಯು ಹೇಗಿದ್ದರೂ ಶಿವಲಿಂಗಕ್ಕೆ ಮಹಾಪ್ರಿ ವಾಗಿರುವುದು. ಇನ್ನು ಹೆಚ್ಚು ಮಾತಿನಿಂದ ಫಲವೇನು ?

ಆಲಸ್ಯಂ ಸಕಲಕ್ರಿಯಾಕರಣದೊಳ್ನೈಷ್ಕರ್ಮ್ಯ ಮಾತ್ಮೋಕ್ತಿಯೊ |
ಳ್ಕಾಲುಷ್ಯಂಮನದೊಳ್ಪ್ರಿಯಾಂಗನೆ ಗಲಂಕಾರಂ ಪತಿಪ್ರೀತಿದಂ ||
ಲೀಲಾಸ್ವೀಕೃತದೇಹಧರ್ಮಚರಿತಂ ಸರ್ವಂ ಶಿವೈಕ್ಯಕ್ರಿಯಾ |
ಶೀಲಂ ಗಾಢಭರಣಂ ಶಿವಪ್ರಿಯಕರಂ ಸತ್ಯಂ ಶಿವಾವಲ್ಲಭಾ

ಟೀಕೆ—ಪ್ರಿಯಾಂಗನೆಗೆ-ಪ್ರಿಯಳಾದ ಸ್ತ್ರೀಗೆ, ಸಕಲಕ್ರಿಯಾಕರಣದೊಳ್-ಸಮಸ್ತವಾದ ವ್ಯಾಪಾರಂಗಳ ಮಾಡುವಲ್ಲಿ, ಆಲಸ್ಯಂ-ಜಾಡ್ಯವು, ಆತ್ಮೋಕ್ತಿಯೊಳ್-ತನ್ನ ಮಾತಿನಲ್ಲಿ, ನೈಷ್ಠುರ್ಯಂ-ಕಾಠಿನ್ಯವು, ಮನದೊಳ್-ಮನಸ್ಸಿನಲ್ಲಿ, ಕಾಲುಷ್ಯಂ-ದುಗುಡವು, ಅಲಂಕಾರಂ-ಆಭರಣವಾಗಿರ್ಪುದು, ಪತಿಪ್ರೀತಿದಂ-ಪುರುಷಂಗೆ ಪ್ರೀತಿಯಮಾಡುವಂತಹುದು. (ಹಾಂಗೆ) ಶಿವೈಕ್ಯಕ್ರಿಯಾಶೀಲಂಗೆ-ಲಿಂಗದಲ್ಲಿ ಸಾಮರಸ್ಯವ್ಯಾಪಾರವೇ ಸ್ವಭಾವವಾಗುಳ್ಳ ಶರಣಂಗೆ, ಲಿಲಾಸ್ವೀಕೃತ ದೇಹಧರ್ಮಚರಿತಂ-ಲೀಲಾ-ವಿಲಾಸದಿಂದ, ಸ್ವೀಕೃತ-ಅಂಗೀಕರಿಸಲ್ಪಟ್ಟ, ದೇಹ ಧರ್ಮ-ಶರೀರಧರ್ಮದ, ಚರಿತಂ-ಚರಿತ್ರವು, ಸರ್ವಂ-ಎಲ್ಲವೂ, ಆಭರಣಂ-ಅಲಂಕಾರವಾಗಿರ್ಪುದು, ಶಿವಪ್ರಿಯಕರಂ-ಶಿವಂಗೆ ಪ್ರೀತಿಯಮಾಡುವಂತಹುದು, ಸತ್ಯಂ-ಯಥಾರ್ಥವು. (ಈ ಅರ್ಥದಲ್ಲಿ "ವಚನೇಚಲನೇವಿಲೋಕನೇಭವದರ್ಶಾದಿಷುಸರ್ವಕರ್ಮಸು | ಅಲಸತ್ವಮಹೋಭವೇದಲಂಕರಣಂ ಭಕ್ತಿಮತಂಭವತ್ಪ್ರಿಯಂ" ಎಂದುಂಟು). ||೬೧||

ಟಿಪ್ಪಣಿ—ಪುರುಷನ ಒಲ್ಮೆಯನ್ನು ಪಡೆದ ಪತ್ನಿಯು ತನ್ನ ಎಲ್ಲ ಕೆಲಸಗಳಲ್ಲೂ ತೋರಿಸುವ ಆಲಸ್ಯವೂ, ಮಾತಿನಲ್ಲಿ ತೋರಿಸುವ ಕಠಿನತ್ವವೂ, ಮನಸ್ಸಿನಲ್ಲಿ ಹೊಂದಿರುವ ದುಗುಡವೂ ಆಕೆಗೆ ಅಲಂಕಾರಪ್ರಾಯವೂ, ಪತಿಗೆ ಪ್ರೀತಿಕರವೂ ಆಗಿರುವಂತೆ ಲಿಂಗಾಂಗಸಾಮರಸ್ಯ ಸಂಪನ್ನನಾದ ಶರಣನು ವಿಲಾಸಾರ್ಥವಾಗಿ ತಾಳಿರುವ ಶರೀರದಲ್ಲಿ ಸ್ವಭಾವವಾಗಿ ಹುಟ್ಟುವ ನಡೆಗಳೆಲ್ಲವೂ ಆತನಿಗೆ ಅಲಂಕಾರವಾಗಿಯೂ, ಪರಶಿವನಿಗೆ ಪ್ರೀತಿಕರವಾಗಿಯೂ ಇರುವುವು. ||೬೧||

ಅವತಾರಿಕೆ—ಶರಣನು ಪ್ರಾಕೃತಮನುಷ್ಯರಹಾಂಗೆ ಷಟ್ಕರ್ಮವ್ಯಾಪಾರವ ಮಾಡುವನಲ್ಲವೆಂದು ಪೇಳುತ್ತಿರ್ದಪಂ.—

ವಾಣಿಜ್ಯಂ ಕೃಷಿ ಸೇವೆ ಯಾಚ್ಞೆ ಯೆನಿಪೀದುಷ್ಕರ್ಮಮಂಮಾಳ್ಪನೇ |
ಜಾಣಂ ಶ್ರೀಶಿವಭಕ್ತ ನುದ್ಧತ ನುದಾರಂ ಭಕ್ತಿಸತ್ಕರ್ಮನಿ ||
ರ್ವಾಣೈಕಾಶ್ರಿತ ನಾತ್ಮಪೋಷಣನಿಮಿತ್ತಂ ಮರ್ತ್ಯರಂ ತಕ್ಕಟಾ |
ಮಾಣಾಮಾತದು ಬೇಡ ಭಕ್ತ ನಸಮಾನಾಢ್ಯಂ ಶಿವಾವಲ್ಲಭಾ ||೬೨||

ಟೀಕೆ—ಜಾಣಂ-ಪ್ರವೀಣನಾದಂಥ, ಶ್ರೀಶಿವಭಕ್ತಂ-ಜ್ಞಾನೈಶ್ವರ್ಯದಿಂ ಕೂಡಿದ ಶಿವಭಕ್ತನಾದಂಥ, ಉದ್ಧತಂ-ಪ್ರಚಂಡನಾದಂಥ, ಉದಾರಂ-ತ್ಯಾಗಶೀಲನಾದಂಥ, ಭಕ್ತಿಸತ್ಕರ್ಮನಿರ್ವಾಣೈಕಾಶ್ರಿತಂ-ಭಕ್ತಿ-ಶಿವಭಕ್ತಿಯನ್ನು, ಸತ್ಕರ್ಮ-ಸತ್ಕ್ರಿಯೆಯನು, ನಿರ್ವಾಣ-ಮೋಕ್ಷವನು, ಏಕ-ಮುಖ್ಯವಾಗಿ, ಆಶ್ರಿತಂ-ಆಶ್ರೈಸಿಕೊಂಡಿರ್ದಂಥ, ಅಸಮಾನಾಢ್ಯಂ-ಸಮಾನವಿಲ್ಲದ ಜ್ಞಾನೈಶ್ವರ್ಯದಿಂ ಸಂಪನ್ನನಾದಂಥ, ಭಕ್ತಂ-ಶಿವಭಕ್ತನು, ಆತ್ಮಪೋಷಣನಿಮಿತ್ತಂ-ತನ್ನ ಉದರಪೋಷಣ

 

ನಿಮಿತ್ತವಾಗಿ, ಮರ್ತ್ಯರಂತೆ—ಪ್ರಾಕೃತಮನುಷ್ಯರಹಾಂಗೆ, ವಾಣಿಜ್ಯಂ— ವಿಕ್ರಯವ್ಯಾಪಾರವು, ಕೃಷಿ-ವ್ಯವಸಾಯುವು, ಸೇವೆ-ಓಲಗವು, ಯಾಚ್ಞೆ— ಬೇಡುವುದೆಂಬ, ಈ ದುಷ್ಕರ್ಮಮಂ-ಇಂತಪ್ಪ ದುರ್ವ್ಯಾಪಾರವನ್ನು, ಮಾ— ಮಾಡುವನೆ ? ಆಮಾತು ಅದುಬೇಡ—ಆಮಾತ ನುಡಿಯಬೇಡ, ಮಾ— ಅಕಟಾ-ಅಯ್ಯೋ ? ಈ ಅರ್ಥದಲ್ಲಿ—" ಸರ್ವಕರ್ಮ ಪರಿತ್ಯಾಗಾತ್ಸಂತ್ಯ— ಸಾಧನಃ | ಶ್ರುತ್ಯುಕ್ತ್ಯಾತ್ರಪರಿವ್ರಾಟ್ಯದ್ಯೈಕಾತ್ಮ್ಯಜ್ಞಾನಜನ್ಮನಾ" — ಟಾಗಿ.

ಟಿಪ್ಪಣಿ—ಕುಶಲನೂ-ಜ್ಞಾನಸಂಪತ್ತಿನಿಂದ ಕೂಡಿದವನೂ ಶಿವಭಕ್ತಿ ಸಂಪನ್ನ— ಡನೂ--ಉದಾರಿಯೂ--ಭಕ್ತಿಸದಾಚಾರವೋಕ್ಷಗಳನ್ನು ಮುಖ್ಯವಾಗಿ ನಂಬಿದವನೂ— ಸಂಪತ್ತಿನಲ್ಲಿ ತನಗೆಣೆಯಿಲ್ಲದವನೂ ಆದ-ಶರಣನು, ತನ್ನ ಹೊಟ್ಟೆಹೊರೆದುಕೊಳ್ಳು— ಪ್ರಾಕೃತಮನುಷ್ಯರಂತೆ ವ್ಯಾಪಾರ-ಬೇಸಾಯು-ಸೇವೆ-ಯಾಚನೆ-ಎಂಬ ಈ ನೀಚವೃತ್ತಿಗಳ— ಲಂಬಿಸುವನೆ ? ಅಯ್ಯೊ ! ಎಂದಿಗೂ ಇಲ್ಲ. ಆ ಮಾತನ್ನು ಬಿಡು (ಎಂದರೆ-ಆವನು— ಸುವ ವೃತ್ತಿಗಳೆಲ್ಲಾ ಸ್ವಾರ್ಥವಾಗಲ್ಲದೆ ಗುರುಲಿಂಗ ಜಂಗಮ ಸೇವಾಸಾಧನಾರ್ಥವಾಗಿ— ಭಾವ)

ಭವಿಗಳ್ಮಾಳ್ಪವೊಲಾತ ಮಾಳ್ಪನೆ ಬಿಡಾ ಯಾಚ್ಞಾನ್ಯಸೇವಾಕೃಷಿ |
ವ್ಯವಹಾರಂಗಳ ನಕ್ಕಟಾ ಪರಮಭಕ್ತಂಮಾಳ್ಪೊಡಂ ಭಕ್ತಿಸಂ ||
ಭವಸತ್ಕಾಯಕಮಾಗಿ ಮಾಳ್ಪ ನದರಿಂದಂ ಜೀವಿಪಂ ಭಕ್ತಿಯಿಂ |
ದವೆ ತಾಂಜೀವಿಪ ನ್ಯೆಸೆ ಭಕ್ತಿಚರಿತಂ ಭಕ್ತಂ ಶಿವಾವಲ್ಲಭಾ

ಟೀಕೆ—ಆತಂ-ಆ ಶರಣನು, ಯಾಚ್ಞಾನ್ಯಸೇವಾಕೃಷಿವ್ಯವಹಾರಂ— ಬೇಡುವುದು ಓಲಗ ಆರಂಭ ವ್ಯಾಪಾರ ಮೊದಲಾದವನು, ಭವಿಗಳ್-ಪ್ರಾಕೃ— ಮಾಳ್ಪವೊಲ್-ಮಾಡುವಹಾಂಗೆ, ಮಾಳ್ಪನೆ-ಮಾಡುವನೆ ? ಬಿಡಾ-ಆ ಮಾ— ಬಿಡು, ಅಕಟಾ-ಅಯ್ಯೋ, ಪರಮಭಕ್ತಂ-ಉತ್ಕೃಷ್ಟನಾದ ಭಕ್ತನು, ಮಾಳ್ಪೊ— ಒಂದು ಕೃತ್ಯವನು ಮಾಡಿದುದುಂಟಾದೊಡೆಯೂ, ಭಕ್ತಿಸಂಭವಸತ್ಕಾಯ— ಗಿ-ಭಕ್ತಿಯನುಂಟುಮಾಡುವ ಒಳ್ಳಿತ್ತಾದ ಕಾಯಕಮಾಗಿ, ಮಾಳ್ಪಂ-ಮಾ— ವನು, ಆದರಿಂದಂ-ಆ ಸತ್ಕರ್ಮಂಗಳಿಂದ, ಜೀವಿಪಂ-ಜೀವಿಸುವನು, ಭಕ್ತಿ— ಭಕ್ತಿಚಾರಿತ್ರವನುಳ್ಳ, ಭಕ್ತಂ-ಶಿವಭಕ್ತನು, ಭಕ್ತಿಯಿಂದವೆ-ಶಿವಭಕ್ತಿಯಿಂ— ಜೀವಿಪನ್ನೆಸೆ-ಜೀವಿಸುವನಷ್ಟೆ ?

ಟಿಪ್ಪಣಿ—ಆ ಶರಣನು ಬೇಡುವುದು, ಪರಸೇವೆ, ಬೇಸಾಯ, ವ್ಯಾಪಾರ ಮೊದಲಾದ— ಗಳನ್ನಾಚರಿಸಿದರೂ ಭವಿಗಳು ಅವನ್ನು ಮಾಡುವಹಾಗೆ ಈತನು ಮಾಡುತ್ತಾನೆಯೆ ? ಆ— ಮಾತನ್ನು ಬಿಡು. ಯಾತಕ್ಕೆಂದರೆ, ಭಕ್ತಿವರ್ಧಕವಾದ ಒಂದು ಕಾಯಕವಾಗಿ ಅವನ್ನು

ಜೀವಿಸುವನು. ಏಕೆಂದರೆ—ಭಕ್ತಿಶೀಲನಾದ ಶರಣನು ಆ ಕಾಯಕರೂಪವಾದ ಭಕ್ತಿಯಿಂದಲೇ ಜೀವಿಸತಕ್ಕವನಲ್ಲವೆ ? ||೬೩||

ಭಕ್ತಿದ್ವಾರಸಮಾಗತಾತ್ತವಿಭವವ್ಯಾಪಾರಪಾರಂಗತಂ |
ಭುಕ್ತಿದ್ವಾರಸಮಾಗತಾಖಿಲಮಹಾಭೋಗೋಪಭೋಗಾಶ್ರಯಂ ||
ಶಕ್ತಿದ್ವಾರಸಮಾಗತಪ್ರಕಟದೃಷ್ಟಪ್ರತ್ಯಯೈಕಾಸ್ಪದಂ |
ಮುಕ್ತಿದ್ವಾರಸಮಾಗತಾತ್ಮಚರಿತಂ ಭಕ್ತಂ ಶಿವಾವಲ್ಲಭಾ ||೬೪||

ಟೀಕೆ—ಭಕ್ತಂ—ಶಿವಭಕ್ತನು, ಭಕ್ತಿ......ಪಾರಂಗತಂ—ಭಕ್ತಿದ್ವಾರ-ಭಕ್ತಿಮುಖದಿಂದ, ಸಮಾಗತ-ಬಂದಂಥ, ಆತ್ತ-ಎಯ್ದಲ್ಪಟ್ಟ, ವಿಭವ-ಐಶ್ವರ್ಯದ, ವ್ಯಾಪಾರ-ಕೃತ್ಯದಲ್ಲಿ, ಪಾರಂಗತಂ-ಕಡೆಗಂಡಂಥಾತನು, ಭುಕ್ತಿ......ಭೋಗಾಶ್ರಯಂ-ಭುಕ್ತಿದ್ವಾರ-ಸಮರ್ಪಣಮುಖದಿಂದ, ಸಮಾಗತ-ಬಂದಂಥ, ಅಖಿಲ-ಸಮಸ್ತವಾದ, ಮಹಾಭೋಗ-ದೊಡ್ಡಿತ್ತಾದ ಭೋಗಂಗಳ, ಉಪಭೋಗ-ಅನುಭವಿಸುವುದಕ್ಕೆ, ಆಶ್ರಯಂ-ಸ್ಥಾನವಾದಂಥಾತನು, ಶಕ್ತಿ......ಪ್ರತ್ಯಯೈಕಾಸ್ಪದಂ-ಶಕ್ತಿದ್ವಾರ-ಚಿಚ್ಛಕ್ತಿಯ ಮುಖದಿಂದ, ಸಮಾಗತ-ಬಂದಂಥ, ಪ್ರಕಟ-ಪ್ರಸಿದ್ಧವಾದ, ದೃಷ್ಟ-ಕಾಣಲ್ಪಟ್ಟ, ಪ್ರತ್ಯಯ-ಜ್ಞಾನಕ್ಕೆ, ಏಕ-ಮುಖ್ಯವಾಗಿ, ಆಸ್ಪದಂ-ಸ್ಥಾನವಾದಾತನು, ಮುಕ್ತಿದ್ವಾರಸಮಾಗತಾತ್ಮಚರಿತಂ-ಮುಕ್ತಿದ್ವಾರ-ಮೋಕ್ಷಮಾರ್ಗದಲ್ಲಿ, ಸಮಾಗತ-ಕೂಡಲ್ಪಟ್ಟಂಥ, ಆತ್ಮಚರಿತಂ-ತನ್ನ ಚರಿತ್ರವುಳ್ಳಾತನು ||

ಟಿಪ್ಪಣಿ—ಎಲೈ ಪಾರ್ವತೀನಾಥನೆ ! ಶಿವಭಕ್ತನು ಭಕ್ತ್ಯಾಚರಣಮೂಲಕನಾಗಿ ಸಂಪಾದಿಸಿದ ಸಂಪತ್ತನ್ನು ಬಳಸುವುದರಲ್ಲಿ ನಿಪುಣನಾಗಿಯೂ, ಶಿವಾರ್ಪಣಮೂಲಕವಾಗಿ ಬಂದ ಮಹಾಪ್ರಸಾದವನ್ನು ಅನುಭವಿಸುವುದರಲ್ಲಿ ನಿರತನಾಗಿಯೂ, ಜ್ಞಾನಶಕ್ತಿಯ ಮೂಲಕವಾಗಿ ಲಭಿಸಿದ ಸ್ವರೂಪಸಾಕ್ಷಾತ್ಕಾರ ಜ್ಞಾನಕ್ಕೆ ಆಶ್ರಯನಾಗಿಯೂ, ಮೋಕ್ಷಸಂಪಾದನ ಮಾರ್ಗದಲ್ಲಿ ಎಡೆಬಿಡದೆ ತಗುಲಿರುವ ನಡೆಯುಳ್ಳವನಾಗಿಯೂ ಇರುವನು. ||೬೪||

ಅವತಾರಿಕೆ—ಪರಪುರುಷಾರ್ಥದಿಂದಲ್ಲದೆ ಪರಲೋಕವಿಲ್ಲೆಂಬರಂ ಖಂಡಿಸಿ, ಗುರುಲಿಂಗಜಂಗಮಕ್ಕೆ ನಿರ್ವಂಚನೆಯಿಂ ಮಾಡಿ ಆ ಶರಣನು ಪರಶಿವಸ್ವರೂಪನಾಗಿರ್ಪನೆಂದು ಪೇಳುತ್ತಿರ್ದಪಂ—

ಪರರ್ಗನ್ನಾದಿಪದಾರ್ಥಮಿತ್ತು ಪುರುಷಾರ್ಥಂಗೈವವರ್ಗಲ್ಲದಾ |
ಪರಲೋಕಂ ದೊರಕೊಳ್ಳದೆಂಬರದು ತಾನೇಕನ್ಯಲೋಕಂವೃಥಾ ||
ಪರರಿಂ ಸ್ತ್ರೀಯರದೇಂ ವಿರೋಧಿಗಳೆ ಮಾಳ್ಪಾತಂ ಸ್ವಲೋಕಾರ್ಥಮಾ |
ಪರರಂ ತನ್ನವರೆಂದು ಮಾಡದೊಡೆ ತಾಂ ವ್ಯರ್ಥಂ ಶಿವಾವಲ್ಲಭಾ ||೬೫||

ಟೀಕೆ—ಪರರ್ಗೆ-ಅನ್ಯರ್ಗೆ, ಅನ್ನಾದಿಪದಾರ್ಥಮಿತ್ತು-ಅನ್ನ ಮೊದಲಾದ ಪದಾರ್ಥಂಗಳಂ ಕೊಟ್ಟು, ಪುರುಷಾರ್ಥಂಗೈವವರ್ಗಲ್ಲದೆ-ಪುರುಷಾರ್ಥಮಾಡುವರ್ಗ

ಲ್ಲದೆ, ಆ ಪರಲೋಕಂ-ಆ ದೇವಲೋಕವು, ದೊರಕೊಳ್ಳದು-ಸಾಧ್ಯವಾಗದು, ಬರ್-ಎನ್ನುವರು. ಅನ್ಯಲೋಕಂ-ತನಗನ್ಯವಾದಂಥ ಲೋಕವು, ಅದುತಾ... ತಾನು, ಏಕೆ-ಏತಕ್ಕೆ ? ವೃಥಾ-ವ್ಯರ್ಥವು. ಆ ಪರರಿಂ-ಆ ಅನ್ಯರಿಂದ, ಸ್ವ... ರ್-ತನ್ನ ಪುತ್ರಕಳತ್ರಾದಿಗಳು, ಅದೇಂವಿರೋಧಿಗಳೆ-ಹಗೆಗಳೇಏನು ? ಸ್ವಲ... ರ್ಥಂ-ತನ್ನ ಪುಣ್ಯಲೋಕಕ್ಕೋಸ್ಕರವಾಗಿ, ಮಾಳ್ಪಾತಂ-ದಾತೃವಾದಾತನು, ... ರಂ-ಆ ಅನ್ಯರನ್ನು, ತನ್ನವರೆಂದು, ಮಾಡದೊಡೆ-ದಾನಮಾಡದಿರ್ದೊಡೆ, ... ಆ ಕೊಟ್ಟಂತಹುದು, ವ್ಯರ್ಥಂ-ನಿರರ್ಥಕವು.

ಟಿಪ್ಪಣಿ—ಅನ್ಯರಿಗೆ ಅನ್ನ ವಸ್ತ್ರಾದಿಗಳನ್ನು ದಾನಮಾಡಿ ಧರ್ಮಸಂಪಾದನ... ವರಿಗೆ ಸ್ವರ್ಗಲೋಕವು ಲಭಿಸುವುದಿಲ್ಲವೆಂದು ಪ್ರಾಕೃತರು ಹೇಳುವರಷ್ಟೆ. ಆ ಸ್ವರ್ಗ... ವೆಂಬುದು ತನಗೆ ಭಿನ್ನವಾದುದಾಗಿರುವಾಗ ಅಂಥ ಲೋಕದ ಪ್ರಾಪ್ತಿಯಿಂದ ತನಗೇನು ಪ್ರ... ಜನ ? ತನಗೆ ಅನ್ಯರಾದವರಿಗೆ ಅನ್ನಾದಿದಾನವಂ ಮಾಡುವುದಕ್ಕಿಂತಲೂ ತನ್ನ ಹೆಂಡಿರು ... ಳಿಕೆ ಏಕೆ ಮಾಡಬಾರದು ? ಪರರಿಗಿಂತ ಇವರು ತನಗೆ ಶತ್ರುಗಳೆ ? ಇದೂ ಅಲ್ಲದೆ, ... ದಾನಮಾಡುವವನು ಆ ಅನ್ಯರನ್ನು ತನ್ನವರೆಂದು ತಿಳಿದು ಮಾಡದಿದ್ದರೆ, ಆ ದಾನವೂ ವ್ಯರ್... ಗುವುದು (ಎಂದರೆ ಪರರಿಗೆ ದಾನಮಾಡಿ ಸ್ವರ್ಗಪದವಿಯನ್ನು ಪಡೆಯುವೆವೆಂಬ ಹಂಬಲ ... ವೆಂದು ಭಾವ).

ಪರರಾ ರ್ತನ್ನವರಾರ್ ವಿವೇಕಿಸೆ ನಿಜಸ್ತ್ರೀಪುತ್ರಮಿತ್ರ ಸ್ವಕೀ |
ಯರೆ ಮಿಕ್ಕಾದವ ರನ್ಯರೇ ತನಗೆ ನಾವೇನೆಂಬೆ ವಿಂತಪ್ಪ ಮೂ ||
ರ್ಖರನಯ್ಯೋ ಸ್ವಪರಾದಿಕಂ ಗುರುಮತಂ ದೇಹಾದಿ ತಾನನ್ಯ ವೆಂ |
ದಿರೆ ಮತ್ತಿನ್ನುಳಿದರ್ಗ್ಗೆ ಪೇಳ್ವ ಕಥೆಯಂ ನೋಡಾ ಶಿವಾವಲ್ಲಭಾ ||

ಟೀಕೆ—ವಿವೇಕಿಸೆ-ವಿಚಾರಿಸಲಾಗಿ, ಪರರ್ ಆರ್-ಅನ್ಯರಾರು ? ತನ್ನ... ಆರ್-ತನ್ನ ಸಂಬಂಧದವರಾರು ? ತನಗೆ-ಸ್ವಪರಂಗಳ ವಿಚಾರಿಸುವ ತನಗೆ, ... ಸ್ತ್ರೀಪುತ್ರಮಿತ್ರರ್-ತನ್ನ ಸತೀಸುತಬಂಧುಗಳು, ಸ್ವಕೀಯರೆ-ತನ್ನವರೆ ? ಮಿಕ್ಕಾ... ವರ್-ಉಳಿದವರು, ಅನ್ಯರೆ-ಪರರೆ ? ಇಂತಪ್ಪ ಮೂರ್ಖರಂ-ಇಂತಪ್ಪ ಬುದ್ಧಿಹೀ... ರನ್ನು, ನಾವೇನೆಂಬೆವು-ನಾವೇನೆಂದು ಹೇಳುವೆವು ! ಸ್ವಪರಾದಿಕಂ-ಸ್ವ-ತನ್ನ, ... ದಿಕಂ-ಬೇರಾದದೇಹಾದಿಕವೆಂಬುದು, ಗುರುಮತಂ-ಹಿರಿಯರ್ಗೆಸಮ್ಮತವು. ದೇಹಾ... ದಿ-ದೇಹ ಮೊದಲಾದುದು, ತಾಂ ಅನ್ಯವೆಂದುಇರೆ-ತನ್ನಿಂದ ಬೇರೆಂದಿರ... ಮತ್ತೆ-ಮರಳಿ, ಇನ್ನು- ಈ ಅರ್ಥವಬಿಟ್ಟು, ಉಳಿದರ್ಗೆ-ಪರವೆಂಬಶಬ್ದವು ಅನ್ಯ... ಎಂದು, ಪೇಳ್ವ-ಹೇಳುವಂಥ, ಕಥೆಯಂನೋಡಾ-ವ್ಯರ್ಥದ ಮಾತಂ ನೋಡು.

ಟಿಪ್ಪಣಿ—ವಿಚಾರಮಾಡಿ ನೋಡಿದರೆ, ತನಗೆ ಅನ್ಯರಾರು ? ಸ್ವಕೀಯರಾರು ? ತನ್ನ... ರರು-ಎಂಬ ಭೇದಗಳ ವಿಚಾರವಂ ಮಾಡುವಾತನಿಗೆ ಹೆಂಡಿರು ಮಕ್ಕಳು ನಂಟರುಗಳು ತನ್ನವ...

ರುವರೆ ? ಅವರ ಹೊರತು ಮಿಕ್ಕವರೆಲ್ಲಾ ಭಿನ್ನರೆ ? ಇವರು ತನ್ನವರು ಅವರು ಪರರು ಎಂದು ಭಾವಿಸಿಕೊಳ್ಳುವ ಮೂಢರ ರೀತಿಯನ್ನು ಏನೆಂದು ಹೇಳಬೇಕು ! ತಾನು-ಇತರರು ಎಂಬುದು ಮೊದಲಾದ ವಿಚಾರವು ಹೇಗೆಂದರೆ :—ದೇಹಕರಣಾದಿಗಳೇ ತನಗೆ ಅನ್ಯವಾದುವುಗಳೆಂದು ಗುರು ಜನಾಭಿಪ್ರಾಯವಾಗಿರುವಾಗ, ಇನ್ನು ಉಳಿದವರನ್ನು ಮಾತ್ರ ತನಗೆ ಭಿನ್ನರೆಂದು ಹೇಳುವ ವ್ಯರ್ಥದ ಮಾತೇಕೆ ? ||೬೬||

ತನ ಗನ್ಯರ್ಗಡ ತನ್ನ ನರ್ಥಿಸುವವ ರ್ತಾ ನಂತವ ರ್ಗನ್ಯಭಾ |
ವನೆಯಾತಂಗಡ ತನ್ನ ವಸ್ತು ಗಡ ನೋಡನ್ನಾದಿ ಮತ್ತೇತಕೀ ||
ವ ನವರ್ಗಕ್ಕಟ ತನ್ನ ವಸ್ತುವ ನವರ್ಗಿತ್ತಲ್ಲಿ ತನ್ನಿಷ್ಟಮಂ |
ತನ ಗನ್ಯರ್ಮಗುಳ್ದೀವರೇ ಬಿನುಗುಗಳ್ನೋಡಾ ಶಿವಾವಲ್ಲಭಾ ||೬೭||

ಟೀಕೆ—ತನಗೆ-ದಾತೃವಾದ ತನಗೆ, ತನ್ನಂ ಅರ್ಥಿಸುವವರ್-ತನ್ನ ಬೇಡುವವರು, ಅನ್ಯರ್ಗಡ-ಲೋಗರಂತೆಕಂಡಾ ? ತಾಂ-ತಾನು, ಅಂತವರ್ಗೆ- ಆ ಬೇಡುವವರಗೆ, ಅನ್ಯಭಾವನೆಯಾತಂಗಡ-ಭಿನ್ನಭಾವನೆಯಾತನಂತೆಕಂಡಾ ? ನೋಡು-ವಿಚಾರಿಸಿನೋಡು. ಅನ್ನಾದಿ-ಅನ್ನ ಮೊದಲಾದ ದ್ರವ್ಯಂಗಳು, ತನ್ನ ವಸ್ತುಗಡ-ತನ್ನ ವಸ್ತುವಂತೆಕಂಡಾ ? ಮತ್ತೆ-ಮರಳಿ, ಅವರ್ಗೆ-ಆ ಲೋಗರ್ಗೆ, ಏತಕೆ ಈವಂ-ಏನು ಕಾರಣಕೊಡುವನು ? ಅಕ್ಕಟ-ಅಯ್ಯೋ, ಅವರ್ಗೆ-ಆ ಲೋಗರ್ಗೆ, ತನ್ನ ವಸ್ತುವಂ-ತನ್ನ ದ್ರವ್ಯವನು, ಇತ್ತಲ್ಲಿ-ಕೊಟ್ಟಲ್ಲಿ, ತನಗೆ-ದಾತೃವಾದ ತನಗೆ, ತನ್ನಿಷ್ಟಮಂ-ತನ್ನಿಷ್ಟಾರ್ಥವನು, ಬಿನುಗುಗಳ್-ನೀಚರಾದಂಥ, ಅನ್ಯರ್-ಲೋಗರು, ಮಗುಳ್ದು-ಮರಳಿ, ಈವರೆ-ಕೊಡುವರೆ ? ನೋಡಾ-ನೋಡು, ಇಲ್ಲ. ||೬೭||

ಟಿಪ್ಪಣಿ—ಎಲೈ ಪರಶಿವನೆ ! ತನ್ನನ್ನು ಬೇಡುವವರು ತನಗೆ ಅನ್ಯರುಹಾನೆ ? ಅದರಂತೆಯೇ ಆ ಬೇಡುವವರಿಗೆ ತಾನೂ ಅನ್ಯನೇ ಅಷ್ಟೆ ? ಮತ್ತೂ ಅನ್ನ ವಸ್ತ್ರಾದಿಗಳು ತನ್ನ ಪದಾರ್ಥಗಳಷ್ಟೆ ? ಅಂಥ ತನ್ನ ವಸ್ತ್ರಾದಿಗಳನ್ನು ಇತರರಿಗೆ ತಾನೇಕೆ ಕೊಡುವನು ? ಅಯ್ಯೋ, ಪರರಿಗೆ ತಾನು ದಾನಮಾಡಿದರೆ, ಅದನ್ನು ಪಡೆದುಕೊಂಡ ಕ್ಷುದ್ರರಾದ ಆ ಅನ್ಯರು ತನಗೆ ಇಷ್ಟಾರ್ಥವನ್ನೇನಾದರೂ ಕೊಡುವರೆ ? ಇಲ್ಲ. ||೬೭||

ಕುಡುವ ರ್ತನ್ನವರಾದೊಡಂ ತನಗೆ ತಾಂ ಕೊಟ್ಟರ್ಥಮಂಕೊಂಡು ನೂ |
ರ್ಮಡಿ ಯ್ಯಾಗಲ್ ಸುಜನೈಕವತ್ಸಲತೆಯಿಂ ಮಿಕ್ಕಾದವರ್ಕೊಟ್ಟೊಡಂ ||
ಕುಡೆ ರಾಕೊಂಡನಿತರ್ಥಮಂ ಬರಿದೆ ಲೋಗರ್ಗಕ್ಕಟಾ ಕೊಟ್ಟವ |
ರ್ಕಿಡುವರ್ಭಕ್ತರಿಗಿತ್ತವ ರ್ಬದುಕುವನ್ನೋಡಾ ಶಿವಾವಲ್ಲಭಾ ||೬೮||

ಟೀಕೆ—ತನ್ನವರಾದೊಡಂ-ತನ್ನವರಾದೊಡೆ, ತಾಂ-ತಾನು, ಕೊಟ್ಟರ್ಥಮಂ-ಕೊಟ್ಟ ದ್ರವ್ಯವನ್ನು, ಕೊಂಡು-ತೆಗೆದುಕೊಂಡು, ಸುಜನೈಕವತ್ಸಲತೆಯಿಂ-ಸುಜನ-ಸಜ್ಜನರಲ್ಲಿ, ಏಕ-ಮುಖ್ಯವಾದ, ವತ್ಸಲತೆಯಿಂ-ಸ್ನೇಹದಿಂದ, ನೂರ್ಮಡಿ

ಯಾಗಲ್-ಶತಗುಣಿತವಾಗಲು, ತನಗೆ-ಕೊಟ್ಟಂಥ ತನಗೆ, ಕುಡುವರ್-ಕೊ ಮಿಕ್ಕಾದವರ್-ಉಳಿದ ಬಿನುಗುಗಳು, ಕೊಟ್ಟೊಡಂ—ತಮಗಿತ್ತುದುಂಟಾ ಯೂ, ಆಕೊಂಡನಿತರ್ಥಮಂ-ಆ ತೆಗೆದುಕೊಂಡಷ್ಟು ದ್ರವ್ಯವನ್ನು, ಕುಡು ಯರು, ಲೋಗರ್ಗೆ-ಅನ್ಯರಿಗೆ, ಕೊಟ್ಟವರ್-ಇತ್ತವರು, ಬರಿದೆ-ವ್ಯರ್ಥವಾಗಿ ವರ್-ನಷ್ಟವಪ್ಪರು, ಭಕ್ತರಿಗೆ-ಶಿವಭಕ್ತರಿಗೆ, ಇತ್ತವರ್-ಕೊಟ್ಟಂಥವರುಗಳು ಕುವರ್-ಕೃತಾರ್ಥರಹರು, ನೋಡಾ-ನೋಡು. ಈ ಅರ್ಥದಲ್ಲಿ—" ಶಿವಭಕ್ತ ಕ್ರಮ್ಯ ಯೆನಾನ್ಯಸ್ಮೈ ಪ್ರದೀಯತೆ | ನಿಷ್ಫಲಂತದ್ಭವೇದ್ದಾನಂನರಕಂಚಪ್ರಪ ಇಂತೆಂದು ಸೌರಪುರಾಣವುಂಟಾಗಿ.

ಟಿಪ್ಪಣಿ—ತಾನು ಕೊಟ್ಟ ದ್ರವ್ಯವನ್ನು ತೆಗೆದುಕೊಂಡವರು ತನ್ನವರಾದರೆ ಗುರುತಾದ ವಾತ್ಸಲ್ಯದಿಂದ ತಾವು ತೆಗೆದುಕೊಂಡಿದ್ದುದನ್ನು ಅವರು ಒಂದಕ್ಕೆ ನೂರಾಗಿ ಕೊಟ್ಟುಬಿಡುವರು. ಕ್ಷುದ್ರಜನರಾದರೊ ತಮಗೆ ಇತರರು ಕೊಟ್ಟಿದ್ದರೂ, ತಾವು ತೆಗೆದು ಆ ದ್ರವ್ಯವನ್ನೂ ಮರಳಿ ಅವರಿಗೆ ಕೊಡರು. ಆದುಕಾರಣ, ಲೋಕದಲ್ಲಿ ಭಕ್ತರಿಗೆ ದಾ ದವರು ಧನ್ಯರಾಗುವರು. ಇತರರಿಗೆ ಕೊಟ್ಟವರು ವ್ಯರ್ಥವಾಗಿ ಹಾಳಾಗುವರು.

ಪರಲೋಕಸ್ಪೃಹೆಯಿಂ ಪರರ್ಗ್ಗೆ ಪರಮಪ್ಪನ್ನಾದಿಯಂ ಸ್ವೀಯಮೆಂ |
ದಿರದಿತ್ತೊಂದಭಿಮಾನದಿಂ ಪರಹಿತಂ ತಾನೆಂಬಹಂಕಾರಿಗಾ ||
ಪರಲೋಕಂ ಪರಲೋಕ ಮಾಪರ ರವ ಸ್ಸತ್ಯಂ ಪರರ್ ತತ್ಪರಂ |
ಪರಮನ್ನಾದಿಪದಾರ್ಥ ಮಂತು ತನಗಿಲ್ಲೇನುಂ ಶಿವಾವಲ್ಲಭಾ

ಟೀಕೆ—ಪರಲೋಕಸ್ಪೃಹೆಯಿಂ-ಪರಲೋಕಬೇಕೆಂಬ ವಾಂಛೆಯಿಂದ ಗೆ-ಅನ್ಯರುಗಳಿಗೆ, ಪರಮಪ್ಪ-ತನ್ನಿಂದನ್ಯವಾದಂಥ, ಅನ್ನಾದಿಯಂ-ಅನ್ನ ಲಾದ ವಸ್ತುವನು, ಸ್ವೀಯಮೆಂದು—ತನ್ನೊಡವೆಯೆಂದು, ಇರದೆ-ಮಾ ಇತ್ತ-ಕೊಟ್ಟಂಥ, ಒಂದಭಿಮಾನದಿಂ-ಅಭಿಮಾನವೊಂದರಿಂದ, ತಾಂ-ತಾನು, ಹಿತಂ ಎಂಬ-ಪರಪುರುಷಾರ್ಥಿಯೆಂಬ, ಅಹಂಕಾರಿಗೆ-ಗರ್ವಿತನಿಗೆ, ಆ ಪರಲೋ ಆ ದೇವಲೋಕವು, ಪರಲೋಕಂ-ಅನ್ಯಲೋಕವಾಗಿಯೇ ಇರ್ಪುದು. ಆಪ ತೆಗೆದುಕೊಂಡವರು, ಸತ್ಯಂ-ಯಥಾರ್ಥವಾಗಿ, ಪರರ್-ಅನ್ಯರೇ, ತತ್ಪರಂ- ಬೇರಾದಾತನು, ಪರಂ-ಅನ್ಯನೇ, ಅನ್ನಾದಿ ಪದಾರ್ಥಂ-ಅನ್ನ ಮೊದಲಾದ ರ್ಥಂಗಳೂ, ಪರಂ-ಬೇರೆಯೇ, ಅಂತು-ಆದುಕಾರಣವಾಗಿ, ತನಗೆ-ದಾತೃ ತನಗೆ, ಏನುಂ-ಏನುಪ್ರಯೋಜನವೂ, ಇಲ್ಲ-ದೊರಕದು.

ಟಿಪ್ಪಣಿ—ತನಗೆ ಅನ್ಯವಾದ ಅನ್ನಾದಿ ಪದಾರ್ಥಗಳನ್ನು ತನ್ನವೆಂದು ಅಭಿಮಾನಿಸಿ ಲೋಕಕಾಂಕ್ಷೆಯಿಂದ ಅನ್ಯರಿಗೆ ಅವನ್ನು ದಾನಮಾಡಿ, ತಾನು ಪರೋಪಕಾರಿಯೆಂದು ಗರ್ವ

ಿರುವವನಿಗೆ ತನಗೆ ಭಿನ್ನವಾದ ಆ ಸ್ವರ್ಗಲೋಕವೂ ಅನ್ಯವಾಗಿಯೇ ಇರುವುದು. ಆ ದಾನವನ್ನು ಸ್ವೀಕರಿಸಿದವರೂ ಅನ್ಯರೇ ಆಗಿರುವರು. ಅಲ್ಲದೆ ಅವರಿಗಿಂತ ಅನ್ನನೂ ಭಿನ್ನನೇ. ಅನ್ನಾದಿ ವಸ್ತುಗಳೂ ಸಹ ತನಗೆ ಬೇರಾಗಿಯೇ ಇರುವುವು. ಆದುಕಾರಣ, ಅಂಥ ಪರರಿಗೆ ದಾನಮಾಡಿದ ದಾತೃವಿಗೆ ಎಲ್ಲವೂ ಬೇರಾಗಿರುವ ಕಾರಣ, ಆ ದಾನದಿಂದ ಪ್ರಯೋಜನವೇನೂ ಇಲ್ಲ. ||೯||

ಶರಣಂ ತನ್ನವ ರನ್ಯ ರೆಂದು ಬಗೆಯಂ ಸ್ತ್ರೀಪುತ್ರಮುಖ್ಯರ್ಕಳುಂ |
ಪರರುಂ ನೋಳ್ಪೊಡೆ ತನ್ನವ ರ್ಸಕಲರುಂ ತತ್ವಾರ್ಥದಿಂ ಮತ್ತೆತಾಂ ||
ಪರಿಕಿಪ್ಪಲ್ಲಿ ಸಮಸ್ತರುಂ ಪರ ರಿದಕ್ಕಾರಾದೊಡೇಂ ಮಾಳ್ಪ ತ |
ತ್ಪುರುಷಾರ್ಥಂ ಸಮಮೆಲ್ಲಿ ತನ್ನಮನ ಮಲ್ಲೀವಂ ಶಿವಾವಲ್ಲಭಾ ||೨೦||

ಟೀಕೆ—ಶರಣಂ-ಶಿವಶರಣನು, ತನ್ನವರ್-ಇವರು ತನ್ನವರು, ಅನ್ಯರ್-ಇವರು ಪರರು. ಎಂದು, ಬಗೆಯಂ-ವಿಚಾರಿಸನು, ನೋಳ್ಪೊಡೆ-ವಿಚಾರಿಸುವೊಡೆ, ಸ್ತ್ರೀಪುತ್ರಮುಖ್ಯರ್ಕಳುಂ-ಸತೀಸುತರು ಮೊದಲಾದವರೂ, ಪರರುಂ-ಅನ್ಯರೂ, ಸಕಲರುಂ-ಸಮಸ್ತರೂ, ತನ್ನವರ್-ತನ್ನವರು, ತತ್ವಾರ್ಥದಿಂ-ಪರಮಾರ್ಥದಿಂದ, ಮತ್ತೆ-ಮರಳಿ, ತಾಂಪರಿಕಿಪ್ಪಲ್ಲಿ-ತಾನು ಪರೀಕ್ಷಿಸುವುದರಲ್ಲಿ, ಸಮಸ್ತರುಂ-ಸರ್ವರೂ, ಪರರ್-ಅನ್ಯರು, ಇದಕ್ಕೆ, ಆರಾದೊಡೇಂ-ಆರಾದೊಡೇನು, ಮಾಳ್ಪತತ್ಪುರುಷಾರ್ಥಂ-ಆ ಮಾಡುವಂಥ ಪರಪುರುಷಾರ್ಥವು, ಸಮಂ-ಸರಿ. ತನ್ನಮನಂ-ತನ್ನ ಚಿತ್ತವು, ಎಲ್ಲಿ-ಎಲ್ಲಿವುಂಟಾಗಿದ್ದೀತು, ಅಲ್ಲಿ-ಅಲ್ಲಿಯೇ, ಈವಂ-ಕೊಡುವನು. ||೨೦||

ಟಿಪ್ಪಣಿ—ಶಿವಶರಣನಾದರೊ, ಇವರು ತನ್ನವರು ಇವರು ಹೆರರು ಎಂದು ಭಿನ್ನಭಾವ ಗೊಳ್ಳುವುದಿಲ್ಲ. ವಿಚಾರಮಾಡಿ ನೋಡಿದರೆ ಸತೀಸುತಾದಿಗಳೂ, ಅವರಿಗಿಂತ ಭಿನ್ನರಾದ ಸರ್ವರೂ ಅವನಿಗೆ ತನ್ನವರೇ ಆಗಿರುವರು. ಮತ್ತೆ ವಿಚಾರಮಾಡಿ ನೋಡಿದರೆ ದೇಹಕರಣಾದಿಗಳೂ ಸತೀಸುತಾದಿ ಸರ್ವವೂ ಅವನಿಗೆ ಅನ್ಯವಾಗಿಯೇ ಇರುವವು. ಹೀಗಿರುವಾಗ್ಗೆ ದಾನಮಾಡುವುದಕ್ಕೆ ಯಾರಾದರೇನು ? ಎಲ್ಲರೂ ಒಂದೇ. ತನ್ನ ಮನಸ್ಸು ಎಲ್ಲಿಬರುವುದೋ ಅಲ್ಲಿಯೇ ಶರಣನು ದಾನಮಾಡುವನು. ||೨೦||

ಪರರಲ್ಲೀಕ್ಷಿಸೆ ಕೊಂಬವರ್ಕುಡುವವ ರ್ತಾವನ್ಯ ರಲ್ಲಂ ಸ್ವಕೀ |
ಯರೆ ಸತ್ಯಂ ಬಳಿಕಲ್ಲದಿರ್ದೊಡೆ ಡಕಟಾ ಸ್ವಸ್ತ್ರೀಸುತಾರ್ಥಾದಿಯಂ ||
ಪರರ್ಗೇಂಕೊಟ್ಟವ ರುಂಟೆ ನೋಳ್ಪೊಡೆ ನಿಜಸ್ತ್ರೀಪುತ್ರವಿತ್ತಾದಿಯಂ |
ಪರ ಮಂತಲ್ಲದೊ ಡೀವರೇ ಸಲೆ ಪರ ರ್ಗಾರ್ದ್ಯ ಶಿವಾವಲ್ಲಭಾ ||೨೧||

ಟೀಕು—ಈಕ್ಷಿಸೆ-ವಿಚಾರಿಸಲಾಗಿ, ಕೊಂಬುವರ್-ತೆಗೆದುಕೊಂಬುವರು, ಪರರಲ್ಲ-ಅನ್ಯರಲ್ಲ, ಕುಡುವವರ್-ಕೊಡುವಂಥ, ತಾವು, ಅನ್ಯರಲ್ಲ-ಬೇರಲ್ಲ, ಸ್ವಕೀಯರೆ-ಆ ತೆಗೆದುಕೊಂಬುವರು ತಮ್ಮವರೇ, ಸತ್ಯಂ-ಯಥಾರ್ಥವು, ಬಳಿಕ-ಮರಳಿ, ಅಲ್ಲದಿರ್ದೊಡೆ-ಹಾಗಲ್ಲದಿರ್ದೊಡೆ, ಅಕಟಾ-ಅಯ್ಯೋ, ಸ್ವಸ್ತ್ರೀಸುತಾರ್ಥಾದಿಯಂ-

ಸ್ವ-ತಮ್ಮ, ಸ್ತ್ರೀ-ಸ್ತ್ರೀಯು, ಸುತ-ಮಕ್ಕಳು, ಅರ್ಥ-ದ್ರವ್ಯವು, ಆದಿಯಂ-ಮೊದ ದವರನ್ನು, ಪರರ್ಗೆ-ಅನ್ಯರಿಗೆ, ಕೊಟ್ಟವರುಂಟೆ-ಇತ್ತವರುಂಟೇನು ? ನೋಡ್ವ ವಿಚಾರಿಸಲಾಗಿ, ಆದ್ಯರ್-ಸಿಂಧುಬಲ್ಲಾಳ ಚಿರುತೊಂಡ ಮೊನೆಯಧರ ಮೊದ ಶರಣರು, ನಿಜಸ್ತ್ರೀಪುತ್ರವಿತ್ತಾದಿಯಂ-ತಮ್ಮ ಸತೀಸುತದ್ರವ್ಯ ಮೊದಲಾದು ಪರರ್ಗೆ-ಪರವಾದ ಗುರುಲಿಂಗಜಂಗಮಕ್ಕೆ, ಪರಂ-ಇಷ್ಟವಾಗಿ, ಅಂತಲ್ಲದೆ ಹಾಂಗಲ್ಲದಿರ್ದೊಡೆ, ಸಲೆ-ಚೆನ್ನಾಗಿ, ಈವರೇ-ಕೊಡುವರೆ ? ಕೊಡರು. ||

ಟಿಪ್ಪಣಿ—ವಿಚಾರಮಾಡಿ ನೋಡಿದರೆ ಕೊಟ್ಟುದನ್ನು ತೆಗೆದುಕೊಳ್ಳುವವರೂ ಹೆರಲ್ಲ ಡುವವರೂ ಅನ್ಯರಲ್ಲ. ತೆಗೆದುಕೊಳ್ಳುವವರು ನಿಜವಾಗಿಯೂ ತಮ್ಮವರೇ. ಹಾಗಲ್ಲ ತಮ್ಮ ಹೆಂಡಿರು ಮಕ್ಕಳು ಹಣ ಮೊದಲಾದುವುಗಳನ್ನೆಲ್ಲಾ ಹೆರರಿಗೆ ಯಾರಾದರೂ ಕೊಡುವ ಟೇ ? ವಿಚಾರಮಾಡಲಾಗಿ ಪೂರ್ವದ ಶಿವಶರಣರು ತಮ್ಮ ಪತ್ನೀ ಪುತ್ರ ಧನಾದಿಗಳನ್ನು ಶ್ರೇಷ್ಠ ದ ಗುರುಲಿಂಗಜಂಗಮರಿಗೆ ಆಸಕ್ತಿಗೂಡಿ ದಾನಮಾಡುತ್ತಿದ್ದರೆ ? (ಅವರು ತಮ್ಮವರೆಂದು ದ್ದುದರಿಂದಲೇ ವಿಶ್ವಾಸದಿಂದ ಅವರಿಗೆ ಸಮರ್ಪಿಸಿದರೆಂದು ಭಾವ.)

ಅನ್ಯರ್ಗನ್ಯಮ ನಿತ್ತು ತನ್ನೊಡವೆಯಂ ಬೈಚಿಟ್ಟು ಕೊಂಡಿರ್ಪವಂ |
ಧನ್ಯಂ ಜಾಣ ನಹಂತೆಯಂ ಮಮತೆಯಂ ತಚ್ಛಬ್ದವಾಚ್ಯಾರ್ಥಮ ||
ಪ್ಪನ್ಯ ಕ್ಕಿತ್ತುಳಿದಿರ್ದುದಂ ಕುಡದವಂ ತಚ್ಛಬ್ದವಾಚ್ಯಾರ್ಥಸಂ |
ಪನ್ನಾನ್ಯಾತ್ಮಕ ನಪ್ಪ ಸತ್ಯಶರಣಂ ಲುಬ್ಧಂ ಶಿವಾವಲ್ಲಭಾ ||

ಟೀಕೆ—ಅನ್ಯರ್ಗೆ-ಬೇರಾದ ಗುರುಲಿಂಗಜಂಗಮಕ್ಕೆ, ಅನ್ಯಮಂ-ಬೇರಾ ಸತೀಸುತಾದಿ ದ್ರವ್ಯಂಗಳನ್ನು, ಇತ್ತು-ಕೊಟ್ಟು, ತನ್ನೊಡವೆಯಂ-ಆತ್ಮದ್ರವ್ಯ ನ್ನು, ಬೈಚಿಟ್ಟುಕೊಂಡಿರ್ಪವಂ-ಮಡಗಿಕೊಂಡಿರ್ಪಾತನು, ಧನ್ಯಂ-ಕೃತಾರ್ಥನಾ ಉಪಾಧಿದಾನಸ್ಥನು. ತಚ್ಛಬ್ದವಾಚ್ಯಾರ್ಥಮಪ್ಪ-ಆ ಮಹಾಲಿಂಗಸ್ವರೂಪನಾ ಅನ್ಯಕ್ಕೆ-ಗುರುಲಿಂಗಜಂಗಮಕ್ಕೆ, ಅಹಂತೆಯುಂ-ನಾನೆಂಬುದನ್ನು, ಮಮತೆಯು ಎನ್ನದೆಂಬುದನ್ನು, ಇತ್ತು-ಕೊಟ್ಟು, ಉಳಿದಿರ್ದುದಂ-ಉಳಿದಿರ್ದನಿರಹಂಭಾವವನ್ನು ಕುಡದವಂ, ಕೊಡದಾತನು, ಜಾಣಂ-ಪ್ರೌಢನಾದ ನಿರುಪಾಧಿದಾನಸ್ಥನು, ತಚ್ ಬ್ದವಾಚ್ಯಾರ್ಥಸಂಪನ್ನಾನ್ಯಾತ್ಮಕನಪ್ಪ-ತಚ್ಛಬ್ದವಾಚ್ಯಾರ್ಥ-ತಚ್ಛಬ್ದಕ್ಕೆ ವಾಚ್ಯಾ ರ್ಥಮಾದ ಮಹಾಲಿಂಗದಲ್ಲಿ, ಸಂಪನ್ನ-ಐದಲ್ಪಟ್ಟ, ಅನ್ಯಾತ್ಮಕನಪ್ಪ-ಉಪಾಧಿ ನಿ ಪಾಧಿ ದಾನಸ್ಥರ್ಗಳಿಂಬೇರಾದ ಸ್ವರೂಪವನುಳ್ಳ, ಸತ್ಯಶರಣಂ-ಸಹಜದಾನಸ್ವರೂ ಪನಾದ ಶರಣನು, ಲುಬ್ಧಂ-ಲೋಭಿಯು (ಸಾಮರಸ್ಯಭಾವಮಂಕೊಡದೆ ಸಹ ದಾನಸ್ಥನಾಗಿಪ್ಪುದರಿಂದೆ ಲೋಭಿಯೆಂಬುದರ್ಥಂ). ||

ಟಿಪ್ಪಣಿ—ತನಗೆ ಭಿನ್ನವಾದ ಸತೀಸುತ ದ್ರವ್ಯಾದಿಗಳನ್ನು ಇತರವಾದ ಗುರುಲಿಂಗಜಂಗ ಕ್ಕೆ ಅರ್ಪಿಸಿ, ತನ್ನ ಸ್ವಂತ ಸಾಮರಸ್ಯಜ್ಞಾನವನ್ನು ಇತರರಿಗೆ ಕೊಡದೆ ಅವಿಸಿಕೊಂಡಿ

ವನು ಕೃತಾರ್ಥನು. ಆತನೇ ಸೋಪಾಧಿಕದಾನಿಯು. ತಾನು ನನ್ನದು ಎಂಬ ಭಾವಗಳನ್ನು ಅಳಿದು ಆ ಮಹಾಲಿಂಗಸ್ವರೂಪವಾದ ಗುರುಲಿಂಗಜಂಗಮರಿಗೆ ಅರ್ಪಿಸಿ, ನಿರಹಂಭಾವವನ್ನು ತನ್ನಲ್ಲಿಟ್ಟುಕೊಂಡಿರುವವನೇ ಜಾಣನು. ಆತನೇ ನಿರುಪಾಧಿಕದಾನಿಯು. ಆ ಸೋಪಾಧಿ ನಿರುಪಾಧಿ ದಾನಗಳೆರಡಕ್ಕೂ ಭಿನ್ನನಾಗಿ ಮಹಾಲಿಂಗದಲ್ಲಿ ಐಕ್ಯಗೊಂಡು " ಅದಾತೃದಾತೃದೇಯಾನಾಂ ಶಿವಭಾವಂ ವಿಚಿಂತಯೇತ್ | ಆತ್ಮನೋಕರ್ತೃಭಾವಂಚಯದ್ವತ್ತಂಸಹಜಂಭವೇತ್ " ಎಂಬ ಪ್ರಮಾಣದಂತೆ ಕೊಡುವವನು ತೆಗೆದುಕೊಳ್ಳುವವನು ಕೊಡಲ್ಪಡುವ ವಸ್ತುಗಳು ಇವೆಲ್ಲಾ ಶಿವಸ್ವರೂಪವಾಗಿ ತಿಳಿದು, ತಾನು ಕೊಡತಕ್ಕವನೇ ಅಲ್ಲವೆಂಬ ಭಾವದಿಂದ ದಾನಮಾಡುವಾತನು ಸಹಜದಾನಿಯು. ಆತನು ತನ್ನ ಸಾಮರಸ್ಯಜ್ಞಾನವನ್ನು ಮಾತ್ರ ಇತರರಿಗೆ ಕೊಡದೆ ಇಟ್ಟುಕೊಂಡಿರುವವನಾದ ಕಾರಣ ಲೋಭಿಯೆಂದು ಹೇಳಲ್ಪಟ್ಟನು. ||೭೨||

ಅವತಾರಿಕೆ —ಇಹಲೋಕಪರಲೋಕಂಗಳೆರಡೂ ಕ್ಷಯಿಷ್ಣುಗಳಾದ ನಿಮಿತ್ತವಾಗಿ ಅವಕ್ಕೆ ಕಾರಣವಾದ ಪುಣ್ಯಪಾಪಗಳೆಂಬ ದ್ವಂದ್ವಕರ್ಮಂಗಳು ಶರಣಂಗಿಲ್ಲವೆಂದು ಪೇಳುತ್ತಿರ್ದಪಂ—

ಪರಲೋಕೈಹಿಕಲೋಕಕರ್ಮಕರಣವ್ಯಾಪಾರಮಾಯಾಮಯ |
ಸ್ಫುರದಜ್ಞಾನವಿಮೋಹಕೈತವಫಲಾಕಾಂಕ್ಷಾವಿನಿರ್ಮುಕ್ತನು ||
ತ್ತರಸಮ್ಯಕ್ಛಿವಯೋಗಷಟ್ಸ್ಥಲಪರಬ್ರಹ್ಮೈಕಮಾರ್ಗಕ್ರಿಯಾ |
ಚರಣಂ ಸಚ್ಛರಣಂ ಚಿದಾಭರಣ ನದ್ವಂದ್ವಂ ಶಿವಾವಲ್ಲಭಾ ||೭೩||

ಟೀಕೆ—ಸಚ್ಛರಣಂ-ಒಳ್ಳಿತ್ತಾದ ಶಿವಶರಣನು, ಪರ......ವಿನಿರ್ಮುಕ್ತಂ-ಪರಲೋಕ-ಪರಲೋಕಕ್ಕೆ, ಐಹಿಕಲೋಕ-ಇಹಲೋಕಕ್ಕೆ, ಕರ್ಮ-ಸಾಧನವಪ್ಪ ಪುಣ್ಯಪಾಪರೂಪವಾದ ಕರ್ಮದ, ಕರಣ-ಮಾಡುವುದರಲ್ಲಿ, ವ್ಯಾಪಾರ-ಸಂಚಾರದಿಂದ, ಮಾಯಾಮಯ-ಮಾಯಾಸ್ವರೂಪನಾಗಿ, ಸ್ಫುರತ್-ಪ್ರಕಾಶಿಸುತ್ತಿರ್ಪ, ಅಜ್ಞಾನ-ಅಜ್ಞಾನದಿಂದಲಾದ, ವಿಮೋಹ-ಮರವೆಯೊಡನೆ ಕೂಡಿದ, ಕೈತವ-ಕಪಟವಾದ, ಫಲ-ಫಲದ, ಕಾಂಕ್ಷಾ-ಅಪೇಕ್ಷೆಯಿಂದ, ವಿನಿರ್ಮುಕ್ತಂ-ಬಿಡಲ್ಪಟ್ಟಾತನು (ಈ ಅರ್ಥದಲ್ಲಿ '' ಕರ್ಮಚಿತೋಲೋಕಃ ಕ್ಷೀಯತೆ ಪುಣ್ಯಚಿತೋಲೋಕಃ ಕ್ಷೀಯತೆ '' ಎಂದು ಛಾಂದೋಗ್ಯೋಪನಿಷತ್ತುಂಟಾಗಿ) ಉತ್ತ......ಕ್ರಿಯಾಚರಣಂ-ಉತ್ತರ-ಎಲ್ಲವಕ್ಕೂ ಮೊದಲಾದ, ಸಮ್ಯಕ್-ಚೆನ್ನಾದ, ಶಿವಯೋಗ-ಶಿವಸಾಮರಸ್ಯಪ್ರತಿಪಾದಕವಾದ, ಷಟ್ಸ್ಥಲ-ಷಟ್ಸ್ಥಲವೆಂಬ, ಪರಬ್ರಹ್ಮ-ಉತ್ಕೃಷ್ಟವಾದ ಬ್ರಹ್ಮನಲ್ಲಿಯ, ಏಕ-ಮುಖ್ಯವಾದ, ಮಾರ್ಗ-ಆಚರಣೆಯಲ್ಲಿ, ಕ್ರಿಯಾ-ವ್ಯಾಪಾರದ, ಆಚರಣಂ-ಆಚರಣೆಯುಳ್ಳಾತನು, ಚಿದಾಭರಣಂ-ಜ್ಞಾನವೇ ಅಲಂಕಾರವಾಗುಳ್ಳಾತನು, ಅದ್ವಂದ್ವಂ-ದ್ವಂದ್ವದುಃಖಗಳಿಲ್ಲದಾತನು. ||೭೩||

ಟಿಪ್ಪಣಿ—ಶಿವಜ್ಞಾನಭೂಷಣನಾದ ಸಚ್ಛರಣನು ಪರಲೋಕಗತಿಗೂ, ಇಹಲೋಕ ಸುಖಗಳಿಗೂ ಸಾಧಕವಾದ ಪುಣ್ಯಪಾಪಕರ್ಮಗಳನ್ನು ಆಚರಿಸುವ ವ್ಯವಹಾರದಿಂದ ಸಂಜನಿಸುವ ಮಾಯೆ

ಅಜ್ಞಾನ ಮರವೆ ಕಾಪಟ್ಯಗಳ ರೂಪವಾಗಿರುವ-ಫಲದ ಕಾಂಕ್ಷೆಯನ್ನು ಬಿಟ್ಟಿರುವವನಾಗಿ (ಎಂದರೆ-ಫಲಾಭಿಸಂಧಿಸಂಯುಕ್ತಂದಾನಂ ಯದ್ವಿಹಿತಂಭವೇತ್ । ತತ್ಸೋಪಾಧಿಕಮಾಖ್ಯಾತಂ ಮುಕ್ಷುಭಿರನಾದೃತಂ ॥ ಎಂಬ ಸಿದ್ಧಾಂತ ಶಿಖಾಮಣಿವಚನದಂತೆ ನಶ್ವರವಾದಕಾರಣ ತುಚ್ಛವಾದ ಫಲಗಳ ಅಭಿಲಾಷೆಯಿಂದ ಮಾಡಲ್ಪಡತಕ್ಕ ಸೋಪಾಧಿಕದಾನವನ್ನು ಮುಮುಕ್ಷುವಾದವನು ಮಾಡುವುದಿಲ್ಲವೆಂದು ಭಾವ) ಮತ್ತೂ ಸರ್ವಮಾರ್ಗಕ್ಕೂ ಶ್ರೇಷ್ಠವಾದ ಲಿಂಗಾಂಗ ಸಾಮರಸ್ಯ ಪ್ರತಿಪಾದಕವಾದ ಷಟ್ಸ್ಥಲಮಾರ್ಗದ ಆಚರಣೆಯುಳ್ಳವನಾಗಿಯೂ ಪುಣ್ಯಪಾಪಾದಿಯ ಕರ್ಮದುಃಖಗಳಿಲ್ಲದವನಾಗಿಯೂ ಇರುತ್ತಿರುವನು. ||೬

ಮೊದ ಲಿಲ್ಲೆಂದೆಲೆ ಕರ್ಮಮಂ ಬರಿದೆ ಮತ್ತುಂಟೆಂದು ಮತ್ತಂತದ ।
ಕ್ಕಿದುಪಾಯಂ ಪರಿಹಾರ ಮೆಂದು ಬರಿದೊಂದಂ ಮಾಡಿ ಮತ್ತಾಗಳಂ ॥
ತದು ಹೋಯಿತ್ತು ವಿಮುಕ್ತರೆಂದು ಬರಿದೇ ತಮ್ಮಲ್ಲಿ ತಾವೇ ವಿಮೋ ।
ಹದ ಸಂಕಲ್ಪದ ಕರ್ಮಿಗಳ್ ಗಳಹುವ ರ್ನೋಡಾ ಶಿವಾವಲ್ಲಭಾ ||೭

ಟೀಕೆ—ಬರಿದೆ-ಸುಮ್ಮನೆ, ಕರ್ಮಮಂ-ಕರ್ಮವನ್ನು, ಮೊದಲ್-ಮೊದಲು ಇಲ್ಲೆಂದು-ಇಲ್ಲವೆಂದು, ಮತ್ತೆ-ಮರಳಿ, ಉಂಟು-ಒಳವು, ಎಂದು-ಹೀಗೆಂದು, ಮತ್ತೆ-ಮರಳಿ, ಅಂತು-ಹಾಗೆ, ಅದಕ್ಕೆ, ಇದು-ಇದುತಾನು, ಉಪಾಯಂ-ಮಾರ್ಗವೆಂದು, ಪರಿಹಾರಮೆಂದು-ಪ್ರಾಯಶ್ಚಿತ್ತಮೆಂದು, ಬರಿದೆ-ಸುಮ್ಮನೆ, ಒಂದಂಮಾಡಿ-ಏನಾದೊಡೆಯೂ ಒಂದು ಕೃತ್ಯವಂಮಾಡಿ, ಮತ್ತೆ-ಮರಳಿ, ಆಗಳ್-ಆಗ, ಅಂತು-ಹಾಂಗೆ, ಅದು, ಹೋಯಿತ್ತು-ಪೋದುದು, ವಿಮುಕ್ತರ್ ಎಂದು-ಇನ್ನು ಪಾಪಗಳಿಂದ ಬಿಡಲ್ಪಟ್ಟವರೆಂದು, ಬರಿದೇ-ಸುಮ್ಮನೆಯೇ, ತಮ್ಮಲ್ಲಿತಾವೇ-ತಮ್ಮೊಳ್ತಾವೆ ವಿಮೋಹದ-ಅಜ್ಞಾನದ, ಸಂಕಲ್ಪದ-ಸಂದೇಹದ, ಕರ್ಮಿಗಳ್-ಕರ್ಮನಿಷ್ಠರು ಗಳಹುವರ್-ಬಗುಳುತ್ತಿರ್ಪರು. ||೭

ಟಿಪ್ಪಣಿ—ಎಲೈ ಪಾರ್ವತೀಪತಿಯೆ ನೋಡು-ಅಜ್ಞಾನದಿಂದ ನಾನಾ ಮನಸ್ಸಂಕಲ್ಪಗಳನ್ನು ಟುಮಾಡಿಕೊಳ್ಳುವ ಕರ್ಮಬ್ರಹ್ಮಿಗಳು ಸುಮ್ಮ ಸುಮ್ಮನೆ ಮೊದಲು ಕರ್ಮವಿಲ್ಲವೆಂದೂ, ಬಳಿಕ ಕರ್ಮವುಂಟೆಂದೂ ಆ ಕರ್ಮಪರಿಹಾರಕ್ಕೆ ಇದು ಉಪಾಯವೆಂದೂ ಹೇಳಿ, ಪ್ರಾಯಶ್ಚಿತ್ತವೆಂದು ಕೊಂಡು ಏನಾದರೊಂದನ್ನು ವ್ಯರ್ಥವಾಗಿ ಮಾಡಿ, ಅನಂತರ ಆ ಕರ್ಮದೋಷವು ಹೋಯಿತೆಂದು ತಮ್ಮಲ್ಲಿ ತಾವೇ ಬಗುಳಿಕೊಳ್ಳುತ್ತಿರುವರು. ||೭

ಮೊದಲೊಳ್ ಪುಣ್ಯ ಮನಂತರಂ ಬಳಿಕೆ ಪಾಪಂ ಪುಣ್ಯಮೇ ನೋಡೆ ಪಾ ।
ಪದ ಮೂಲಂ ಪರಿಹಾರಮುಂಟೆ ಬರಿದೇ ಪಾಪಕ್ಕೆ ಬೇರೊಂದುಮಾ ॥
ಟದಿ ನಾಪುಣ್ಯಮ ನಾಹ ಮಾಡದಿಹುದೇ ತನ್ಮೂಲ ಪಾಪಕ್ಕೆಕೇ ।
ಳದು ತಾನೇ ಪರಿಹಾರ ಮೈಸೆ ಪುಸಿ ಮತ್ತೆಲ್ಲಂ ಶಿವಾವಲ್ಲಭಾ ||೮

ಟೀಕೆ—ಮೊದಲೊಳ್-ಮೊದಲಲ್ಲಿ, ಪುಣ್ಯಂ-ಪುಣ್ಯವು, ಅನಂತರಂ-ಅನಂತರದುದು (''[illegible]'' ಎಂದನಂತರ ಶಬ್ದಕ್ಕೆ ವುಂಟು)

ಮರಳಿ, ಪಾಪಂ-ಪಾಪವು, ನೋಡೆ-ವಿಚಾರಿಸಲಾಗಿ, ಪುಣ್ಯಮೆ-ಪುಣ್ಯತಾನು, ಪಾಪದಮೂಲಂ-ಪಾಪಕ್ಕೆ ಮೊದಲು, ಬರಿದೇ-ಸುಮ್ಮನೆ, ಪಾಪಕ್ಕೆ-ದುಷ್ಕೃತ್ಯಕ್ಕೆ, ಬೇರೊಂದುಮಾಟದಿಂ-ಮತ್ತೊಂದು ಕೃತ್ಯದಿಂದ, ಪರಿಹಾರಂಉಂಟೆ-ಪ್ರಾಯಶ್ಚಿತ್ತ ಮುಂಟೆ? ಇಲ್ಲ. ಆ ಪುಣ್ಯಮಂ-ಆ ಸುಕೃತವನ್ನು, ಮಾಡದಿಹುದೆ-ಮಾಡದೆಯಿ ರ್ಪುದೇ, ಪಾಪಕ್ಕೆ-ಆ ದುಷ್ಕೃತ ಕೆಡುವುದಕ್ಕೆ, ತನ್ಮೂಲಂ-ಆ ಪುಣ್ಯವಮಾಡದಿ ರ್ಪುದೇ ಮುಖ್ಯವು, ಅದುತಾನೇ-ತಾನದೇ-ಪರಿಹಾರಮೈಸೆ-ಪ್ರಾಯಶ್ಚಿತ್ತಮಷ್ಟೆ? ಮತ್ತೆಲ್ಲಂ-ಉಳಿದುದೆಲ್ಲವೂ, ಪುಸಿ-ಸಟೆ, ಆಹ-ಆಶ್ಚರ್ಯವು. ||೭೫||

ಟಿಪ್ಪಣಿ—ಮೊದಲು ಪುಣ್ಯಸಂಘಟನೆಯಾಗಿ ಬಳಿಕ ಪಾಪವು ಸಂಘಟಿಸುವುದು. ಪುಣ್ಯಫ ಲಾನುಭವವು ಪಾಪಕ್ಕೆ ಮಾರ್ಗವನ್ನು ಮಾಡಿ ಹೋಗುವುದು. ಆದುಕಾರಣ, ವಿಚಾರಮಾಡಿ ನೋಡಿ ದರೆ ಪುಣ್ಯವೇ ಪಾಪದ ಮೂಲವಾಗಿರುವುದು. ಹೀಗಿರುವಲ್ಲಿ ಸುಮ್ಮನೆ ಬೇರೊಂದು ಕರ್ಮವನ್ನಾಚ ರಿಸುವುದರಿಂದ ಪಾಪ ಪರಿಹಾರವಾಗುವುದುಂಟೆ? ಪುಣ್ಯವನ್ನು ಮಾಡದಿರುವುದೇ ಪಾಪಕ್ಕೆ ಪರಿಹಾ ರವಾಗುವುದಲ್ಲದೆ ಉಳಿದ ಪ್ರಾಯಶ್ಚಿತ್ತಾದಿ ಪರಿಹಾರೋಪಾಯಗಳೆಲ್ಲವೂ ಸುಳ್ಳಾದುವುಗಳು ||೭೫||

ಫಲಕಾಮತ್ವವೆ ಪುಣ್ಯಕರ್ಮರತಿ ಯಾಪುಣ್ಯಕ್ರಿಯಾಲಬ್ಧತ |
ತ್ಫಲವೇ ಭೋಗವಿಶೇಷ ವಾವಿವಿಧಭೋಗಾಸಕ್ತಿಯೇ ದುರ್ಮದಂ ||
ಸಲೆ ತದ್ದುಷ್ಟಮದಾಂಧವೃತ್ತಿಯೆ ಕಣಾ ಪಾಪಂ ತದಂತಂ ಕಣಾ |
ಫಲಕಾಮಾನ್ವಿತಪುಣ್ಯಕರ್ಮಕರಣಾಭಾವಂ ಶಿವಾವಲ್ಲಭಾ ||೭೬||

ಟೀಕೆ—ಫಲಕಾಮತ್ವವೇ-ಫಲವಬಯಸುವತನವೇ, ಪುಣ್ಯಕರ್ಮರತಿ-ಪು ಣ್ಯವ್ಯಾಪಾರದಲ್ಲಿ ಪ್ರೀತಿಯು, ಆ ಪುಣ್ಯಕ್ರಿಯಾಲಬ್ಧತತ್ಫಲವೇ-ಆ ಪುಣ್ಯಕ್ರಿಯಾ- ಆ ಪುಣ್ಯಕರ್ಮದಿಂದ, ಲಬ್ಧ-ಪಡೆಯಲ್ಪಟ್ಟ, |ತತ್ಫಲವೇ-ಅದರ ಫಲವೇ, ಭೋಗ ವಿಶೇಷಂ-ಭೋಗವಿಶೇಷವು, ಆ ವಿವಿಧಭೋಗಾಸಕ್ತಿಯೇ-ಆ ಹಲವು ಪ್ರಕಾರವಾದ ಭೋಗದಪೇಕ್ಷೆಯೇ, ದುರ್ಮದಂ-ಕೆಟ್ಟಮದವು, ತದ್ದುಷ್ಟಮದಾಂಧವೃತ್ತಿಯೇ-ಆ ದುಷ್ಟವಾದ ಮದದಲ್ಲಿ ಕಂಗಾಣದಿರ್ಪುದೇ, ಸಲೆ-ಚೆನ್ನಾಗಿ, ಪಾಪಂಕಣಾ-ಪಾಪ ವಲಾ? ತದಂತಂ-ಆ ಪಾಪಕ್ಕೆ ನಾಶವು, ಫಲಕಾಮಾನ್ವಿತಪುಣ್ಯಕರ್ಮಕರಣಾಭಾ ವಂಕಣಾ-ಫಲಕಾಮ-ಫಲದ ಬಯಕೆಯೊಡನೆ, ಅನ್ವಿತ-ಕೂಡಿದ, ಪುಣ್ಯಕರ್ಮ- ಪುಣ್ಯವ್ಯಾಪಾರದ, ಕರಣಾಭಾವಂಕಣಾ-ಮಾಡದಿರ್ಪುದೆಯಲಾ? ||೭೬||

ಟಿಪ್ಪಣಿ—ಆ ಪುಣ್ಯಸಂಬಂಧದಿಂದ ಪಾಪಸಂಘಟನೆಯಾಗುವ ಕ್ರಮವಂ ಹೇಳುತ್ತಿಹನು :- ಮೊದಲು ತನ್ನಲ್ಲಿ ಫಲಾಪೇಕ್ಷೆಯುಂಟಾದ ಕೂಡಲೇ ಫಲಪ್ರಾಪ್ತಿಗೆ ಸಾಧಕವಾದ ಪುಣ್ಯಕರ್ಮ ವನ್ನಾಚರಿಸಬೇಕೆಂಬ ಆಸಕ್ತಿಯು ಹುಟ್ಟುವುದು. ಆ ಪುಣ್ಯಕ್ರಿಯೆಗಳನ್ನಾಚರಿಸುವುದರಿಂದ ಪಡೆದ ಫಲವೇ ಸೌಖ್ಯ ವಿಶೇಷವಾಗಿರುವುದು. ಆ ಸೌಖ್ಯಾನುಭವಾಸಕ್ತಿಯೇ ಕೆಟ್ಟ ಅಹಂಕಾರವಾಗು ವುದು. ಅದರಿಂದ ಕಣ್ಣಾ ಣದಿರುವುದೇ ಪಾಪಕ್ಕೆ ಮಾರ್ಗವಾಗುವುದು. ಏತೇನ, ಪಾಪಕ್ಕೆ ಪರಂಪ

ರಯಾ ಪುಣ್ಯವೇ ಕಾರಣವಾಯಿತು. ಆದುದರಿಂದ ಫಲಾಪೇಕ್ಷೆಯಿಂದ ಪುಣ್ಯಕರ್ಮವನ್ನಾ... ದಿರುವುದೇ ಪಾಪನಾಶಕ್ಕೆ ಮುಖ್ಯೋಪಾಯವು.

ಕ್ರಮದಿಂ ನೋಳ್ಪೊಡೆ ಪುಣ್ಯಪಾಪಸುಖದುಃಖಸ್ವರ್ಗದೌರ್ಗತ್ಯಪಾ |
ರಮತಂ ತದ್ವಿಪರೀತಮಾದ ಮತ ಮೆಲ್ಲಂತಾಗಿ ತಾನೀಗ ಮೊ ||
ತ್ತಮೊದಲ್ಪುಣ್ಯ ಮದುಳ್ಳೊಡುಂಟು ತರುವಾಯಿಂ ದ್ವಂದ್ವಮೆಲ್ಲಂವೃಥಾ |
ಭ್ರಮೆ ಯೇಕಯ್ಯ ಮೊದಲ್ಕಿಡ ಲ್ಕಿಡುಗು ಮಾಲಾಭಂ ಶಿವಾವಲ್ಲಭಾ ||೮೮

ಟೀಕೆ—ಪುಣ್ಯ.....ಪಾರಮತಂ ಪುಣ್ಯಪಾಪ-ಸುಕೃತದುಷ್ಕೃತಂಗಳ, ಸುಖದುಃಖ—ಹರ್ಷಶೋಕಂಗಳ, ಸ್ವರ್ಗದೌರ್ಗತ್ಯ—ಸ್ವರ್ಗನರಕಂಗಳ, ಪಾರ... ಕಡೆಯ, ಮತಂ-ಸ್ವರೂಪವು, ಕ್ರಮದಿಂ-ಪರಿವಿಡಿಯಿಂದೆ, ನೋಳ್ಪೊಡೆ-ವಿಚಾರಿ... ಸಲಾಗಿ, ತಾನೀಗೆ-ಇದು ತಾನು, ಮೊತ್ತಮೊದಲ್-ಮೊದಲಲ್ಲಿ, ಪುಣ್ಯಮದುಳ್ಳೊ... ಡೆ-ಪುಣ್ಯತಾನುಂಟಾದೊಡೆ, ತರುವಾಯಿಂ-ಪರಿವಿಡಿಯಿಂದ, ದ್ವಂದ್ವಮೆಲ್ಲಂ-... ಪೇಳ್ದದ್ವಂದ್ವದುಃಖಂಗಳೆಲ್ಲವೂ, ಉಂಟು—ಒಳವು, ತದ್ವೀಪರೀತಮಾದ-ಆಆ... ಪುಣ್ಯಪಾಪಾದಿಗಳ್ಗೆ, ವಿಪರೀತಮಾದ—ಪುಣ್ಯ ಕೆಟ್ಟೊಡೆ ಎಲ್ಲವೂ ಕೆಡುವನೆಂ... ಮತಂ-ಇಷ್ಟವು, ಎಲ್ಲಂ-ಎಲ್ಲವೂ, ಅಂತಾಗಿ-ಅದುಕಾರಣವಾಗಿ, ವೃಥಾಭ್ರಮೆ... ಕಯ್ಯ-ವ್ಯರ್ಥವಾದ ಭ್ರಮೆಯಾತಕ್ಕಯ್ಯ? ಇಲ್ಲವೆಂದರ್ಥ. (ಇಲ್ಲಿ ಅರ್ಥಾಂತರನ್ಯಾ... ಸವು, ಎಂತೆಂದೊಡೆ) ಮೊದಲ್ ಕಿಡಲ್-ಮೌಲ್ಯ ಕೆಟ್ಟೊಡೆ, ಆಲಾಭಂ-ಅದರಿಂದ... ಆದಾಯವೂ, ಕಿಡುಗುಂ-ಕೆಟ್ಟುಪೋಪುದು. ||೮೮

ಟಿಪ್ಪಣಿ—ವಿಚಾರಮಾಡಿ ನೋಡಿದರೆ, ಪುಣ್ಯ-ಪಾಪ, ಹರ್ಷ-ದುಃಖ, ಸ್ವರ್ಗ-ನರಕ, ಎ... ವೆಲ್ಲವುಗಳೂ ಕ್ರಮವಾಗಿ ಒಂದರಿಂದೊಂದು ಉಂಟಾಗುವುವು. ಅಂದರೆ-ಮೊದಲು ಪುಣ್ಯಸಂಪಾ... ನೆಯಾದರೆ ಬಳಿಕ ಕ್ರಮವಾಗಿ ಮೇಲೆಹೇಳಿದ ದ್ವಂದ್ವದುಃಖಗಳೆಲ್ಲವೂ ಸಂಭವಿಸುವುವು. ಸ... ಮೂಲವಾದ ಆ ಪುಣ್ಯವೇ ಅಳಿದುಹೋದರೆ, ಉತ್ತರೋತ್ತರ ದುಃಖವೆಲ್ಲವೂ ಶೂನ್ಯವಾಗುವವು... ಬಂಡವಾಳವೇ ಕೆಟ್ಟರೆ ಲಾಭವೂ ಕೆಡುವುದೆಂಬುದು ಸರ್ವಶ್ರುತವಲ್ಲವೆ ? ಹೀಗಿರುವಾಗ ಕರ್ಮ... ನಾಶಕ್ಕಾಗಿ ಪ್ರಾಯಶ್ಚಿತ್ತಾಚರಣಾದಿಗಳಂ ಮಾಡಬೇಕೆಂಬ ಬರಿಯ ಭ್ರಮೆಯೇತಕ್ಕೆ ? ||೮೮

ಶುಭಕರ್ಮಾಶುಭಕರ್ಮಮೆಂದು ಯುಗಳಂ ಜ್ಞಾನಪ್ರಸಾದಾಖ್ಯಮೆಂ |
ದುಭಯಂ ಕರ್ಮ ಮದಿಂತು ನಾಲ್ಕುತೆರನಾ ಕರ್ಮಕ್ಕೆ ತತ್ತದ್ವಿಧಿ ||
ಪ್ರಭವಂ ತಾನೆನಿಪಾ ಪ್ರಸಿದ್ಧಫಲ ಮಾಗ ಸ್ವರ್ಗದೌರ್ಗತ್ಯಮೋ |
ಕ್ಷಭವಧ್ವಂಸಿನಿ ಭಕ್ತಿ ಯೆಂದಿದು ಚತುರ್ಭೇದಂ ಶಿವಾವಲ್ಲಭಾ ||೮೯

ಟೀಕೆ—ಶುಭಕರ್ಮಾಶುಭಕರ್ಮಮೆಂದು-ಪುಣ್ಯಪಾಪಕರ್ಮಂಗಳೆಂದು, ಯು... ಗಳಂ-ಎರಡು, ಜ್ಞಾನಪ್ರಸಾದಾಖ್ಯಮೆಂದು-ಜ್ಞಾನಪ್ರಸಾದವೆಂಬ ಹೆಸರುಳ್ಳ... ದು, ಉಭಯಂ-ಎರಡು, ಇಂತು-ಈರೀತಿಯಿಂ ... ಕರ್ಮತಾನು, ನಾಲ್ಕು...

ತೆರಂ-ನಾಲ್ಕುವಿಧವು. ಆ ಕರ್ಮಕ್ಕೆ-ನಾಲ್ಕುವಿಧವಾದ ಕರ್ಮಕ್ಕೆ, ತತ್ತದ್ವಿಧಿಪ್ರಭವಂ-ತತ್ತದ್ವಿಧಿ-ಆಯಾ ಕರ್ಮಗಳ ವಿಧಿಯತ್ತಣಿಂ, ಪ್ರಭವಂ-ಪುಟ್ಟಿದುದು. ತಾಂ, ಎನಿಸುವ, ಆ ಪ್ರಸಿದ್ಧಫಲಮಾಗ-ಆ ಪ್ರಕಟವಾದ ಫಲವು ತಾನು, ಸ್ವರ್ಗ ದೌರ್गತ್ಯ ಮೋಕ್ಷಭವಧ್ವಂಸಿನಿ-ಸ್ವರ್ಗ-ಸ್ವರ್ಗವು, ದೌರ್ಗತ್ಯ-ನರಕವು, ಮೋಕ್ಷ-ಕರ್ಮಬಂಧಮೋಚನವು, ಭವಧ್ವಂಸಿನಿ-ಸಂಸಾರವಕೆಡಿಸುವಂಥ, ಭಕ್ತಿಯೆಂದು-ಭಕ್ತಿತಾನೆಂದು, ಇದು- ಈ ಫಲವು, ಚತುರ್ಭೇದಂ-ನಾಲ್ಕುವಿಧವು. ಈ ಅರ್ಥದಲ್ಲಿ-ಪಾಪಾನ್ನರಕಃಪುಣ್ಯಾತ್ಸ್ವರ್ಗಸ್ತಾಭ್ಯಾಂವಿನೈವಕರ್ಮಭ್ಯಾಂ | ಜ್ಞಾನಂಮೋಕ್ಷಸ್ತ್ರೈಸ್ತ್ರಿಭಿರೇವವಿನಾಸ್ಯಾತ್ಪ್ರಸಾದತೋಭಕ್ತಿಃ'' ಎಂದುಂಟು. ||೭೮||

ಟಿಪ್ಪಣಿ—ಕರ್ಮವು, ಶುಭ-ಅಶುಭ-ಜ್ಞಾನ-ಅನುಗ್ರಹವೆಂದು ನಾಲ್ಕುತೆರನಾಗಿರುವುದು. ಈ ನಾಲ್ಕು ಕರ್ಮಗಳ ಆಚರಣದಿಂದಲೂ ಎಂದರೆ-ಕ್ರಮವಾಗಿ ಶುಭಕರ್ಮದಿಂದ ಸ್ವರ್ಗವೂ, ಅಶುಭಕರ್ಮದಿಂದ ನರಕವೂ, ಜ್ಞಾನಕರ್ಮದಿಂದ ಬಂಧಮೋಚನವೂ, ಅನುಗ್ರಹಕರ್ಮದಿಂದ ಸಂಸೃತಿವಿನಾಶಕವಾದ ಭಕ್ತಿಯೂ ಫಲವಾಗಿ ಲಭಿಸುವುವು. ||೭೮||

ಪಾಪಂಗೆಯ್ಯದೆ ಸುಮ್ಮನಿರ್ಪುದದು ತಾನೇ ಪುಣ್ಯಕರ್ಮಂ ಮಗು |
ಳ್ದಾಪುಣ್ಯಕ್ರಿಯೆಗೆಯ್ಯದಿರ್ಪುದದು ತಾನೇ ಪಾಪ ಮಂತಾಗಿನಿ |
ರ್ಲೇಪತ್ವಂ ಪುಸಿ ಪುಣ್ಯಪಾಪಯುಗ ಮನ್ಯೋನ್ಯಾಶ್ರಿತಂ ಭಕ್ತಿಯೋ |
ಗೋಪಾಯಂ ಸುಲಭಂ ಸುಖಪ್ರದಮೆ ನಿರ್ಲೇಪಂ ಶಿವಾವಲ್ಲಭಾ ||೭೯||

ಟೀಕೆ—ಪಾಪಂಗೆಯ್ಯದೆ-ಪಾಪವಮಾಡದೆ, ಸುಮ್ಮನಿರ್ಪುದು-ಸುಮ್ಮನೆ ಇರ್ಪುದು, ಅದುತಾನೇ-ತಾನದೇ, ಪುಣ್ಯಕರ್ಮಂ-ಸುಕೃತಕರ್ಮವು, ಮಗುಳ್ದು-ಮರಳಿ, ಆ ಪುಣ್ಯಕ್ರಿಯೆಗೆಯ್ಯದಿರ್ಪುದು-ಆ ಪುಣ್ಯವ್ಯಾಪಾರವ ಮಾಡದಿರುವುದು, ಅದುತಾನೇ-ತಾನದೇ, ಪಾಪಂ-ದುಷ್ಕೃತವು, ಪುಣ್ಯಪಾಪಯುಗಂ-ಪುಣ್ಯಪಾಪಂಗಳೆರಡು, ಅನ್ಯೋನ್ಯಾಶ್ರಿತಂ-ಒಂದನೊಂದು ಬಿಡದಿರ್ಪುದು, ಅಂತಾಗಿ-ಅದುಕಾರಣವಾಗಿ, ನಿರ್ಲೇಪತ್ವಂ-ಪುಣ್ಯಪಾಪಲೇಪವಿಲ್ಲೆಂದು ಪೇಳ್ವುದು, ಪುಸಿ-ಎಲೆ ಕರ್ಮವಾದೀ ಅದುಸಟೆ, ಭಕ್ತಿಯೋಗೋಪಾಯಂ-ಭಕ್ತಿಯೋಗವೆಂಬ ಉಪಾಯವು, ಸುಲಭಂ-ಸುಲಭವಾದುದಾಗಿ, ಸುಖಪ್ರದಮೆ-ಸುಖವಕೊಡುವುದೇ, ನಿರ್ಲೇಪಂ-ಪುಣ್ಯಪಾಪಲೇಪವಿಲ್ಲದುದು. ||೭೯||

ಟಿಪ್ಪಣಿ—ಪಾಪಕರ್ಮವನ್ನಾಚರಿಸದೆ ಸುಮ್ಮನಿರುವುದೇ ಪುಣ್ಯಕರ್ಮವು. ಮತ್ತು ಆ ಪುಣ್ಯಕರ್ಮವನ್ನಾಚರಿಸದಿರುವುದೇ ಪಾಪವು. ಹೀಗಾಗಿ ಆ ಪುಣ್ಯಪಾಪಗಳೆರಡೂ ಒಂದನ್ನೊಂದವಲಂಬಿಸಿಕೊಂಡಿರುವುವು. ಆದುದರಿಂದ ಹೇಗೆಮಾಡಿದರೂ ಕರ್ಮಲೇಪವಿಲ್ಲವೆಂದು ಹೇಳಿಕೊಳ್ಳುವುದು ಸುಳ್ಳು. ಅದುಕಾರಣ, ಭಕ್ತಿಯೋಗಾಚರಣೆಯೇ ಸುಲಭವೂ, ಸುಖದಾಯಕವೂ, ಪುಣ್ಯಪಾಪೋಭಯಕರ್ಮಲೇಪರಹಿತವೂ ಆಗಿರುವುದು. ||೭೯||

ಅವನುತ್ಕೃಷ್ಟವಿಶಿಷ್ಟಪುಣ್ಯಚರಿತಂ ಯತ್ತತ್ಫಲಾಕಾಂಕ್ಷೆಯಂ |
ಸವಿದುತ್ತಾಗಿಯೆ ನುಂಗಿ ನೀರ್ಗುಡಿದು ನಿಶ್ಚಿಂತಂ ನಿರೀಹಂ ಬಳಿ||
ಕ್ಕವನೇ ಕಷ್ಟನಿಕೃಷ್ಟಪಾಪಚರಿತಂ ಮಿಕ್ಕಾದವಂ ಕಾಂಕ್ಷೆಯಿಂ |
ಭವಬಂಧಕ್ಕುರೆ ಮಾರುವೋದ ಕೃತಪುಣ್ಯಂ ಕೇಳ್ಶಿವಾವಲ್ಲಭಾ ||೬೬||

ಟೀಕೆ—ಯತ್ತತ್ಫಲಾಕಾಂಕ್ಷೆಯಂ-ಯತ್-ಆವುದಾನೊಂದು ಫಲಾಕಾಂಕ್ಷೆಯುಂಟು, ತತ್ಫಲಾಕಾಂಕ್ಷೆಯಂ-ಆ ಫಲಾಪೇಕ್ಷೆಯನ್ನು, ಸವಿದುತ್ತಾಗಿ-ಸವಿಯುಳ್ಳ ತುತ್ತಾಗಿಯೇ, ನುಂಗಿ, ನೀರ್ಗುಡಿದು-ಉದಕಪಾನವಂಮಾಡಿ (ಫಲಾಕಾಂಕ್ಷೆಯಂ ನಿರ್ಮೂಲವಂಮಾಡಿಯೆಂಬುದರ್ಥ). ನಿಶ್ಚಿಂತಂ-ಚಿಂತೆಯಿಲ್ಲದವನಾಗಿ, ನಿರೀಹಂ-ನಿಸ್ಪೃಹನಾಗಿರ್ಪ್ಪಂ, ಅವನೇ-ಆತನೇ, ಉತ್ಕೃ......ಚರಿತಂ-ಉತ್ಕೃಷ್ಟ ವಿಶಿಷ್ಟ-ಉತ್ತಮೋತ್ತಮವಾದ, ಪುಣ್ಯಚರಿತಂ-ಪವಿತ್ರಚರಿತ್ರವನ್ನುಳ್ಳತನು, ಬಳಿಕ-ಮರಳಿ, ಮಿಕ್ಕಾದ-ಉಳಿದಂಥ, ಕಾಂಕ್ಷೆಯಿಂ-ಫಲಾಕಾಂಕ್ಷೆಯಿಂದ, ಭವಬಂಧಕ್ಕೆ-ಸಂಸಾರಬಂಧಕ್ಕೆ, ಉರೆ-ಚೆನ್ನಾಗಿ, ಮಾರುವೋದ-ವಿಕ್ರಯಕ್ಕೆ ಸಂದ, ಕೃತಪುಣ್ಯಂ-ಆ ಪುಣ್ಯವಂತನು, ಅವಂ-ಆತನೇ, ಕಷ್ಟನಿಕೃಷ್ಟಪಾಪಚರಿತಂ-ಕಷ್ಟನಿಕೃಷ್ಟ-ಅತ್ಯಂತ ಇಳಿತರವಾದ, ಪಾಪಚರಿತಂ-ಪಾಪವ್ಯಾಪಾರವುಳ್ಳವನು. ||೬೬||

ಟಿಪ್ಪಣಿ—ಫಲಾಭಿಲಾಷೆಯೆಂಬುದನ್ನೇ ನುಂಗಿ ನೀರ್ಗುಡಿದು (ಎಂದರೆ, ಅದನ್ನು ಸಂಪೂರ್ಣವಾಗಿ ನಾಶಗೊಳಿಸಿ) ನಿಶ್ಚಿಂತನಾಗಿಯೂ, ನಿಸ್ಪೃಹನಾಗಿಯೂ ಯಾವನಿರುವನೋ ಅವನೇ ಅತ್ಯುತ್ತಮಪುಣ್ಯಚರಿತ್ರವುಳ್ಳವನು. ಫಲಾಭಿಲಾಷೆಯಿಂದ ಕೂಡಿ ಸಂಸಾರಬಂಧಕ್ಕೆ ಅಧೀನನಾಗಿ ಹೋಗಿ ಪುಣ್ಯಕರ್ಮವನ್ನಾಚರಿಸುತ್ತೇನೆಂಬುವವನಾವನುಂಟೋ ಅವನು ಅತ್ಯಂತ ಇಳಿತರವಾದ ಪಾಪವ್ಯಾಪಾರವುಳ್ಳವನು. ||೬೬||

ಕಾಮಾಕಾಮಕೃತಂಗಳಪ್ಪ ಜಡಪುಣ್ಯಾಪುಣ್ಯಕರ್ಮಂಗಳೇ |
ವ್ಯೋಮಾಲೇಪ ಶಿವಾರ್ಚನಾರ್ಪಣಕಳಾಕಾರಂಗಳಾಗಿರ್ಪ್ಪತ ||
ತ್ಸಾಮರ್ಥ್ಯಂ ಶರಣಂಗೆ ಭಕ್ತಿಪರನಿರ್ವಾಣಕ್ರಿಯಾಚಾರನಿ |
ಸ್ಸೀಮಂಗಲ್ಲದೆ ಮಿಕ್ಕಕರ್ಮಿಗಳಿಗುಂಟೇ ಪೇಳ್ಶಿವಾವಲ್ಲಭಾ ||೬೭||

ಟೀಕೆ—ಕಾಮಾಕಾಮಕೃತಂಗಳಪ್ಪ-ಕಾಮ-ಇಚ್ಛೆಯಿಂದಲೂ, ಅಕಾಮ-ಇಚ್ಛೆಯಿಲ್ಲದಿಹುದರಿಂದಲೂ, ಕೃತಂಗಳಪ್ಪ-ಮಾಡಲ್ಪಟ್ಟ, ಜಡ-ಅಚೇತನವಾದ, ಪುಣ್ಯಾಪುಣ್ಯಕರ್ಮಂಗಳೇ-ಶುಭಾಶುಭಕರ್ಮಂಗಳೇ, ವ್ಯೋಮಾಲೇಪಶಿವಾರ್ಚನಾರ್ಪಣಕಳಾಕಾರಂಗಳ್-ವ್ಯೋಮ-ಆಕಾಶದಂತೆ, ಅಲೇಪ-ನಿರ್ಲೇಪವಾದ, ಶಿವಾರ್ಚನ-ಶಿವಪೂಜೆಯ, ಅರ್ಪಣ-ಶಿವಾರ್ಪಣದ, ಕಳಾ-ಸೊಬಗಿನ, ಆಕಾರಂಗಳ್-ಸ್ವರೂಪಂಗಳು, ಆಗಿರ್ಪ್ಪ-ಆಗಿರುವ, ತತ್ಸಾಮರ್ಥ್ಯಂ-ಅಂತಪ್ಪಶಕ್ತಿಯು, ಭಕ್ತಿಪರನಿರ್ವಾಣ

ಕ್ರಿಯಾಚಾರನಿಸ್ಸೀಮಂಗೆ-ಭಕ್ತಿ-ಶಿವಭಕ್ತಿಯೆಂಬ, ಪರನಿರ್ವಾಣ-ಉತ್ಕೃಷ್ಟವಾದ ಮೋಕ್ಷದಲ್ಲಿ, ಕ್ರಿಯಾ-ವ್ಯಾಪಾರದ, ಆಚಾರ-ನಡತೆಯನುಳ್ಳ, ನಿಸ್ಸೀಮಂಗೆ-ಅವಧಿಯಿಲ್ಲದಾತನಾದ, ಶರಣಂಗಲ್ಲದೆ-ಶಿವಶರಣಂಗಲ್ಲದೆ, ಮಿಕ್ಕ-ಉಳಿದಂಥ, ಕರ್ಮಿಗಳಿಗೆ-ಕರ್ಮನಿಷ್ಠರಿಗೆ, ಉಂಟೇಪೇಳ್-ಉಂಟೇ ಹೇಳು ? ||೮೧||

ಟಿಪ್ಪಣಿ—ಫಲಾಪೇಕ್ಷೆಯಿಂದಾಗಲೀ ಅನಪೇಕ್ಷೆಯಿಂದಾಗಲೀ ಮಾಡುವ ಪುಣ್ಯಾಪುಣ್ಯ ಕರ್ಮಗಳೆಲ್ಲಾ ಆಕಾಶದಂತೆ ನಿರ್ಲೇಪವಾಗಿರುವ (ಎಂದರೆ ಆ ಪಾಪಪುಣ್ಯಫಲಗಳು ತನಗೆ ಹೊದ್ದದಿರುವ) ಅವುಗಳನ್ನು ಶಿವಲಿಂಗಾರ್ಚನ ಶಿವಾರ್ಪಣರೂಪಗಳಾಗಿರುವಂತೆ ಮಾಡುವ ಶಕ್ತಿಯು ಭಕ್ತಿಯೆಂಬ ಸರ್ವೋತ್ತಮವಾದ ಮುಕ್ತಿಪದವಿಯು ಆಚರಣೆಯಲ್ಲಿ ಧುರೀಣನಾದ ಶಿವಶರಣನಿಗಿರುವುದಲ್ಲದೆ ಕರ್ಮನಿಷ್ಠರಿಗೆ ಇರುವುದಿಲ್ಲವು. ಈ ಅರ್ಥದಲ್ಲಿ– " ಕೇವಲಾನಿರ್ಮಲಾಶುದ್ಧಾಫಲಕಾಮವಿವರ್ಜಿತಾ | ಫಲಕಾಮಪ್ರಯುಕ್ತಾಹಿ ಕ್ರಿಯಾನಪ್ರತಿಬದ್ಧ್ಯತೆ || ನಕೇವಲಕ್ರಿಯಾಹ್ಯಸ್ಯ ಲೀಲಾಮಾತ್ರಸ್ವಭಾವತಃ | ಅರ್ಚನಾರ್ಪಣರೋಪೇಣ ತತ್ಸರ್ವಂತುಪ್ರತೀಯತ || ತಸ್ಮಾದ್ಭಕ್ತಿಪದೆ ಪಾಪಪುಣ್ಯಯೋರ್ನೈವವರ್ತತೆ | ಅತಏವಪರಾಯಾಂತುಭಕ್ತೌನಚಶುಭಾಶುಭಂ " ಎಂದು ಪ್ರಮಾಣವಿರುವುದು. ||೮೧||

ಭಕ್ತಿಜ್ಞಾನವಿಹೀನಪುಣ್ಯಮದು ತಾಂ ಪಾಪಂ ಶಿವಜ್ಞಾನಸ |
ದ್ಭಕ್ತಿಸ್ವೀಕೃತಪಾಪಕರ್ಮ ಮದು ಪುಣ್ಯಂ ಪುಣ್ಯಪಾಪದ್ವಯಂ ||
ಭಕ್ತಿಜ್ಞಾನಸಮೇತಸದ್ಗುರುಕೃಪಾಲಬ್ಧಪ್ರಸಾದಕ್ರಿಯಾ |
ಯುಕ್ತಂಗಿಲ್ಲದು ಕಾರಣಂ ಶ್ರುತಿಮತಂ ಸತ್ಯಂ ಶಿವಾವಲ್ಲಭಾ ||೮೨||

ಟೀಕೆ—ಭಕ್ತಿಜ್ಞಾನವಿಹೀನಪುಣ್ಯಂ-ಭಕ್ತಿಜ್ಞಾನ-ಶಿವಭಕ್ತಿ ಶಿವಜ್ಞಾನಂಗಳು, ವಿಹೀನ-ಇಲ್ಲದಂಥ, ಪುಣ್ಯಂ-ಪುಣ್ಯವು, ಅದುತಾಂ-ಅದುತಾನು, ಪಾಪಂ-ಪಾಪಕೃತ್ಯವು, (ಈ ಅರ್ಥದಲ್ಲಿ—'' ಶಿವಭಕ್ತಿವಿಹೀನಸ್ಯಸುಕೃತಂಚಾಪಿನಿಷ್ಫಲಂ | ವಿಪರೀತಫಲಂಚಾಸ್ಯದಕ್ಷಸ್ಯಾಪಿಮಹಾಧ್ವರೆ '' ಎಂದುಂಟು). ಶಿವಜ್ಞಾನಸದ್ಭಕ್ತಿಸ್ವೀಕೃತಪಾಪಕರ್ಮಂ-ಶಿವಜ್ಞಾನಸದ್ಭಕ್ತಿ-ಶಿವಜ್ಞಾನದೃಢಭಕ್ತಿಗಳಿಂ, ಸ್ವೀಕೃತ-ಅಂಗೀಕರಿಸಲ್ಪಟ್ಟ, ಪಾಪಕರ್ಮಂ-ಪಾಪಕೃತ್ಯವು, ಅದು-ತಾನು, ಪುಣ್ಯಂ-ಸುಕೃತವು, (ಈ ಅರ್ಥದಲ್ಲಿ—'' ಅತ್ಯಂತಪಾಪಕರ್ಮಾಪಿ ಶಿವಭಕ್ತ್ಯಾವಿಶುದ್ಧ್ಯತಿ | ಚಂಡೋಯಥಾಪ-ರಾಭಕ್ತ್ಯಾಪಿತೃಹಾಪಿಶಿವೋಭವತ್ '' || ಎಂದುಂಟು). ಭಕ್ತಿಜ್ಞಾನಸಮೇತಸದ್ಗುರುಕೃಪಾಲಬ್ಧಪ್ರಸಾದಕ್ರಿಯಾಯುಕ್ತಂಗೆ-ಭಕ್ತಿಜ್ಞಾನಸಮೇತ-ಭಕ್ತಿಜ್ಞಾನದೊಡನೆಕೂಡಿದ, ಸದ್ಗುರು-ಶ್ರೀಗುರುವಿನ, ಕೃಪಾ-ಕರುಣದಿಂದ, ಲಬ್ಧ-ಪಡೆಯಲ್ಪಟ್ಟ, ಪ್ರಸಾದಕ್ರಿಯಾಯುಕ್ತಂಗೆ-ಅನುಗ್ರಹಾಚಾರಗಳುಳ್ಳವನಿಗೆ, ಪುಣ್ಯಪಾಪದ್ವಯಂ-ಆ ಪುಣ್ಯಪಾಪಂಗಳೆರಡೂ, ಇಲ್ಲ-ಇಲ್ಲವು. ಅದುಕಾರಣಂ-ಅದು

ನಿಮಿತ್ತವಾಗಿ, ಶ್ರುತಿಮತಂ-"ನಪುಣ್ಯಪಾಪೇಮಮನಾಸ್ತಿಶೋಕಃ" ಕೈವಲ್ಯೋಪನಿಷತ್ತಿಗೆ ಸಮ್ಮತವು, ಸತ್ಯಂ-ಯಥಾರ್ಥವು ||೮೩||

ಟಿಪ್ಪಣಿ—ಶಿವಭಕ್ತಿ ಶಿವಜ್ಞಾನಗಳಿಂದ ಕೂಡದೆ ಮಾಡಲ್ಪಟ್ಟ ಪುಣ್ಯಕಾರ್ಯವೂ ಪಾಪ ಆಗುವುದು ಶಿವಭಕ್ತಿ ಶಿವಜ್ಞಾನಗಳಿಂದ ಕೂಡಿ ಮಾಡಿದ ಪಾಪಕರ್ಮವು ಕೂಡ ಪುಣ್ಯವಾಗುವು ಹೇಗೆಂದರೆ—ದಕ್ಷಬ್ರಹ್ಮನು ಯಾಗರೂಪಸತ್ಕರ್ಮವನ್ನಾಚರಿಸಿದರೂ, ಅದು ಶಿವಭಕ್ತಿ ಶಿವಜ್ಞಾ ಕ್ಕೆ ದೂರವಾಗಿ ಶಿವವಿರುದ್ಧವಾಗಿ ಆಚರಿಸಲ್ಪಟ್ಟುದರಿಂದ, ಅವನ ಉದ್ದೇಶಕ್ಕೆ ವಿರುದ್ಧವಾ ದುಷ್ಫಲವೇ ಪ್ರಾಪ್ತವಾಯಿತು. ಕುರಿಯಹಿಕ್ಕೆಯನ್ನು ಶಿವಲಿಂಗವೆಂದು ಪೂಜಿಸುತ್ತಿದ್ದ ಚಂಡೇಶ ತನ್ನ ತಂದೆಯ ಕಾಲನ್ನು ಕತ್ತರಿಸಿದುದು ಪಾಪಕರ್ಮವಾಗಿದ್ದರೂ ಅವನ ಕೃತ್ಯದಲ್ಲಿ ಶಿವಭ ಯು ನೆಲೆಯಾಗಿದ್ದುದರಿಂದ, ಅವರೀರ್ವರಿಗೂ ಕೈಲಾಸಪ್ರಾಪ್ತಿರೂಪಸತ್ಫಲವೇ ಉಂಟಾಯಿ ಭಕ್ತಿ ಜ್ಞಾನ ಸಮೇತರಾಗಿ, ಗುರುಕಾರುಣ್ಯದಿಂದ ತಮ್ಮ ಸಕಲ ಕ್ರಿಯೆಗಳೂ ಶಿವಾನುಗ್ರ ಪ್ರಸಾದರಾಗಿರುವ ಶರಣರಿಗೆ ಆ ಪುಣ್ಯ ಪಾಪೋಭಯಕರ್ಮವೂ ಇರುವುದಿಲ್ಲ. (ಈ ಅರ್ಥಕ್ಕೆ "ಪುಣ್ಯಪಾಪೋಭಯಂಕರ್ಮಮತೇ ಭಕ್ತಿಮತೇಕುತಃ" ಎಂದು ಪ್ರಮಾಣವುಂಟು). ಅದುಕಾ ಣವೇ ಈರೀತಿಯು "ಪುಣ್ಯ ಪಾಪ ಶೋಕಗಳು ನನಗಿಲ್ಲ" ಎಂದು ಹೇಳಿರುವ ಉಪನಿಷದ್ವಚನಕ್ಕೆ ಅನುಮತವಾಗಿದೆ. ||೮೩||

ಪಾಶದ್ವಂದ್ವವಿಮುಕ್ತನಾಗಿ ಶಿವಭಕ್ತಿಜ್ಞಾನಯೋಗಕ್ರಿಯಾ |
ವೇಶೋಲ್ಲಾಸವಿಲಾಸವಿಕ್ರಮವಿಶೇಷೋತ್ಕೃಷ್ಟಸದ್ವೀರಮಾ ||
ಹೇಶಾಚಾರಪರಾಯಣಂ ಶರಣ ನಿಪ್ಪರ್ಗಂ ಪುಣ್ಯಪಾಪೋಭಯ |
ಕ್ಲೇಶಾಯಾಸನಿಷೇಧವೈಧರಹಿತೋದ್ಯುಕ್ತಂ ಶಿವಾವಲ್ಲಭಾ ||೮೪||

ಟೀಕೆ—ಶಿವಭಕ್ತಿ......ಪರಾಯಣಂ-ಶಿವಭಕ್ತಿ-ಶಿವಭಕ್ತಿಯ, ಜ್ಞಾನ-ಶಿವಜ್ಞಾನದ, ಯೋಗ-ಕೂಟದಲ್ಲಿಯ, ಕ್ರಿಯಾ-ಆಚರಣೆಯ, ಆವೇಶ-ಪರವಶದ, ಉಲ್ಲಾಸ-ಸಂತಸದಿಂದಲಾದ, ವಿಲಾಸ-ಲೀಲೆಯಲ್ಲಿ, ವಿಕ್ರಮವಿಶೇಷ-ಪರಾಕ್ರಮಾ ತಿಶಯದಿಂದ, ಉತ್ಕೃಷ್ಟ-ಅಧಿಕನಾದ, ಸತ್-ಒಳ್ಳಿತಾದ, ವೀರಮಾಹೇಶ್ವರಾ ಚಾರ-ವೀರಮಾಹೇಶ್ವರಾಚಾರದಲ್ಲಿ, ಪರಾಯಣಂ-ಅಭಿಪ್ರಾಯವನುಳ್ಳ, ಪುಣ್ಯ ಪಾಪೋಭಯಕ್ಲೇಶಾಯಾಸನಿಷೇಧವೈಧರಹಿತೋದ್ಯುಕ್ತಂ-ಪುಣ್ಯಪಾಪ-ಶುಭಾಶುಭ ಕರ್ಮಂಗಳೆಂಬ, ಉಭಯ-ಎರಡರಲ್ಲಿ, ಕ್ಲೇಶ-ದುಃಖದಿಂದಲೂ, ಆಯಾಸ-ಪ್ರಯಾ ಸದಿಂದಲೂ, ನಿಷೇಧವೈಧ-ವಿಧಿನಿಷೇಧಂಗಳಿಂ, ರಹಿತ-ಬಿಡುವುದರಲ್ಲಿ, ಉದ್ಯುಕ್ತ-ಉದ್ಯೋಗವನುಳ್ಳಂಥ, ಶರಣಂ-ಶಿವಶರಣನು, ಪಾಶದ್ವಂದ್ವವಿಮುಕ್ತವಾಗಿ, ಪುಣ್ಯ ಪಾಪಂಗಳೆಂಬೆರಡುಪಾಶಗಳಿಂಬಿಡಲ್ಪಟ್ಟಾತನಾಗಿ, ಇಪ್ಪರ್ಗಂ-ಇಪ್ಪರ್ಗನು. ||೮೪||

ಟಿಪ್ಪಣಿ—ಶಿವಭಕ್ತಿ ಶಿವಜ್ಞಾನ ಶಿವಯೋಗ ಸಂಬಂಧವಾದ ಆಚರಣೆಯನ್ನು ಒಳ್ಳೆ ಆವೇಶಯುಕ್ತವಾಗಿ ಮಾಡುವುದರಿಂದ ಸಂಜನಿಸಿದ ಸಂತೋಷವಿಲಾಸದಲ್ಲಿ ಕೂಡಿದವನೂ, ಪರಶ್ರೀ

ಪರದ್ರವ್ಯಾದಿ ಪರಾಙ್ಮುಖತ್ವ ಶಿವದೂಷಣಾದ್ಯಸಹನರೂಪ ವೀರಧರ್ಮದಿಂದುತ್ಕೃಷ್ಟವಾದ ವೀರಮಾಹೇಶ್ವರಾಚರಣೆಯಲ್ಲಿ ತತ್ಪರನೂ-ಪುಣ್ಯಪಾಪಕರ್ಮ ದುಃಖದಿಂದಲೂ, ತತ್ಕರ್ಮಾಚರಣೆಯ ಆಯಾಸದಿಂದಲೂ, ವಿಧಿನಿಷೇಧಗಳಿಂದಲೂ ಬಿಡಲ್ಪಟ್ಟ ವ್ಯಾಪಾರವುಳ್ಳವನೂ-ಆದ ಶಿವಶರಣನು ಪುಣ್ಯಪಾಪಪಾಶದ್ವಂದ್ವದಿಂದ ವಿಮುಕ್ತನಾಗಿರುವನು. ||೮೩||

ಪಾಪಾಪಾಪವಿಲೇಪಲೋಪಕರನಿರ್ಲೇಪಪ್ರಸಾದಪ್ರಭಾ |
ವೋಪೇತಪ್ರಬಲಪ್ರತಾಪವಿಲಸದ್ಭಕ್ತಿಕ್ರಿಯಾಯೋಗದೊ ||
ಳ್ಪಾಪಂ ಪಾಪ ಮದಲ್ಲ ಪುಣ್ಯ ಮದು ತಾನುಂ ಪುಣ್ಯಮಲ್ಲಂ ಸ್ವಲೀ |
ಲಾಪರ್ಯಾಪ್ತಗುಣೈಕಭಕ್ತಿವಿಭವಂ ತಾನೇ ಶಿವಾವಲ್ಲಭಾ ||೮೪||

ಟೀಕೆ—ಪಾಪಾ.........ಯೋಗದೊಳ್-ಪಾಪಾಪಾಪ-ಪಾಪಪುಣ್ಯಂಗಳ, ವಿಲೇಪ-ವಿವಿಧಲೇಪಕ್ಕೆ, ಲೋಪಕರ-ನಾಶವಮಾಡುತ್ತಿರ್ಪ, ನಿರ್ಲೇಪ-ನಿರ್ಮಳವಾದ, ಪ್ರಸಾದ-ಜ್ಞಾನದ, ಪ್ರಭಾವ-ಸಾಮರ್ಥ್ಯದೊಡನೆ, ಉಪೇತ-ಕೂಡಿದಂಥ, ಪ್ರಬಲ-ವೆಗ್ಗಳವಾದ, ಪ್ರತಾಪ-ಪರಾಕ್ರಮದಿಂದ, ವಿಲಸತ್-ಒಪ್ಪುತಲಿರ್ಪ, ಭಕ್ತಿಕ್ರಿಯಾಯೋಗದೊಳ್-ಭಕ್ತಿವ್ಯಾಪಾರಕೂಟದಲ್ಲಿ, ಪಾಪಂ-ಪಾಪವು, ಪಾಪಮದಲ್ಲ-ಅದು ಪಾಪವಲ್ಲ. ಪುಣ್ಯಮದುತಾನುಂ-ಆ ಪುಣ್ಯವೂ, ಪುಣ್ಯಮಲ್ಲಂ-ಪುಣ್ಯಮಲ್ಲವು, ಸ್ವಲೀಲಾಪರ್ಯಾಪ್ತಗುಣೈಕಭಕ್ತಿವಿಭವಂ-ಸ್ವ-ತನ್ನ, ಲೀಲಾ-ವಿಲಾಸದಿಂದ, ಪರ್ಯಾಪ್ತ-ಚೆನ್ನಾಗಿ ಐದಲ್ಪಟ್ಟ, ಗುಣ-ಸದ್ಗುಣಂಗಳಲ್ಲಿ, ಏಕ-ಮುಖ್ಯವಾದ, ಭಕ್ತಿ-ಶಿವಭಕ್ತಿಯ, ವಿಭವಂ-ಐಶ್ವರ್ಯವನುಳ್ಳಾತನು, ತಾನೇ-ಶರಣನು ತಾನೇ. ||೮೪||

ಟಿಪ್ಪಣಿ—ಸದ್ಭಕ್ತಾಚರಣೆಯ ಯೋಗವು ಪಾಪಪುಣ್ಯ ಕರ್ಮಲೇಪವನ್ನು ನಾಶಮಾಡಿ, ನಿರ್ಮಲವಾದ ಶಿವಾನುಗ್ರಹದ ಸಾಮರ್ಥ್ಯದಿಂದ ಸಂಜನಿಸಿದ ಅಸಾಧಾರಣವಾದ ಪರಾಕ್ರಮದಿಂದ ಒಪ್ಪುತ್ತಿರುವ ಕಾರಣ, ಅಂಥ ಯೋಗದಲ್ಲಿರುವ ಶಿವಶರಣನು ಆಚರಿಸುವ ಪಾಪಕೃತ್ಯವು ಪಾಪವಲ್ಲ; ಪುಣ್ಯಕೃತ್ಯವು ಪುಣ್ಯವಲ್ಲ, "ಅಸ್ತೀದಗ್ಧಪಟನ್ಯಾಯಾದ್ಯೋಗಿನಸ್ಸಕಲಾಃಕ್ರಿಯಾಃ" ಎಂಬ ಪ್ರಮಾಣದಂತೆ ಶಿವಯೋಗಿಯ ಕರ್ಮಗಳೆಲ್ಲವೂ ತೋರಿಕೆಗೆ ಮಾತ್ರವೇ ಇರುತ್ತ ನಿಷ್ಫಲಗಳಾಗಿರುವದಾದಕಾರಣ, ಯಾವ ಕರ್ಮವನ್ನಾತನಾಚರಿಸಿದರೂ ಅದರ ಫಲಲೇಪದಿಂದ ದೂರನಾಗಿರುವನು. ಶುದ್ಧಾತ್ಮನಾದ ಆ ಶರಣನ ಕ್ರಿಯೆಗಳೆಲ್ಲವೂ ಭಕ್ತಿವಿಲಾಸನೈಭವಗಳಾಗಿರುವಕಾರಣ, ಅವು ನಿಜವಾದ ಕ್ರಿಯೆಗಳಾಗಿರುವುದಿಲ್ಲ. ||೮೪||

ತಮಮುಂ ಜೊನ್ನಮು ಮೇಕರಾತ್ರಿಯೊಳೆ ವರ್ತಿಪ್ಪಂದದಿಂ ಪಾಪಮುಂ |
ಸುಮಹತ್ಪುಣ್ಯಮು ಮೇಕಕರ್ಮದೊಳೆ ವರ್ತಿಕ್ಕುಂ ಸಮಂ ಮತ್ತ ಮಾ ||
ತಮಮಂ ಜೊನ್ನಮುಮಂ ಕೆದರ್ಚಿ ದಿನಕೃತ್ತೀವ್ರಾತಪಂ ನಿಲ್ವಸಂ |
ಭ್ರಮಮೆಂತಂತೆ ಶಿವೈಕಭಕ್ತಿವಿಭವಂ ನಿಲ್ಕುಂ ಶಿವಾವಲ್ಲಭಾ ||೮೫||

ಟೀಕೆ—ತಮಮುಂ-ಕತ್ತಲೆಯೂ, ಜೊನ್ನಮುಂ-ಬೆಳ್ದಿಂಗಳೂ, ಏಕ... ಯೊಳ್ ಒಂದೇರಾತ್ರಿಯಲ್ಲಿಯೇ, ವರ್ತಿಪ್ಪಂದದಿಂ-ವರ್ತಿಸುವಹಾಂಗೆ, ... ಮುಂ-ದುಷ್ಕೃತವೂ, ಸುಮಹತ್ಪುಣ್ಯಮುಂ-ಮಿಗೆದೊಡ್ಡಿತಾದ ಸುಕೃತವೂ, ... ಕರ್ಮದೊಳ್-ಒಂದೇಕರ್ಮದಲ್ಲಿಯೇ, ಸಮಂ-ಸಮವಾಗಿ, ವರ್ತಿಕ್ಕುಂ-ವರ್ತಿಸು... ವು. ಆ ತಮಮುಂ-ಆ ಕತ್ತಲೆಯನ್ನು, ಜೊನ್ನಮುಮಂ-ಬೆಳ್ದಿಂಗಳನ್ನೂ, ಕೆಡ... ಓಡಿಸಿ, ಮತ್ತೆ-ಮರಳಿ, ದಿನಕೃತ್ತೀವ್ರಾತಪಂ-ದಿನಕೃತ್-ಸೂರ್ಯನ, ತೀವ್ರ... ಚಂಡವಾದ, ಆತಪಂ-ಬಿಸಿಲು, ನಿಲ್ವ-ಉಂಟಾಗುವ, ಸಂಭ್ರಮಂ-ಉತ್ಸಾ... ಎಂತು-ಹೇಗೋ, ಅಂತು,-ಹಾಗೆ, ಶಿವೈಕಭಕ್ತಿವಿಭವಂ-ಶಿವೈಕಾಂತಭಕ್ತಿಯ... ರ್ಯವು, ನಿಲ್ಗುಂ-ಸ್ಥಿರವಾಗಿನಿಲ್ಲುವುದು (ಪುಣ್ಯಪಾಪಂಗಳಿಲ್ಲವೆಂಬುದಭಿಪ್ರಾಯ...

ಟಿಪ್ಪಣಿ—ಕತ್ತಲೆ ಬೆಳ್ದಿಂಗಳುಗಳೆರಡೂ ಒಂದು ರಾತ್ರಿಯಲ್ಲಿಯೇ ಇರುತ್ತಿರುವಹಾಗೆ ... ಪುಣ್ಯಗಳೆರಡೂ ಕರ್ಮ ಮಾರ್ಗವೊಂದರಲ್ಲೇ ಇರುವುವು. ಸೂರ್ಯನ ಬಿಸಿಲು ಆ ಕತ್ತಲೆ ... ಗಳುಗಳೆರಡನ್ನೂ ಓಡಿಸಿ ತಾನೇತಾನಾಗಿ ಹೇಗೆ ನಿಂತುಕೊಳ್ಳುವುದೋ, ಹಾಗೆ ಪಾಪ ಪುಣ್ಯ ... ಬಂಧವನ್ನು ತೊಲಗಿಸಿ ಶಿವಭಕ್ತಿಯು ತಾನೇತಾನಾಗಿ ನಿಲ್ಲುವುದು (ಈ ಅರ್ಥದಲ್ಲಿ—"... ಜ್ಯೋತ್ಸ್ನಾಪ್ರವೃತ್ತಿರ್ಹಿರಾತ್ರಾವೇವನಚಾಹನಿ | ಪುಣ್ಯಪಾಪೋಭಯಂಕರ್ಮಮತೇಭಕ್ತಿ... ತಃ | ಆಹನ್ಯಾತಪಏವಾಸ್ತೇತಮೋಜ್ಯೋತ್ಸ್ನಾವಿಲಕ್ಷಣೆ ") ಎಂದು ಪ್ರಮಾಣವುಂಟು.

ದಿವದೊಳ್‌ಚಂದ್ರಮರೀಚಿಯುಂ ತಿಮಿರಮುಂ ವರ್ತಿಕ್ಕುಮೇರಾತ್ರಿಯೊಳ್ |
ಪ್ರವರಂಬೆತ್ತಗಲಕ್ಕೆ ಪರ್ವಿಮಿಗೆ ವರ್ತಿಪ್ಪಂದದಿಂಪುಣ್ಯಪಾ ||
ಪವಿಕಾರಂ ಜಡಕರ್ಮಕಾಂಡದೊಳೆ ತಾಂ ವರ್ತಿಕ್ಕುಮೈಸಲ್ಲದೀ |
ಶಿವಭಕ್ತಿಸ್ಥಲದೊಳ್ಪ್ರವರ್ತಿಸುಗುಮೇ ಪೇಳಾ ಶಿವಾವಲ್ಲಭಾ ||...

ಟೀಕೆ—ರಾತ್ರಿಯೊಳ್-ರಾತ್ರಿಯಲ್ಲಿ, ಚಂದ್ರಮರೀಚಿಯುಂ-ಬೆಳ್ದಿಂಗಳು... ತಿಮಿರಮುಂ-ಕತ್ತಲೆಯೂ, ಪ್ರವರಂಬೆತ್ತು-ಅತ್ಯಂತಪೆರ್ಚುಗೆಯಾಗಿ, ಅಗಲಕ್ಕೆ-... ಸ್ತಾರವಾಗಿ, ಪರ್ವಿ-ಪಸರಿಸಿ, ಮಿಗೆ-ಚೆನ್ನಾಗಿ, ವರ್ತಿಪ್ಪಂದದಿಂ-ವರ್ತಿಸುವಹಾಂ... ದಿವದೊಳ್-ಪಗಲಲ್ಲಿ, ವರ್ತಿಕ್ಕುಮೆ-ವರ್ತಿಸುವುವೆ ? ಜಡಕರ್ಮಕಾಂಡದೊಳೆ-... ತನಕರ್ಮಕಾಂಡದಲ್ಲಿಯೇ, ಪುಣ್ಯಪಾಪವಿಕಾರಂ-ಶುಭಾಶುಭಂಗಳವಿಕಾರವು, ತಾಂ-... ತಾವು, ವರ್ತಿಕ್ಕುಮೈಸಲ್ಲದೆ-ವರ್ತಿಸುವವಷ್ಟಲ್ಲದೆ, ಈ ಶಿವಭಕ್ತಿಸ್ಥಲದೊಳ್-... ಶಿವಭಕ್ತಿಮಾರ್ಗದಲ್ಲಿ, ವರ್ತಿಸುಗುಮೆ-ವರ್ತಿಸುವುವೆ ?

ಟಿಪ್ಪಣಿ—ರಾತ್ರಿಯ ಹೊತ್ತು ಬೆಳ್ದಿಂಗಳೂ ಕತ್ತಲೆಯೂ ಹಬ್ಬಿಕೊಂಡು ಇರುತ್ತ... ಹಾಗೆ ಹಗಲಹೊತ್ತು ಅವುಗಳು ಇರುವುವೇ ? ಇಲ್ಲ. ಅದರಂತೆಯೇ ಪಾಪ ಪುಣ್ಯ ಕರ್ಮವಿ... ವೆಲ್ಲವೂ ಜಡವಾದ ಕರ್ಮಕಾಂಡದಲ್ಲಿರುತ್ತಿರುವುದೇ ಹೊರತು ಶಿವಭಕ್ತಿ ಮಾರ್ಗದಲ್ಲಿರುವ... ಎಂದಿಗೂ ಇಲ್ಲ.

ಫಲಮಂ ಮುಕ್ತಿಫಲಾಂತವಾಗಿ ಕುಡುವಾ ಸಾಮರ್ಥ್ಯಮುಂಟಾಗಿಯುಂ |
ಫಲಮೇನುಂ ತನಗಿಲ್ಲ ನೋಡೆ ಸಫಲಂ ತಾನಾಗಿಯುಂ ಬಂಧಕೃ ||
ತ್ಫಲದಾನಸ್ಪೃಹೆಯಿಲ್ಲ ನಿಷ್ಫಲತೆಯಿಂ ಸಾಫಲ್ಯಮಂ ಸ್ವಕ್ರಿಯಾ |
ಫಲದೊಳ್ ಪೊರ್ದ್ದದ ಭಕ್ತಿಯೋಗಫಲ ಮಾಶ್ಚರ್ಯಂ ಶಿವಾವಲ್ಲಭಾ ||೮೭||

ಟೀಕೆ—ಮುಕ್ತಿಫಲಾಂತಮಾಗಿ-ಮೋಕ್ಷಫಲವೇಕಡೆಯಾಗಿ, ಫಲಮಂ-ಫಲವನ್ನು, ಕುಡುವ-ಈಯುವಂಥ, ಆ ಸಾಮರ್ಥ್ಯಂ-ಆ ಶಕ್ತಿಯು, ಉಂಟಾಗಿಯುಂ-ಉಳ್ಳುದಾಗಿಯೂ, ನೋಡೆ-ವಿಚಾರಿಸಲಾಗಿ, ಸಫಲಂತಾನಾಗಿಯುಂ-ತಾನೇಫಲಸ್ವರೂಪನಾಗಿಯೂ, ಫಲಂ-ಫಲವು, ತನಗೆ-ಭಕ್ತಿಯೋಗವೆಂಬಾತನಿಗೆ, ಏನುಮಿಲ್ಲ-ಕಿಂಚಿನ್ಮಾತ್ರವೂ ಇಲ್ಲ. ನಿಷ್ಫಲತೆಯಿಂ-ತನಗೆ ಮತ್ತೊಂದು ಫಲವಿಲ್ಲದಿಹುದರಿಂದ, ಬಂಧಕೃತ್ಫಲದಾನಸ್ಪೃಹೆಯಿಲ್ಲ-ಬಂಧಕೃತ್-ಸಂಸಾರಬಂಧಮಂಮಾಳ್ಪ, ಫಲದಾನ-ಫಲವಕೊಡುವಲ್ಲಿ, ಸ್ಪೃಹೆ-ಇಚ್ಛೆ, ಇಲ್ಲ—ದೊರಕದು, ಸ್ವಕ್ರಿಯಾಫಲದೊಳ್-ತನ್ನ ಕ್ರಿಯಾಫಲದಲ್ಲಿ, ಸಾಫಲ್ಯಮಂ-ಸಾರ್ಥಕತ್ವವನು, ಪೊರ್ದ್ದದ-ಸಂಬಂಧಿಸದ, ಭಕ್ತಿಯೋಗಫಲಂ-ಶಿವಭಕ್ತಿಯೋಗದ ಫಲವು, ಆಶ್ಚರ್ಯಂ-ಚೋದ್ಯವು.

ಟಿಪ್ಪಣಿ—ಭಕ್ತಿಯೋಗವು ಮೋಕ್ಷಫಲದವರೆಗೆ ಕೊಡುವಷ್ಟು ಸಾಮರ್ಥ್ಯವುಳ್ಳುದಾದರೂ ವಿಚಾರಿಸಿ ನೋಡಿದರೆ, ಅದು ಪಡೆಯಬೇಕಾದ ಮತ್ತೊಂದು ಫಲವಿರುವುದಿಲ್ಲ. ಅದೇ ಫಲಸ್ವರೂಪವಾದುದು. ಹಾಗೆ ಅದು ನಿಷ್ಫಲವಾದುದರಿಂದಲೇ ಭಕ್ತಿಯೋಗದಲ್ಲಿ ಸಂಸೃತಿಬಂಧವನ್ನುಂಟುಮಾಡತಕ್ಕ ಫಲೇಚ್ಛೆಯೆಂಬುವುದು ಹುಟ್ಟುವುದಿಲ್ಲ. ಅದುಕಾರಣ, ತನ್ನ ಕ್ರಿಯೆಗೆ ಯಾವುದೊಂದು ಫಲದ ಅಪೇಕ್ಷೆಯನ್ನೂ ಹೊಂದದೆಯಿರತಕ್ಕ ಈ ಭಕ್ತಿಯೋಗದ ಫಲವು ಲೋಕಕ್ಕೆ ಆಶ್ಚರ್ಯವೆಸರಿ (ಈ ಅರ್ಥದಲ್ಲಿ " ಭಾವಾನುರೂಪಫಲದಾಸ್ತ್ವಾಶ್ರಿತಾನಾಂಫಲೈಷಿಣಾಂ | ಉತ್ತರೋತ್ತರರೂಪೇಣಭಕ್ತಿಃಪೂರ್ಣಾನಿರುತ್ತರಾ " ಎಂದು ಪ್ರಮಾಣವುಂಟು). ||೮೭||

ಫಲಕಾಮತ್ವ ಮದುಳ್ಳೊಡಂ ಸಕಲಸತ್ಕರ್ಮಂಗಳೊ ಳ್ಭಕ್ತಿಗಾ |
ಫಲದಿಂ ಬಂಧಮದಿಲ್ಲ ಮೋಕ್ಷಮು ಮದುಂ ತಾನಿಲ್ಲ ನಿಷ್ಕಾಮ್ಯತಾ ||
ಫಲದಿಂ ನೋಳ್ಪೊಡೆ ಬಂಧಮೋಕ್ಷಯುಗ ಮುಂಟಾದಲ್ಲಿ ಶಶ್ವನ್ಮಹಾ |
ಫಲ ಮಪ್ಪುತ್ತರಭಕ್ತಿಯೋಗಫಲ ಮಿಲ್ಲೆಂದುಂ ಶಿವಾವಲ್ಲಭಾ ||೮೮||

ಟೀಕೆ—ಭಕ್ತಿಗೆ-ಶಿವಭಕ್ತಿಗೆ, ಸಕಲರ್ಮಂಗಳೊಳ್-ಸಮಸ್ತವಾದ ಸತ್ಕ್ರಿಯೆಗಳಲ್ಲಿ, ಫಲಕಾಮತ್ವಂ-ಫಲವಬಯಸುವುದು, ಅದು-ತಾನು, ಉಳ್ಳೊಡಂ-ಉಂಟಾದೊಡೆಯೂ, ಆ ಫಲದಿಂ-ಆ ಫಲದಿಂದೆ, ಬಂಧಮದು-ಸಂಸಾರಬಂಧವೆಂಬುದು ತಾನು, ಇಲ್ಲ-ಉಂಟಾಗುತ್ತಿರದು. ನೋಳ್ಪೊಡೆ-ವಿಚಾರಿಸುವೊಡೆ, ನಿಷ್ಕಾಮ್ಯತಾಫಲದಿಂ-ನಿಷ್ಕಾಮ್ಯತ್ವವೇಫಲವಾಗುಳ್ಳುದರಿಂದೆ, ಮೋಕ್ಷಮದುಂ-ಆ ಮೋಕ್ಷವೆಂ

ಬುದೂ, ತಾಂ-ತಾನು, ಇಲ್ಲ-ಉಂಟಾಗದು. ಬಂಧಮೋಕ್ಷಯುಗಂ-ಬಂಧ ಕ್ಷಂಗಳೆರಡೂ, ಉಂಟಾದಲ್ಲಿ-ಉಂಟೆಂಬಪಕ್ಷದಲ್ಲಿ, ಶಶ್ವನ್ಮಹಾಫಲಮಪ್ಪ, ವಾದ ಮಹಾಫಲಮಪ್ಪ, ಉತ್ತರಭಕ್ತಿಯೋಗಫಲಂ-ಉತ್ತರಮಾರ್ಗವಾದ ಕ್ತಿಯೋಗದಫಲವು, ಎಂದುಂ-ಎಲ್ಲಾಗಳೂ, ಇಲ್ಲ-ಉಂಟಾಗುತ್ತಿರದು (ಈ ದಲ್ಲಿ "ನಬಂಧೋಽಸ್ತಿನಮೋಕ್ಷೋಽಸ್ತಿನಿತ್ಯಮುಕ್ತಸ್ಯಕಾಮುಕ್ತಿಃ" ಯಾಜ್ಞವಲ್ಕ್ಯೋಪನಿಷತ್ತುಂಟು). ||

ಟಿಪ್ಪಣಿ—ಭಕ್ತಿಯೋಗದಲ್ಲಿ ಫಲಾಭಿಸಂಧಿಯಿಂದ ಸಕಲ ಕರ್ಮಂಗಳನ್ನು ಆಚರಿ ಅದರ ಫಲವು ಬಂಧಕಾರಿಯಾಗುವುದಿಲ್ಲ. ಶಿವಭಕ್ತಿಗೆ ನಿಷ್ಕಾಮ್ಯತ್ವವೇ ಫಲವಾಗಿರುವ ಅದಕ್ಕೆ ಮೋಕ್ಷರೂಪ ಫಲವೂ ಇಲ್ಲ (ಬಂಧನವೇ ಇಲ್ಲದಿರುವಾಗ ಅದರ ಮೋಚನವ ಬಂಧಮೋಕ್ಷಗಳೆರಡೂ ಉಂಟೆಂದು ಹೇಳಿದರೆ, ಎಲ್ಲಕ್ಕೂ ಉತ್ತರೋತ್ತರಮಹಾಶಾಶ್ವತ ಫ ವಾದ ಭಕ್ತಿಯೋಗಫಲವೇ ಇಲ್ಲದಂತಾಗುವುದು (ಈ ಅರ್ಥದಲ್ಲಿ "ನಬಂಧೋನಚಮುಕ್ತ ವಾದ್ಯಭಿಮಾನಿತಾ | ನಸುಖಂನ್ನೈವದುಃಖಂಚನಾಜ್ಞಾನಂಜ್ಞಾನಮೇವವಾ | ಏಕೀಭಾವಮು ನಾಂಯೋಗಿನಾಂಪರಮಾತ್ಮನಾಂ" ಎಂದು ಸಿದ್ಧಾಂತಶಿಖಾಮಣಿ ವಚನ ಪ್ರಮಾಣವುಂಟು).

ಬಂಧಂ ಸಂಸೃತಿಪಾಶದಾವರಣ ಮಾಬಂಧಾವೃತಿಚ್ಛೇದನಂ |
ಬಂಧಚ್ಛೇದನ ಮಾಪ್ರಗಾಢತರಬಂಧಚ್ಛೇದನಂ ಮೋಕ್ಷ ಮಾ ||
ಬಂಧಂ ಮೋಕ್ಷದನಂತರಂ ಮರಳಿ ತಾನುಂಟಾಗಿ ಸದ್ಭಕ್ತಿಯಾ |
ಬಂಧಂ ಮೋಕ್ಷಮು ಮಿಲ್ಲದಲ್ಲಿ ಬೆಳಗುತ್ತಿರ್ಕುಂ ಶಿವಾವಲ್ಲಭಾ ||

ಟೀಕೆ—ಸಂಸೃತಿಪಾಶದ-ಸಂಸಾರಪಾಶದ, ಆವರಣಂ-ಬಲೆಯೇ, ಬಂಧ- ಬಂಧವೆನಿಸುವುದು. ಆ ಬಂಧಾವೃತಿಚ್ಛೇದನಂ-ಆ ಬಂಧಾವರಣವಕಡಿವುದೇ, ಚ್ಛೇದನಂ-ಬಂಧಚ್ಛೇದನವೆನಿಸುವುದು. ಆಪ್ರಗಾಢತರಬಂಧಚ್ಛೇದನಂ-ಆಪ್ರಗಾ ತರ-ಆ ಅತ್ಯಂತದೃಢತರವಾದ, ಬಂಧ-ಕಟ್ಟಿನ, ಛೇದನಂ-ಖಂಡಿಸುವುದೇ, ಮೋ ಕ್ಷಂ-ಮುಕ್ತಿಯೆನಿಸುವುದು. ಮೋಕ್ಷದನಂತರಂ-ಮೋಕ್ಷದನಂತರದಲ್ಲಿ, ಮರ ಮತ್ತೆಯೂ, ಆ ಬಂಧಂ-ಆ ಮಾಯಾಪಾಶಬಂಧವುತಾನುಂಟಾಗಿ, ಆ ಬಂಧಂ- ಮಾಯಾಪಾಶಬಂಧವೂ, ಮೋಕ್ಷಮುಂ-ಆ ಮುಕ್ತಿಯೂ, ಇಲ್ಲದಲ್ಲಿ-ಉಂಟಾ ದಲ್ಲಿ, ಭಕ್ತಿ-ಶಿವಭಕ್ತಿಯು, ಬೆಳಗುತ್ತಿರ್ಕುಂ-ಪ್ರಕಾಶಿಸುತ್ತಿರ್ಪುದು. ||

ಟಿಪ್ಪಣಿ—ಸಂಸಾರಪಾಶದ ಕಟ್ಟುವಿಕೆಯೇ ಬಂಧವೆನಿಸುವುದು. ಅಂಥ ಕಟ್ಟನ್ನು ಕ ಯುವುದೇ ಬಂಧಛೇದನವೆನಿಸಿಕೊಳ್ಳುವುದು. ಆ ಛೇದನವೇ ಮೋಕ್ಷವು ಆ ಮೋಕ್ಷಪ್ರಾಪ್ತಿ ನಂತರವೂ ಮರಳಿ ಬಂಧವು ಪ್ರಾಪ್ತವಾಗುವುದಾದ ಕಾರಣ, ಒಂದರಹಿಂದೊಂದು ಬರುವ ಆ ಮೋಕ್ಷಗಳೆರಡೂ ಯಾವಲ್ಲಿ ಇರುವುದಿಲ್ಲವೋ ಅಲ್ಲಿ ಶಿವಭಕ್ತಿಯು ಪ್ರಕಾಶಿಸುವುದು. "ಬಂಧ ವಿಮುಕ್ತಿಸ್ತಾತ್ತ್ವಿಕೀ ಬಂಧನಂ ... ಅನ್ಯ...ಮಾನನ್ಯ...ಕೀನಚಿತ್ ||

ಸ್ವರಾನುಬಂಧೇನವರ್ತ್ತೇತಬಂಧಮೋಚನೇ । ತಸ್ಮಾತ್ತಯೋರಭಾವೇತುಭಕ್ತಿರುಕ್ತಾನಿರಂಕುಶಾ ॥
ಎಂದು ಪ್ರಮಾಣವುಂಟು. ॥೮೯॥

ಗಗನಂ ಮಾರುತಪಾಶದಿಂ ಬಿಗಿದು ಕಟ್ಟಲ್ಕಟ್ಟುಗೊಂಡಂದು ಭ ।
ಕ್ತಿಗೆ ಬಂಧಂ ದೃಢಪಾಶಮೋಚನ ಮದ ಕ್ಕಾದಂದು ಮೋಕ್ಷಂದಿಟಂ ॥
ಬಗೆಯಲ್ಭಕ್ತಿಗೆ ಬಂಧಮೋಕ್ಷಯುಗಳಂ ಸಂಸಾರಪಾಶಪ್ರಧಾ ।
ನಗುಣಂ ಸತ್ಯ ಮದುಂಟೆ ಉಂಟು ಪುಸಿ ಮತ್ತೆಲ್ಲಂ ಶಿವಾವಲ್ಲಭಾ ॥೯೦॥

ಟೀಕೆ—ಗಗನಂ-ಆಕಾಶವು, ಮಾರುತಪಾಶದಿಂ-ವಾಯುವೆಂಬ ಹಗ್ಗದಿಂ, ಬಿಗಿದು-ಬಲಿದು, ಕಟ್ಟಲ್-ಬಂಧಿಸಲಾಗಿ, ಕಟ್ಟುಗೊಂಡಂದು-ಬಂಧನಕ್ಕೊಳಗಾದಂದು, ಭಕ್ತಿಗೆ-ಶಿವಭಕ್ತಿಗೆ, ಬಂಧಂ-ಬಂಧವುಂಟು. ಅದಕ್ಕೆ-ಆ ಆಕಾಶಕ್ಕೆ, ದೃಢಪಾಶಮೋಚನಂ-ಬಲ್ಲಿತ್ತಾದಪಾಶಮೋಚನವು, ಆದಂದು-ಆದಕಾಲದಲ್ಲಿ, ಮೋಕ್ಷಂ-ಮುಕ್ತಿಯು, ದಿಟಂ-ಆ ಭಕ್ತಿಗೆ ಸಹಜವು, ಬಗೆಯಲ್-ವಿಚಾರಿಸಲಾಗಿ, ಭಕ್ತಿಗೆ-ಆ ಶಿವಭಕ್ತಿಗೆ, ಸಂಸಾರಪಾಶಪ್ರಧಾನಗುಣಂ-ಸಂಸಾರಪಾಶ-ಮಾಯಾಪಾಶವೆಂಬ, ಪ್ರಧಾನಗುಣಂ-ಮುಖ್ಯವಾದ ಹಗ್ಗವು, ಅದು-ತಾನು, ಸತ್ಯಂ-ದಿಟವಾಗಿ, ಉಂಟೆ-ಉಂಟಾದಪಕ್ಷದಲ್ಲಿ, ಬಂಧಮೋಕ್ಷಯುಗಳಂ-ಬಂಧಮೋಕ್ಷಂಗಳೆಂಬೆರಡು, ಉಂಟು-ಒಳವು, ಮತ್ತೆಲ್ಲಂ-ಉಳಿದುದೆಲ್ಲವೂ, ಪುಸಿ-ಮಿಥ್ಯೆ (ಆಕಾಶವು ವಾಯುಪಾಶದಿಂ ಬಂಧಮೋಕ್ಷಕ್ಕೊಳಗಾದಂದಿಗೆ ಭಕ್ತಿಗೆ ಸಂಸಾರಪಾಶದಿಂ ಬಂಧಮೋಕ್ಷಂಗಳು ದೊರಕೊಳ್ಳುವುವು. ಆ ಆಕಾಶಕ್ಕೆ ಇಲ್ಲದ ಬಳಿಕ ಈ ಭಕ್ತಿಗೆಯೂ ಇಲ್ಲವೆಂಬುದಭಿಪ್ರಾಯಂ ॥೯೦॥

ಟಿಪ್ಪಣಿ—ಆಕಾಶವನ್ನು ವಾಯುವೆಂಬ ಹಗ್ಗದಿಂದ ಬಿಗಿದು ಕಟ್ಟಿದರೆ, ಅಂಥ ಕಟ್ಟಿಗೆ ಅದು ಒಳಪಟ್ಟಾಗ, ಭಕ್ತಿಗೂ ಸಂಸಾರಬಂಧವುಂಟಾಗಬಹುದು. ಆಕಾಶಕ್ಕೆ ಅಂಥ ವಾಯುಪಾಶ ಬಂಧನದಿಂದ ಮೋಚನವುಂಟಾಯಿತೆಂದಾಗ, ಭಕ್ತಿಗೂ ನಿಜವಾಗಿ ಬಂಧಮೋಚನವುಂಟಾಗಬಹುದು. ಬಂಧ ಮೋಕ್ಷಗಳೆರಡೂ ಸಂಸಾರದ ಮುಖ್ಯಗುಣವಾಗಿರುವುದರಿಂದ, ಭಕ್ತಿಯೋಗದಲ್ಲಿ ಆ ಬಂಧ ಮೋಕ್ಷವು ಇರುವುದುಂಟೆ ? ಉಂಟೆಂದು ಹೇಳುವ ಮಾತೆಲ್ಲವೂ ಸುಳ್ಳು. ॥೯೦॥

ಅವತಾರಿಕೆ—ಶಿವಭಕ್ತಿಯಿಂ ಪುಟ್ಟಿದ ಜ್ಞಾನವು ಸಕಲ ಕರ್ಮಬಂಧನಗಳಂ ಪಂಹರಿಸುವುದೆಂದು ಪೇಳುತ್ತಿರ್ದಪಂ.—

ಸ್ಫಟಿಕಸ್ವಚ್ಛದಕಾಂತಿಯೊಳ್ವಿಮಲಸತ್ಪ್ರದ್ಯೋತನೋದ್ಯತ್ಪ್ರಭಾ ।
ಪಟಲಂ ಸಂಗಿಸೆ ವಹ್ನಿ ಪುಟ್ಟಿ ದಹಿಸುತ್ತಿರ್ಪಂತೆ ಸೂಂಕಲ್ಪರಿ ॥
ಸ್ಫುಟಭಕ್ತಿಕ್ರಿಯೆಯೊಳ್ಪ್ರಸಾದಕಳೆ ಕೂಡಲ್ ಶಾಂಭವ ಜ್ಞಾನಮು ।
ತ್ಕಟಿಸಿ ಸ್ಪರ್ಶಿಪ ದೋಷಮಂ ಪ್ರಹರಿಸುತ್ತಿರ್ಕುಂ ಶಿವಾವಲ್ಲಭಾ ॥೯೧॥

ಟೀಕೆ—ಪ್ರವಿಲಸತ್ಪ್ರದ್ಯೋತನೋದ್ಯತ್ಪ್ರಭಾಪಟಲಂ—ಪ್ರವಿಲಸತ್-... ಒಪ್ಪುತಿರ್ಪ, ಪ್ರದ್ಯೋತನ-ಸೂರ್ಯನತ್ತಣಿಂ, ಉದ್ಯತ್-ಹೊರಹೊಮ್ಮುತ್ತಿ... ಪ್ರಭಾ-ಕಾಂತಿಯ, ಪಟಲಂ-ಸಮೂಹವು, ಸ್ಫಟಿಕಸ್ವಚ್ಛದಕಾಂತಿಯೊಳ್-ಸ್ವ... ನಿರ್ಮಲವಾದ ಕಾಂತಿಯಲ್ಲಿ, ಸಂಗಿಸೆ-ಸಂಬಂಧಿಸಲಾಗಿ, ವಹ್ನಿ-ಅಗ್ನಿಯು, ... ಉದಿಸಿ, ಸೊಂಕಲ್-ಮುಟ್ಟಲಾಗಿ, ದಹಿಸುತ್ತಿರ್ಪಂತೆ-ಸುಡುವಹಾಂಗೆ, ಪರಿ... ಭಕ್ತಿಕ್ರಿಯೆಯೊಳ್-ಪರಿಸ್ಫುಟ-ಮಿಗಿ ವ್ಯಕ್ತವಾದ, ಭಕ್ತಿಕ್ರಿಯೆಯೊಳ್-ಭಕ್ತ... ಪಾರದಲ್ಲಿ, ಪ್ರಸಾದಕಳೆ-ಶಿವಚೈತನ್ಯವು, ಕೂಡಲ್-ಸಂಬಂಧಿಸಲಾಗಿ, ಶಾಂ... ಜ್ಞಾನಂ-ಶಿವಸಂಬಂಧವಾದ ಜ್ಞಾನವು, ಉತ್ಕಟಿಸಿ-ವೆಗ್ಗಳಿಸಿ, ಸ್ಪರ್ಶಿಪ-ಸೋಂ... ದೋಷಮಂ-ಅವಿದ್ಯಾವರಣಮೆಂಬ ದೋಷವನ್ನು, ಪ್ರಹರಿಸುತ್ತಿರ್ಕುಂ-ಸಂಹಾ... ವಮಾಡುವುದು. (ಈ ಅರ್ಥದಲ್ಲಿ—'' ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕು... ರುತೇಽರ್ಜುನ '' ಎಂದು ಭಗವದ್ಗೀತಾವಚನಮುಂಟು) ||...

ಟಿಪ್ಪಣಿ—ಹೊಳೆಯುವ ಸೂರ್ಯನಿಂದ ಹೊರಟ ಕಿರಣಸಮೂಹವು ಸ್ಫಟಿಕಶಿಲೆಯ... ಬಿದ್ದು ಅದರ ನಿರ್ಮಲಕಾಂತಿಯೊಡನೆ ಕೂಡಿದರೆ, ಬೆಂಕಿಯು ಹುಟ್ಟಿ ಸುಡುವಹಾಗೆ ಭಕ್ತಿಕ್ರಿ... ಯೊಡನೆ ಶಿವಾನುಗ್ರಹಚೈತನ್ಯವು ಕೂಡಿದರೆ, ಶಿವಜ್ಞಾನವು ಉದಿಸಿ, ಮಾಯಾಪಾಶದೋಷ... ಪಂಹರಿಸುವುದು. ||...

ಬೀಜಂ ಶಾಂಭವಭಕ್ತಿ ಯಂಕುರಮತಂ ಜ್ಞಾನಂ ಪ್ರಸಾದಂ ಫಳಂ |
ಬೀಜಾಂಕೂರಫಳಾಖ್ಯಭಕ್ತಿವಿಮಲಜ್ಞಾನಪ್ರಸಾದತ್ರಯಂ ||
ರಾಜಿಪ್ಪಾತ್ಮತನುತ್ರಯೈಕಸುಖಭೋಗಪ್ರತ್ಯಯಪ್ರಕ್ರಿಯಾ |
ಪೂಜಾಯೋಗಸಮಾಧಿನಿಷ್ಠೆಯೆಕಣಾ ಲಿಂಗಂ ಶಿವಾವಲ್ಲಭಾ ||...

ಟೀಕೆ—ಶಾಂಭವಭಕ್ತಿ-ಶಿವಸಂಬಂಧವಾದ ಭಕ್ತಿಯು, ಬೀಜಂ-ಬಿತ್ತ... ಜ್ಞಾನಂ-ಶಿವಜ್ಞಾನವೆಂಬುದೇ, ಅಂಕುರಮತಂ-ಮೊಳಕೆಯೆಂದುಸಮ್ಮತವು, ಪ್ರಸಾ... ದಂ-ಶಿವಚೈತನ್ಯವೇ, ಫಳಂ-ಫಳವು, ಬೀಜಾಂ......ತ್ರಯಂ-ಬೀಜಾಂಕೂರಫ... ಖ್ಯ-ಬೀಜ ಅಂಕುರ ಫಲವೆಂಬ ಪೆಸರನುಳ್ಳ, ಭಕ್ತಿ-ಶಿವಭಕ್ತಿಯು, ವಿಮಲ-ನಿರ್ಮ... ಲವಾದ, ಜ್ಞಾನ-ಶಿವಜ್ಞಾನವು, ಪ್ರಸಾದ-ಶಿವಚೈತನ್ಯವು, ತ್ರಯಂ-ಈ ಮೂರು... ರಾಜಿಪ್ಪ-ಒಪ್ಪುತಿರ್ಪ, ಆತ್ಮ......ನಿಷ್ಠೆಯೆ-ಆತ್ಮ-ಶರಣನಾದ ತನ್ನ, ತನುತ್ರ... ಯ-ತನುಮೂರರಲ್ಲಿ, ಏಕ-ಮುಖ್ಯವಾದ, ಸುಖ-ಪರಿಣಾಮದ, ಭೋಗ-ಅನುಭ... ಸುವುದರಲ್ಲಿಯ, ಪ್ರತ್ಯಯ-ಜ್ಞಾನದ, ಪ್ರಕ್ರಿಯಾ-ಕ್ರಮದಲ್ಲಿಯ, ಪೂಜಾ-ಅರ್ಚ... ನೆಯಲ್ಲಿಯ, ಯೋಗ-ಶಿವಸಾಮರಸ್ಯದಲ್ಲಿಯ, ಸಮಾಧಿ-ಚಿತ್ತೈಕಾಗ್ರತೆಯಲ್ಲಿಯ... ನಿಷ್ಠೆಯೆ-ವಿಶ್ವಾಸವೆ, ಲಿಂಗಂ... (ಭಕ್ತಿಜ್ಞಾನಪ್ರಸಾ...

ದದಿಂದೊಪ್ಪುವ ಸ್ಥೂಲಸೂಕ್ಷ್ಮಕಾರಣವೆಂಬ ತನುತ್ರಯದಲ್ಲಿ ಸಂಬಂಧವಾಗಿರ್ಪ ಪೂಜಾಯೋಗಸಮಾಧಿಗಳ ವಿಶ್ವಾಸವೇ ಮಹಾಲಿಂಗಸ್ವರೂಪೆಂಬುದಭಿಪ್ರಾಯಂ)||

ಟಿಪ್ಪಣಿ—ಶಿವಶರಣನು ಭಕ್ತಿಯೆಂಬ ಬೀಜದಿಂದೊಪ್ಪುವ ತನ್ನ ಸ್ಥೂಲಶರೀರದಲ್ಲಿ ಪೂಜಾರೂಪ ಕ್ರಿಯೆಯಿಂದ ತದುದ್ಭೂತಸುಖಾನುಭವನಿಷ್ಠನಾಗಿಯೂ, ಜ್ಞಾನವೆಂಬ ಮೊಳಕೆಯಿಂದೊಪ್ಪುವ ತನ್ನ ಸೂಕ್ಷ್ಮಶರೀರದಲ್ಲಿ ಶಿವೈಕ್ಯ ಕ್ರಿಯೆಯಿಂದ ತದುದ್ಭೂತ ಸುಖಾನುಭವನಿಷ್ಠನಾಗಿಯೂ, ಶಿವಚೈತನ್ಯವೆಂಬ ಫಲದಿಂದೊಪ್ಪುವ ತನ್ನ ಕಾರಣಶರೀರದಲ್ಲಿ ಚಿತ್ತೈಕಾಗ್ರತೆಯಿಂದ ತದುದ್ಭೂತ ಸುಖಾನುಭವನಿಷ್ಠನಾಗಿಯೂ ಇರುತ್ತಿರುವಿಕೆಯೇ ಮಹಾಲಿಂಗದ ಸ್ವರೂಪವಾಗಿರುವುದು ||

ಅವತಾರಿಕೆ—ಮಂತ್ರಯೋಗಿಗಳು ಪರೆ ಪಶ್ಯಂತಿ ಮಧ್ಯಮೆ ವೈಖರಿಯೆಂಬ ಚತುರ್ವಿಧವಾದ ಶಬ್ದನಿಷ್ಪತ್ತಿಯೇ ಪ್ರಯೋಜನವೆಂಬರು. ಶಿವಶರಣರು ಆ ನಾಲ್ಕನೂ ಭಕ್ತಿಸ್ವರೂಪವಾಗಿಯೇ ಕಾಣ್ಬರೆಂದು ಪೇಳುತ್ತಿರ್ದಪಂ —

ಪರೆಯೇ ಮಾನಸಭಕ್ತಿ ಚಾಕ್ಷುಷಪದಂ ಪಶ್ಯಂತಿಯೇ ವಾಚಿಕ |
ಸ್ಫುರಣಂ ಮಧ್ಯಮೆಯೇ ಗುರೂಕ್ತಿಮತದಿಂ ಸತ್ಕಾಯಕಂ ಭಕ್ತಿವೈ ||
ಖರಿಯೇ ನೋಳ್ಪೊಡೆ ಯಿಂತು ನಾಲ್ಕುತೆರನಾಗಿರ್ಕ್ಕುಂ ಮನಶ್ಚಕ್ಷುರು |
ತ್ತರವಾಕ್ಕಾಯಚತುರ್ವಿಧಪ್ರಣಿಧಿಯೊಳ್ತಾನೇ ಶಿವಾವಲ್ಲಭಾ ||೯೩||

ಟೀಕೆ—ಮನಶ್ಚಕ್ಷುರುತ್ತರವಾಕ್ಕಾಯಚತುರ್ವಿಧಪ್ರಣಿಧಿಯೊಳ್-ಮನಃ-ಮನಸ್ಸು, ಚಕ್ಷುಃ-ನೇತ್ರವು, ಉತ್ತರ-ಇದಕ್ಕಿಂತಲೂ ಮೊದಲಾದ, ವಾಕ್-ಶಬ್ದವು, ಕಾಯ-ಶರೀರವು, ಚತುರ್ವಿಧ-ಈ ಚತುರ್ವಿಧದ, ಪ್ರಣಿಧಿಯೊಳ್-ಯೋಗಮಾರ್ಗದಲ್ಲಿ ಪೇಳಲ್ಪಟ್ಟಧ್ಯಾನದಲ್ಲಿರ್ಪ, ತಾನೇ-ಅದುತಾನೇ, ಗುರೂಕ್ತಿಮತದಿಂ-ಶ್ರೀಗುರುನಿರೂಪದಿಂದೆ, ನೋಳ್ಪೊಡೆ-ವಿಚಾರಿಸಲಾಗಿ, ಪರೆಯೆ-ಪರಾಯೆಂಬದೇ, ಮಾನಸಭಕ್ತಿ-ಮನದಲ್ಲಿ ಭಕ್ತಿಯು; ಪಶ್ಯಂತಿ-ಪಶ್ಯಂತಿಯೆಂಬುದೇ, ಚಾಕ್ಷುಷಪದಂ-ಚಕ್ಷುಸ್ಸಿಗೆಗೋಚರಮಪ್ಪಭಕ್ತಿಯು, ಮಧ್ಯಮೆಯೇ-ಮಧ್ಯಮೆಯೆಂಬುದೇ, ವಾಚಿಕಸ್ಫುರಣಂ-ವಾಕ್ಕಿನಿಂದತೋರಿದ ಭಕ್ತಿಯು, ವೈಖರಿಯೇ ವೈಖರಿಯೆಂಬುದೇ, ಸತ್ಕಾಯಕಂ-ಒಳ್ಳಿತಾದ ಕಾಯಕರೂಪವಾದ, ಭಕ್ತಿ-ಭಕ್ತಿಯು, ಇವು-ಇವು ತಾನು, ಇಂತು-ಈಪ್ರಕಾರದಿಂದೆ, ನಾಲ್ಕುತೆರನಾಗಿರ್ಕ್ಕುಂ-ಚತುರ್ವಿಧ ಭಕ್ತಿಸ್ವರೂಪವಾಗಿರ್ಪವು ||೯೩||

ಟಿಪ್ಪಣಿ—ಮಂತ್ರಯೋಗಿಗಳು ಪುರುಷಾರ್ಥಸಾಧನೆಗೆ ವಾಗುಪಾಸನೆಯೇ ಮುಖ್ಯವೆಂದೂ, ಆ ವಾಕ್ಕು ಮೂಲಾಧಾರಸ್ಥಾನದಲ್ಲುದಿಸಿ ಪರೆಯೆಂತಲೂ, ನಾಭಿಸ್ಥಾನದಲ್ಲಿದ್ದು ಪಶ್ಯಂತಿಯೆಂತಲೂ, ಹೃದಯಸ್ಥಾನದಲ್ಲಿದ್ದು ಮಧ್ಯಮೆಯೆಂತಲೂ, ಕಂಠಸ್ಥಾನದಲ್ಲಿದ್ದು ವೈಖರಿಯೆಂತಲೂ ಹೇಳಲ್ಪಡುವುದೆಂದು ಹೇಳುವರು. ಆ ಚತುರ್ವಿಧ ಶಬ್ದನಿಷ್ಪತ್ತಿಯೇ ಅವರಿಗೆ ಪ್ರಯೋಜನವಾಗಿರುವುದು. ಭಕ್ತಿಯೋಗಮಾರ್ಗದಲ್ಲಿರುವ ಶರಣನಾದರೊ ಆ ಚತುರ್ವಿಧವಾಗ್ವ್ಯಕ್ತಿಯನ್ನು ಭಕ್ತಿ

ಮುಯುವನ್ನಾಗಿಯೇ ತಿಳಿದಿರುವನು. ಹೇಗೆಂದರೆ—ಮನಸ್ಸಿನಲ್ಲಿ ಶಿವಧ್ಯಾನವನ್ನು ಅಚ್ಚು... ಭಕ್ತಿಯೇ ಪರೆಯು, ಕಣ್ಣಿನಿಂದ ಶಿವರೂಪದರ್ಶನವನ್ನು ಮಾಡುವ ಭಕ್ತಿಯೇ ಪಶ್ಯಂತಿ... ವಾಕ್ಕಿನಿಂದ ಶಿವಸ್ತುತಿಯನ್ನು ಮಾಡುವ ಭಕ್ತಿಯೇ ಮಧ್ಯಮೆಯು, ಅಂಗದಿಂದ ಶಿವಾರ್ಚನೆ... ಮಾಡುವ ಭಕ್ತಿಯೇ ವೈಖರಿಯು.

ಸ್ಮರಣಂ ಪ್ರೇಕ್ಷಣ ಮೀಳನಂ ಯಜನ ಮೆಂಬೀನಾಲ್ಕು ಸದ್ಭಕ್ತಿಯೊ |
ಳ್ಪರಿಣಾಮಂಬಡೆಯಲ್ಕೆ ಲಿಂಗನಿಜಲೀಲಾಲೋಲಶೀಲತ್ವದಿಂ ||
ಪರೆ ಪಶ್ಯಂತಿ ಸುಮಧ್ಯೆ ವೈಖರಿ ಯೆನಿಪ್ಪಾಕಾರಮಂ ಸಾದರಂ |
ಧರಿಸಿರ್ಪೊಂದಿರವಂ ಮಹತ್ತರಮ ನೇನೆಂಬೆಂ ಶಿವಾವಲ್ಲಭಾ . ||...

ಟೀಕೆ—ಲಿಂಗನಿಜಲೀಲಾಲೋಲಶೀಲತ್ವದಿಂ-ಲಿಂಗನಿಜ-ಸಹಜವಾದ... ಲಿಂಗದ, ಲೀಲಾ-ವಿಲಾಸದಲ್ಲಿ, ಲೋಲ-ಲವಲವಿಕೆಯನುಳ್ಳ, ಶೀಲತ್ವದಿಂ-ಸ್ವಭಾ... ವುಂಟಪ್ಪುದರಿಂ, ಪರಿಣಾಮಂಬಡೆಯಲ್ಕೆ-ಭಕ್ತಿ ಸುಖವಂಪಡೆಯುವುದಕ್ಕೆ, ಸ್ಮರ... ಶಿವಲಿಂಗದಸ್ಮರಣೆಯು, ಪ್ರೇಕ್ಷಣಂ-ಶಿವಲಿಂಗದ ನೋಟವು, ಈಳನಂ-ಶಿವಲಿಂ... ಸ್ತುತಿಯು, ಎಂಬೀನಾಲ್ಕು-ಹೀಗೆಂಬನಾಲ್ಕು, ಸದ್ಭಕ್ತಿಯೊಳ್—ಅಕಳಂಕ... ಭಕ್ತಿಯಲಿ, ಪರೆ ಪಶ್ಯಂತಿಸುಮಧ್ಯೆವೈಖರಿಯೆನಿಪ್ಪ-ಪರಾಪಶ್ಯಂತೀಮಧ್ಯಮಾವೈ... ಗಳೆಂಬ, ಆಕಾರಮಂ-ಸ್ವರೂಪವನು, ಸಾದರಂ-ಪ್ರೀತಿ ಸಹಿತಮಪ್ಪಂತೆ, ಧ... ರ್ಪ-ತಾಳಿರ್ಪ, ಒಂದಿರವಂ-ಒಂದು ನಿಲುಗಡೆಯನ್ನು, ಮಹತ್ತರಮಂ-ಅಧಿ... ವಾದುದನು, ಏನೆಂಬೆಂ-ಏನೆಂದು ಹೇಳುವೆನು !

ಟಿಪ್ಪಣಿ—ಶಿವಶರಣನು ಶಿವಲಿಂಗಲೀಲೆಯ ಆಸಕ್ತಿಯೊಂದೇ ಸ್ವಭಾವನಾಗಿರುವಕಾರಣ... ಲಿಂಗಭಕ್ತಿ ಸುಖಾನುಭವವಂ ಮಾಡುವುದಕ್ಕಾಗಿ ಲಿಂಗಸ್ಮರಣ ಲಿಂಗದರ್ಶನ-ಲಿಂಗಸ್ತುತಿ-ಲಿಂಗ... ಎಂಬ ಈ ಚತುರ್ವಿಧಭಕ್ತಿಯಲ್ಲಿ ಪರಾ ಪಶ್ಯಂತೀ-ಮಧ್ಯಮಾವೈಖರೀ-ಎಂಬ ಚತುರ್ವಿಧಸ್ವ... ವನ್ನು ಧರಿಸಿರುವ ಆತನ ಅಸಾಧಾರಣವಾದ ರೀತಿಯನ್ನು ನಾನೇನು ಹೇಳಲಿ !

ಸ್ಮರಿಸು ತ್ತೀಕ್ಷಿಸು ತೀಳಿಸುತ್ತೆ ಯಜಿಸು ತ್ತಾ ನಂದದಿಂ ಭಕ್ತಿಶಾಂ |
ಕರಿ ನಿತ್ಯಂ ನಿಜಲಿಂಗಸಂಗರತಿಯೊ ಳ್ಸಮ್ಯಕ್ ಸಮಾಧಿಕ್ರಿಯಾ ||
ಚರಣಂಬೆತ್ತು ಚತುರ್ವಿಭಾಗವಿಡಿ ದಿರ್ಪ್ಪಾನಿಷ್ಠೆ ತಾನೀಗಳೇ |
ಪರೆ ಪಶ್ಯಂತಿ ಸುಮಧ್ಯೆ ವೈಖರಿ ಯೆನ ಲ್ತೋರ್ಕುಂ ಶಿವಾವಲ್ಲಭಾ ||...

ಟೀಕೆ—ಭಕ್ತಿಶಾಂಕರಿ-ಶಿವಸಂಬಂಧವಾದ ಭಕ್ತಿಯು, ನಿತ್ಯಂ-ಅನಾಗ... ನಿಜಲಿಂಗಸಂಗರತಿಯೊಳ್-ನಿಜ-ಸ್ವಕೀಯವಾದ, ಲಿಂಗ-ಮಹಾಲಿಂಗದೊಡನೆ... ಗ-ಸಂಪರ್ಕದಲ್ಲಿ, ರತಿಯೊಳ್-ತಾತ್ಪರ್ಯದಲ್ಲಿ, ಸ್ಮರಿಸುತ್ತೆ-ನೆನೆವುತ್ತ, ಈಕ್ಷಿ... ತ್ತೆ-ನೋಡುತ್ತೆ, ಈಳಿಸುತ್ತೆ-ಸ್ತುತಿಸುತ್ತ, ಯಜಿಸುತ್ತೆ-... ಆನಂದದಿ-ಪರಮಾನಂ...

ದ, ಸಮ್ಯಕ್ಸಮಾಕ್ರಿಯಾಚರಣಂಬೆತ್ತು-ಸಮ್ಯಕ್-ಚೆನ್ನಾಗಿ, ಸಮಾಧಿ-ಚಿತ್ತೈಕಾಗ್ರತೆಯು, ಕ್ರಿಯಾ-ವ್ಯಾಪಾರದ, ಆಚರಣಂಬೆತ್ತು-ಆಚರಿಸುವುದನ್ನು ತಾಳ್ದು, ಚತುರ್ವಿಭಾಗವಿಡಿದಿರ್ಪ್ಪ-ನಾಲ್ಕು ವಿಧವಾದ ವಿಭಾಗವನು ಧರಿಸಿಕೊಂಡಿರ್ದ, ಆನಿಷ್ಠೆ-ಆ ಶಿವಭಕ್ತಿಯು, ತಾನೀಗಳೇ-ತಾನೀಗ, ಪರೆಪಶ್ಯಂತಿಸುಮಧ್ಯೆವೈಖರಿಯೆನಲ್-ಪರಾ ಪಶ್ಯಂತೀ ಮಧ್ಯಮಾ ವೈಖರಿ ಯೆಂಬ ನಾಮಂಗಳಂ ತಾಳ್ದು, ತೋರ್ಕ್ಕಂ-ತೋರುತ್ತಿರ್ಪುದು. ||೯೫||

ಟಿಪ್ಪಣಿ—ಶರಣನು ಯಾವಾಗಲೂ ಲಿಂಗಾಂಗಸಾಮರಸ್ಯದಲ್ಲಿ ದೃಢವಾದ ಚಿತ್ತೈಕಾಗ್ರತೆಗೊಂಡ ಆಚರಣೆಯುಳ್ಳವನಾಗಿ, ಆನಂದದಿಂದ ಲಿಂಗದ ಸ್ಮರಣೆ-ಈಕ್ಷಣೆ-ಸ್ತುತಿ-ಪೂಜೆ ಯೆಂಬದಾಗಿ ಆಚರಿಸುವ ನಾಲ್ಕು ತೆರದ ಈ ಭಕ್ತಿಯೇ ಪರೆ ಪಶ್ಯಂತಿ ಮಧ್ಯಮೆ ವೈಖರಿ ಯೆಂದು ನಾಲ್ಕು ವಿಧವಾಗಿ ತೋರುತ್ತಿರುವುದು. ||೯೫||

ಅವತಾರಿಕೆ—ಕರ್ಮಜ್ಞಾನಕಾಂಡಂಗಳತ್ತಣಿಂದುತ್ತರಮಾದ ಭಕ್ತಿಕಾಂಡಮಂ ಪೇಳುತ್ತಿರ್ದಪಂ :—

ಆನೆಂದೆಂಬುದು ಕರ್ಮಕಾಂಡಮತ ಮೆಲ್ಲಾ ಕೃತ್ಯಕರ್ತೃತ್ವದೊ |
ಳ್ತಾನಲ್ಲೀಕರಣಾಳಿ ಸಾಕ್ಷಿಯಹೆ ನೆಲ್ಲಕ್ಕೆಂಬುದೇ ಜ್ಞಾನಕಾಂ ||
ಡಾನುಷ್ಠಾನಮತಂ ಸಮಸ್ತಕರಣಂ ಕರ್ತವ್ಯಮುಂ ಕರ್ತೃವುಂ |
ನೀನೇ ಎಂಬುದು ಭಕ್ತಿಕಾಂಡಮತನಿರ್ವಾಹಂ ಶಿವಾವಲ್ಲಭಾ ||೯೬||

ಟೀಕೆ—ಎಲ್ಲಾ ಕೃತ್ಯಕರ್ತೃತ್ವದೊಳ್-ಎಲ್ಲಾ-ಸಮಸ್ತವಾದ, ಕೃತ್ಯ-ಕಾರ್ಯದ, ಕರ್ತೃತ್ವದೊಳ್—ಒಡೆತನದಲ್ಲಿ, ಆನೆಂದೆಂಬುದು—ನಾನೆಂದಭಿಮಾನಿಸುವುದು, ಕರ್ಮಕಾಂಡಮತಂ-ಕರ್ಮಕಾಂಡದಮತವು, (ಈ ಅರ್ಥದಲ್ಲಿ—"ಅಹಂಕರ್ತಾಸಮಸ್ತಸ್ಯಧರ್ಮಾಧರ್ಮಸ್ಯಕರ್ಮಣಃ | ಇತ್ಯನೇನಾಭಿಮಾನೇನ ಕರ್ಮಕಾಂಡೋಽಯಮುಚ್ಯತೆ" ಎಂದುಂಟು) ತಾಂಅಲ್ಲ-ಈ ಕಾರ್ಯಕ್ಕೆನಾನಲ್ಲ, ಈ ಕರಣಾಳಿಸಾಕ್ಷಿಯಹೆಂಎಲ್ಲಕ್ಕೆ-ಈ ಇಂದ್ರಿಯಂಗಳೆಲ್ಲವಕ್ಕೆಯೂ ನಾನೇಸಾಕ್ಷಿಯಪ್ಪೆನು, ಎಂಬುದೇ-ಹೀಗೆಂಬುದೇ, ಜ್ಞಾನಕಾಂಡಾನುಷ್ಠಾನಮತಂ-ಜ್ಞಾನಕಾಂಡಾಚರಣೆಯ ಮತವು. (ಈ ಅರ್ಥದಲ್ಲಿ—"ನಾಹಂಕರ್ತಾಽಸ್ಯ ಕರ್ತೃತ್ವಂನೈವಸಾಕ್ಷೀಸ್ವಭಾವತಃ | ಇತ್ಯನೇನಾಭಿಮಾನೇನ ಜ್ಞಾನಕಾಂಡೋಽಯಮುಚ್ಯತೆ" ಎಂದುಂಟು.) ಸಮಸ್ತಕರಣಂ-ಸಮಸ್ತ-ಸಕಲವಾದ, ಕರಣಂ-ಮಾಡುವತನವೂ, ಕರ್ತವ್ಯಂ-ಮಾಡಲ್‌ತಕ್ಕವಸ್ತುವೂ, ಕರ್ತೃವುಂ-ಮಾಡುವಾತನೂ, ನೀನೇ ಎಂಬುದು-ಹೀಗೆಂಬುದು, ಭಕ್ತಿಕಾಂಡಮತನಿರ್ವಾಹಂ-ಭಕ್ತಿಕಾಂಡಮತದನಿರುಗೆಯು, (ಈ ಅರ್ಥದಲ್ಲಿ—"ನಕರ್ತಾಹಂನಸಾಕ್ಷೀಚ ಶಿವಏವೇತಿಕರ್ಮಣಃ | ದ್ವಯಾಭಿಮಾನರಾಹಿತ್ಯಂಭಕ್ತಿಕಾಂಡೋಽಯಮುಚ್ಯತೆ, ಎಂದುಂಟು. ||೯೬||

ಟಿಪ್ಪಣಿ—ಎಲೈ ಪರಶಿವನೆ! ಸಮಸ್ತ ಧರ್ಮಾಧರ್ಮ ಕಾರ್ಯವನ್ನಾಚರಿಸು
ನಾನೇ ಕರ್ತೃವೆಂದು ಅಭಿಮಾನಪಡುವುದು ಕರ್ಮಕಾಂಡದಭಿಪ್ರಾಯವು. ಈ ಕಾರ್ಯ
ಲ್ಲಾ ಮಾಡುವವನು ನಾನಲ್ಲ, ಇಂದ್ರಿಯಗಳಿಗೆಲ್ಲಾ ನಾನು ಸಾಕ್ಷಿಯಾಗಿದ್ದೇನೆ, ಯ
ಜ್ಞಾನಕಾಂಡದಭಿಪ್ರಾಯವು. ಎಲ್ಲ ಕಾರ್ಯಗಳನ್ನು ಮಾಡುವಿಕೆಯೂ ಮಾಡಲ್ಪಡತಕ್ಕ
ಮಾಡತಕ್ಕ ಕರ್ತೃವೂ ಸಹ ನೀನೇ ಯೆನ್ನುವುದು ಭಕ್ತಿಕಾಂಡದಭಿಪ್ರಾಯದ ರೀತಿಯು.

ಕರ್ಮಜ್ಞಾನಶಿವೈಕಭಕ್ತಿ ಯೆನಿಪೀ ಕಾಂಡತ್ರಯಾನುಷ್ಠಿತಂ |
ಕರ್ಮಂ ತಾಂ ಪ್ರಕಟಂ ರಹಸ್ಯಮುಭಯಾನ್ಯತ್ವಪ್ರಕಾರಕ್ರಮಂ ||
ವರ್ಮಾವರ್ಮವಿಧಾನಯೋಗವಿವಿಧಾಶೇಷಸ್ವಕರ್ತವ್ಯದೊ |
ಳ್ನೈರ್ಮಲ್ಯಂ ತನ ಗಪ್ಪ ಶುದ್ಧಿಕರಣೋಪಾಯಂ ಶಿವಾವಲ್ಲಭಾ ||

ಟೀಕೆ—ಕರ್ಮಜ್ಞಾನಶಿವೈಕಭಕ್ತಿಯೆನಿಪ-ಕರ್ಮಜ್ಞಾನಶಿವಭಕ್ತಿಯ
ಈ ಕಾಂಡತ್ರಯಾನುಷ್ಠಿತಂ-ಈ ಪೇಳ್ದ ಮೂರುಕಾಂಡಂಗಳಿಂದಪ್ಪನುಷ್ಠಾನ
ವೆಂತೆಂದೊಡೆ, ಕರ್ಮಂತಾಂ-ಕರ್ಮವೆಂಬುದುತಾನು, ಪ್ರಕಟಂ-ವ್ಯಕ್ತವಾಗಿ
ರಹಸ್ಯಂ-ಜ್ಞಾನಕಾಂಡವೆಂಬುದು ಗೂಢವಾಗಿರ್ಪುದು, ಉಭಯಾನ್ಯತ್ವ
ಕ್ರಮಂ-ಉಭಯ-ಕರ್ಮಜ್ಞಾನವೆಂಬೆರಡಕ್ಕಿಂದೆಯೂ, ಅನ್ಯತ್ವ-ಬೇರಪ್ಪ
ಯ, ಪ್ರಕಾರ-ಮಾರ್ಗದ, ಕ್ರಮಂ-ಲಕ್ಷಣವು, ವರ್ಮಾವರ್ಮವಿಧಾನ
ವಿಧಾಶೇಷಸ್ವಕರ್ತವ್ಯದೊಳ್-ವರ್ಮ-ಅಂಗದ, ಅವರ್ಮ-ಲಿಂಗದ, ವಿಧಾನ
ಸನೆಯ ಮಾಡುವಲ್ಲಿಯು, ಯೋಗ-ಜ್ಞಾನದಿಂದ, ವಿವಿಧ-ಅನೇಕಪ್ರಕಾರ
ಅಶೇಷ-ಸಮಸ್ತವಾದ, ಸ್ವಕರ್ತವ್ಯದೋಳ್-ತಾಮಡಲ್ತಕ್ಕುದರಲ್ಲಿ, ತನಗೆ
ಗೆ, ನೈರ್ಮಲ್ಯಂಅಪ್ಪ-ನಿರ್ಮಲಸ್ವರೂಪವಾದ, ಶುದ್ಧಿಕರಣೋಪಾಯಂ-
ಯಮಾಡುವುದಕ್ಕುಪಾಯವು.

ಟಿಪ್ಪಣಿ—ಕರ್ಮಜ್ಞಾನ-ಭಕ್ತಿಯೆಂಬ ಈ ಮೂರುಕಾಂಡಗಳಿಂದುಂಟಾಗತಕ್ಕ
ರೀತಿಯು ಹೇಗೆಂದರೆ—ಕರ್ಮವು ಬಹಿರಂಗವಾದುದು ; ಜ್ಞಾನವು ಗೂಢವಾದುದು;
ಮಾಡುವ ಲಿಂಗಾರ್ಚನೆಯು ಯೋಗದಲ್ಲಿ ಆಚರಿಸುವ ಸಕಲ ಕಾರ್ಯಗಳಲ್ಲಿಯೂ ತನಗೆ
ತ್ವವನ್ನುಂಟುಮಾಡುವ ಉಪಾಯವೇ ಭಕ್ತಿಕಾಂಡದ ರೀತಿಯಾಗಿರುವುದು.

ಆಯಾಸಂ ಪ್ರಕಟಂ ಸ್ವಕರ್ಮಕ ಮನಾಯಾಸಂ ರಹಸ್ಯಂ ಪರಂ |
ಪ್ರಾಯಶ್ಚಿತ್ತವಿಧಾನ ಮಿಂತಿವೆರಡಕ್ಕುಂ ಬಾಹ್ಯಮಾಗಿರ್ಪತ ||
ತ್ಪ್ರಾಯಶ್ಚಿತ್ತವಿಧಾನ ಮೆಂಬುಭಯನಾನ್ಯಂ ಭಾಕ್ತಿಕಂ ಶುದ್ಧನಿ |
ರ್ಮಾಯಂ ಸೌಖ್ಯತರಂ ಶಿವಾರ್ಪಣಕರಂ ನಿತ್ಯಂ ಶಿವಾವಲ್ಲಭಾ ||

ಟೀಕೆ—ಪ್ರಕಟಂ-ಪ್ರಸಿದ್ಧವಾದ, ಸ್ವಕರ್ಮಕಂ-ಕರ್ಮವೇ ತಾನಾಗಿರ್ಪ
ಆಯಾಸಂ-ಪ್ರಯಾಸವು, ರಹಸ್ಯಂ-ಗೂಢವಾದ, ಪ್ರಾಯಶ್ಚಿತ್ತವಿಧಾನಂ-

ಕ್ಕೆ ಪ್ರಾಯಶ್ಚಿತ್ತವಮಾಡುವ, ಪರಂ-ಬೇರಾದಜ್ಞಾನವು, ಅನಾಯಾಸಂ-ಪ್ರಯಾಸವಿಲ್ಲದುದು, ಇಂತಿವೆರಡಕ್ಕುಂ-ಈ ಕರ್ಮಜ್ಞಾನಕಾಂಡವೆರಡಕ್ಕೂ, ಬಾಹ್ಯಮಾಗಿರ್ಪ-ಬೇರಾಗಿರ್ಪ, ತತ್ಪ್ರಾಯಶ್ಚಿತ್ತವಿಧಾನಂ-ತತ್-ಆ ಜ್ಞಾನಕರ್ಮಂಗಳಿಗೆ, ಪ್ರಾಯಶ್ಚಿತ್ತವಿಧಾನಂ-ಪರಿಶುದ್ಧಿಯಮಾಡುವುದು, ಎಂಬ-ಹೀಗೆಂಬ, ಉಭಯ-ಜ್ಞಾನಕ್ರಿಯೆಗಳೆರಡಕ್ಕೆ, ನಾನ್ಯಂ-ಬೇರಲ್ಲದಂಥ, ಭಾಕ್ತಿಕಂ-ಭಕ್ತಿಸಂಬಂಧವಾದಕಾಂಡವು, ಶುದ್ಧನಿರ್ಮಾಯಂ-ಶುದ್ಧ-ಪರಿಶುದ್ಧವಾಗಿ, ನಿರ್ಮಾಯಂ-ಪ್ರಪಂಚರಹಿತವು, ಸೌಖ್ಯತರಂ-ಪರಮಾನಂದಸ್ವರೂಪವಾಗಿರುವುದು. ಶಿವಾರ್ಪಣಕರಂ-ಶಿವಸಾಮರಸ್ಯಮಂಮಾಳ್ಪುದು, ನಿತ್ಯಂ-ಕೇಡಿಲ್ಲದುದು. ||೯೮||

ಟಿಪ್ಪಣಿ—ಪ್ರಕಟವಾದ ಕರ್ಮಕಾಂಡವು ಪ್ರಯಾಸದಿಂದ ಕೂಡಿದುದು. ಗೂಢವಾಗಿಯೂ ಕರ್ಮಕ್ಕೆ ಪ್ರಾಯಶ್ಚಿತ್ತಕಾರಿಯಾಗಿಯೂ ಇರುವ ಜ್ಞಾನಕಾಂಡವು ಪ್ರಯಾಸವಿಲ್ಲದುದು. ಈ ಕರ್ಮಜ್ಞಾನಕಾಂಡಗಳೆರಡಕ್ಕೂ ಮೀರಿದುದಾಗಿಯೂ ಅವೆರಡಕ್ಕೂ ಪ್ರಾಯಶ್ಚಿತ್ತಕಾರಿಯಾಗಿಯೂ, ಅವೆರಡಕ್ಕೂ ಬೇರಲ್ಲವಾಗಿಯೂ ಅಂದರೆ ಜ್ಞಾನಕ್ರಿಯಾ ಸಹಿತವಾಗಿ ಇರುವ ಭಕ್ತಿಕಾಂಡವು ಶುದ್ಧವಾಗಿಯೂ ಮಾಯಾರಹಿತವಾಗಿಯೂ, ಸುಖಕರವಾಗಿಯೂ, ಶಿವಸಾಮರಸ್ಯಕರವಾಗಿಯೂ, ಶಾಶ್ವತವಾಗಿಯೂ, ಇರುವುದು. ||೯೮||

ಅಣಿಮಾದ್ಯಷ್ಟಗುಣಪ್ರಸಿದ್ಧಮಹದೈಶ್ವರ್ಯಂ ನಿಜೈಶ್ವರ್ಯದೊ |
ಳ್ತೃಣಸಾಧಾರಣ ಮಿಂದ್ರಜಾಲಕೃತಕಂ ಸ್ವಾಭೀಷ್ಟಸಂಸಿದ್ಧಿಯೊ ||
ಳ್ಮಣಿಮಂತ್ರೌಷಧಸಿದ್ಧಿಗಿದ್ದಿಗ ಳವೆಲ್ಲಂ ಭ್ರಾಂತಿ ಮಿಥ್ಯಾಮಯಂ |
ಕ್ಷಣಿಕಂ ತಾ ನೆನಿಸಿರ್ಪ್ಪ ಭಕ್ತಿಪದ ಮಿನ್ನೇನೋ ಶಿವಾವಲ್ಲಭಾ ||೯೯||

ಟೀಕೆ—ನಿಜೈಶ್ವರ್ಯದೊಳ್-ಭಕ್ತಿಕಾಂಡವಾದತನ್ನೈಶ್ವರ್ಯದಲ್ಲಿ, ಅಣಿಮಾದ್ಯಷ್ಟಗುಣಪ್ರಸಿದ್ಧಮಹದೈಶ್ವಯಂ-ಅಣಿಮಾ-ಅಣಿಮೆ, ಆದಿ-ಮೊದಲಾದ, ಅಷ್ಟಗುಣ-ಎಂಟುಗುಣಗಳಿಂ. ಪ್ರಸಿದ್ಧ-ಪ್ರಖ್ಯಾತವಾದ, ಮಹದೈಶ್ವರಂ-ದೊಡ್ಡಿತ್ತಾದ ಐಶ್ವರ್ಯವು, ತೃಣಸಾಧಾರಣಂ-ಹುಲ್ಲಿಗೆಸಮ, ಸ್ವಾಭೀಷ್ಟಸಂಸಿದ್ಧಿಯೊಳ್-ತನ್ನಭಿಮತದಸಂಸಿದ್ಧಿಯಲ್ಲಿ, ಇಂದ್ರಜಾಲಕೃತಕಂ ಇಂದ್ರಜಾಲದಹಾಗೆಕಪಟಮಾದ, ಮಣಿಮಂತ್ರೌಷಧಸಿದ್ಧಿಗಳ್-ಮಣಿ-ರಕ್ಷಾಮಣಿಯು, ಮಂತ್ರ-ಕುಟಿಲಮಂತ್ರಗಳು, ಔಷಧ-ನಾರುಬೇರುಗಳು, ಸಿದ್ಧಿ-ವಾದವಶ್ಯಸ್ತಂಭಮೊದಲಾದಸಿದ್ಧಿಯು, ಗಿದ್ದಿಗಳ್-ನಗೆಗೆಡೆಯಾದ, ಅವೆಲ್ಲಂ-ಅವುತಾವೆಲ್ಲವೂ, ಭ್ರಾಂತಿ-ಭ್ರಮೆ, ಮಿಥ್ಯಾಮಯಂ—ಪುಸಿಯೇತಾನು, ಕ್ಷಣಿಕಂತಾಂ—ಒಂದುಕ್ಷಣಕ್ಕೆತಾನುಕೆಟ್ಟು ಪೋಪುದು-ಎನಿಸಿರ್ಪ—ಹೀಂಗಿವೆಲ್ಲಮಂತೃಣೀಕರಿಸಿರ್ಪ—ಭಕ್ತಿಪದಂ—ಶಿವಭಕ್ತಿಮಾರ್ಗವು, ಇನ್ನೇನೋ ಇನ್ನೆಂತಪ್ಪುದೊ ! ತಿಳಿಯಲಶಕ್ಯವೆಂಬುದರ್ಥ. ||೯೯||

ಟಿಪ್ಪಣಿ—ಭಕ್ತಿಕಾಂಡದ ಸಂಪತ್ತಿನಲ್ಲಿ ಅಣಿಮಾದ್ಯಷ್ಟೈಶ್ವರ್ಯಗಳೆಲ್ಲವೂ ಹುಲ್ಲಿಗೆ... ರುವುವು. ಆ ಭಕ್ತಿಸಿದ್ಧಿಯಲ್ಲಿ ಇಂದ್ರಜಾಲದಂತೆ ಕಪಟವಾಗಿರುವ ಮಣಿಮದ್ದು ಮಂತ್ರ ತಂತ್ರ... ಗಳೆಲ್ಲಾ ಪರಿಹಾಸಾಸ್ಪದವೂ ಭ್ರಾಂತಿಮಯವೂ ಅನೃತವೂ ಅಶಾಶ್ವತವೂ ಆಗಿರುವುವು. ... ಯೋಗವು ಪೂರ್ವೋಕ್ತಫಲಾತಿಶಯಗಳನ್ನೆಲ್ಲಾ ಅಷ್ಟು ಹುಲ್ಲಿಗೆಣೆಮಾಡಿಸುವುದರಿಂದ ಅದರ... ತ್ವವನ್ನಷ್ಟೆಂದು ಹೇಳಬಹುದು !

ನಾನಾಭಾವವಿಕಲ್ಪಕಲ್ಪಿತಸರಾಗದ್ವೇಷವಿಜ್ಞಾನಕ |
ರ್ಮಾನುಷ್ಠಾನವಿಧಾನಲೋಕರಜನಾಡಂಭೋಕ್ತಿಕಾಭಕ್ತಿಸಂ ||
ಧಾನಾಚಾರನಿರಾಸಕೃತ್ಪ್ರಬಲಸಮ್ಯಗ್ಭಕ್ತಿಯೋಗಕ್ರಿಯಾ |
ಜ್ಞಾನಧ್ಯಾನಪರೈಕನಿಷ್ಠ ಶತಕಂ ಪೂರ್ಣಂ ಶಿವಾವಲ್ಲಭಾ ||೧...

ಟೀಕೆ—ನಾನಾ......ಶತಕಂ-ನಾನಾ-ಅನೇಕವಾದ, ಭಾವ-ಭಿನ್ನಭಾ... ಗಳಲ್ಲಿಯ, ವಿಕಲ್ಪ-ಅದೋ ಇದೋ ಎಂಬ ಸಂದೇಹದಿಂದ, ಕಲ್ಪಿತ-ಕಲ್ಪಿಸಲ್ಪಟ್ಟ ಸರಾಗದ್ವೇಷ-ರಾಗದ್ವೇಷಂಗಳೊಡನೆಕೂಡಿದ, ವಿಜ್ಞಾನಕರ್ಮ-ಕುತ್ಸಿತವಾದ... ನಕರ್ಮಂಗಳ, ಅನುಷ್ಠಾನ-ಆಚಾರದ, ವಿಧಾನ-ಮಾಡುವಲ್ಲಿಯ, ಲೋಕರಂಜನ... ಜನರಂಜನದಿಂದಾದ, ಡಂಭ-ಡಾಂಭಿಕವಾದ, ಉಕ್ತಿ-ವಚನಂಗಳನುಳ್ಳ, ಕಾಭಕ್ತಿ... ಕಪಟಭಕ್ತಿಗಳ (ಕಾಭಕ್ತಿಯೆಂಬಲ್ಲಿ—ಕೋಃಕಾಹಲಿಯೆಂಬಸೂತ್ರದಿಂ ಕುವೆಂಬ... ಕ್ಕೆ ಕಾಎಂಬಾದೇಶವಾಗಿ, ಕುತ್ಸಿತಾ + ಭಕ್ತಿಃಎಂದಾಯಿತು.) ಸಂಧಾನ-ಸಂಧಾನ... ದಿಂದಾದ, ಆಚಾರ-ದುರಾಚಾರಂಗಳ, ನಿರಾಸಕೃತ್-ತಿರಸ್ಕಾರಮಾಡುತ್ತಿ... ಪ್ರಬಲ-ಮಹಾಸಾಮರ್ಥ್ಯವನುಳ್ಳ, ಸಮ್ಯಕ್-ಚೆನ್ನಾದ, ಭಕ್ತಿಯೋಗ-ಶಿವ... ಯೋಗದಲ್ಲಿಯ, ಕ್ರಿಯಾಜ್ಞಾನ-ಸತ್ಕ್ರಿಯಾಜ್ಞಾನಂಗಳ, ಧ್ಯಾನ-ಧ್ಯಾನ... ಪರ-ತಾತ್ಪರ್ಯವನುಳ್ಳ, ಏಕನಿಷ್ಠ-ಮುಖ್ಯವಾದನಿಷ್ಠೆಯನುಳ್ಳ, ಶತಕಂ-ನೂರು... ಪದ್ಯಗಳುಳ್ಳ ಪ್ರಬಂಧವು, ಭೋಶಿವಾವಲ್ಲಭಾ-ಎಲೈ ಪಾರ್ವತೀರಮಣನೆ, ಪೂರ್ಣ... ಸಂಪೂರ್ಣವಾದುದು. ||೧೦...

ಟಿಪ್ಪಣಿ—ಎಲೈ ಪಾರ್ವತೀಪತಿಯೆ ! ಅನೇಕತರದ ಅಭಿಪ್ರಾಯಗಳಿಂದಲೂ ಸಂಶಯ... ದಲೂ ರಾಗದ್ವೇಷಾದಿಗಳಿಂದಲೂ ಕೂಡಿದ ನೀಚವಾದ ಕರ್ಮಜ್ಞಾನ ಕಾಂಡಗಳಸಂಬಂಧ... ಜನರಂಜಕವಾದ ಡಾಂಭಿಕಾಚಾರ ಕಪಟಭಕ್ತಿಗಳನ್ನು ತಿರಸ್ಕಾರಮಾಡುವ ಮಹಾಸಾಮರ್ಥ್ಯ... ಸತ್ಕ್ರಿಯಾಜ್ಞಾನಧ್ಯಾನೋಪೇತವಾದ-ಶಿವಭಕ್ತಿಯೋಗದ ಪ್ರಶಂಸೆಯನ್ನು ಮಾಡುವ ಶಿವಾ... ಶತಕವು ಇಲ್ಲಿಗೆ ಪೂರ್ಣವಾಯಿತು. ||೧...

ಅವತಾರಿಕೆ—ಇನ್ನು ಆಚಾರ್ಯಂ ಪ್ರಬಂಧಾಂತ್ಯದಲ್ಲಿ, ಸ್ವವಾಗ್ವೈಭವಮಂ ಪ್ರಕ... ತ್ತಿರ್ದಪಂ—

ಇದು ಸಾಕ್ಷಾಚ್ಛಿವಯೋಗಷಟ್ಸ್ಥಲಪರಬ್ರಹ್ಮಾಂಗಲಿಂಗೈಕ್ಯಸೌ |
ಖ್ಯದ ಸದ್ಭಕ್ತಿಪರಾನುಭೂತಿಪರಮಜ್ಞಾನಕ್ರಿಯಾಚಾರಸಂ ||
ಪದಸೌಭಾಗ್ಯಸಮಗ್ರಸದ್ಗುರುಪದಪ್ರತ್ಯಕ್ಷಪ್ರಸಾದಾಕ್ಷರಾ |
ಸ್ಪದ ವಾಕ್ಛ್ರೀಮುಖಮಾಯಿದೇವವಿಭುಸಂಪ್ರೋಕ್ತಂ ಶಿವಾವಲ್ಲಭಾ||೧೦೧||

ಟೀಕೆ—ಇದು-ಈಶತಕವೆಂಬುದು, ಸಾಕ್ಷಾತ್......ಪ್ರೋಕ್ತಂ-ಸಾಕ್ಷಾತ್-ಪ್ರತ್ಯಕ್ಷವಾದ, ಶಿವಯೋಗ-ಶಿವಸಾಮರಸ್ಯಬೋಧಕವಾದ, ಷಟ್ಸ್ಥಲ-ಷಟ್ಸ್ಥಲವೆಂಬ, ಪರಬ್ರಹ್ಮ-ಪರಬ್ರಹ್ಮದಲ್ಲಿಯ, ಅಂಗಲಿಂಗೈಕ್ಯ-ಅಂಗಲಿಂಗಸಂಬಂಧದ, ಸೌಖ್ಯದ-ಪರಿಣಾಮವಂಕೊಡುವ, ಸದ್ಭಕ್ತಿ-ಅಕಳಂಕವಾದಭಕ್ತಿಯಲ್ಲಿಯ, ಪರಾನುಭೂತಿ-ಉತ್ಕೃಷ್ಟಾನುಭವದಲ್ಲಿಯ, ಪರಮ-ನಿರಧಿಕವಾದ, ಜ್ಞಾನಕ್ರಿಯಾಚಾರ-ಜ್ಞಾನಕ್ರಿಯಾಚರಣೆಗಳಿಗೆ, ಸಂಪದ-ಬಳ್ಳಿತ್ತಾದಸ್ಥಾನವಾದ, ಸೌಭಾಗ್ಯ-ಮಹಾಮಹಿಮೆಯಿಂ, ಸಮಗ್ರ-ಸಂಪೂರ್ಣವಾದ, ಸದ್ಗುರುಪದ-ಶ್ರೀಗುರುಚರಣಂಗಳ, ಪ್ರತ್ಯಕ್ಷಪ್ರಸಾದ-ಜ್ಞಾನಪ್ರಸಾದಸ್ವರೂಪವಾದ, ಅಕ್ಷರ-ವರ್ಣಂಗಳಿಗೆ, ಆಸ್ಪದ-ಸ್ಥಳವಾದ, ವಾಕ್ಛ್ರೀ-ವಾಗೈಶ್ವರ್ಯವು, ಮುಖ-ವದನದಲ್ಲುಳ್ಳ, ಮಾಯಿದೇವವಿಭು-ಮಾಯಿದೇವಪ್ರಭುವಿನಿಂ, ಸಂಪ್ರೋಕ್ತಂ-ಪೇಳಲ್ಪಟ್ಟುದು. ||೧೦೧||

ಟಿಪ್ಪಣಿ—ಶಿವೈಕ್ಯಪ್ರತಿಪಾದಕವಾದ ಷಟ್ಸ್ಥಲ ವಿದ್ಯಾಸಾಧನದಿಂದ ಲಬ್ಧವಾಗುವ ಲಿಂಗಾಂಗಸಂಯೋಗಸೌಖ್ಯವನ್ನು ಕೊಡುವ ಉತ್ತಮಭಕ್ತಿಗೂ ಉತ್ಕೃಷ್ಟವಾದ ಅನುಭವವುಳ್ಳ ಜ್ಞಾನಕ್ರಿಯಾಚಾರಗಳಿಗೂ ನೆಲೆವುನೆಯಾದವನೂ, ಮಹಾಮಹಿಮೆಯಿಂದ ತುಂಬಿದ ಶ್ರೀಗುರುಶ್ರೇಷ್ಠನಿಂದ ಲಬ್ಧವಾದ ಜ್ಞಾನಾನುಗ್ರಹರೂಪವಾದ ವಿದ್ಯಾಸಂಪತ್ತಿಗೆ ಆಶ್ರಯವಾದ ಮುಖಮಂಡಲವುಳ್ಳವನೂ ಆದ ಮಾಯಿದೇವಪ್ರಭುವಿನಿಂದ ಈ ಶತಕವು ಹೇಳಲ್ಪಟ್ಟಿತು. ||೧೦೧||

ಅವತಾರಿಕೆ—ಸೋಮನೆಂಬ ಶಬ್ದವು ಪ್ರಣವದ ಸ್ವರೂಪೆಂದು ಪೇಳುತ್ತಿರ್ದಪಂ :—

ಓಮಿತ್ಯಕ್ಷರಮಾತೃಕಾತ್ರಯದ ತದ್ವಾಕ್ಯಸ್ಥಮಾತ್ರಾತ್ರಯಂ |
ನಾಮಂ ಶ್ರೀಮದುಮಾ ಎನಲ್ಪರತರಂ ದೀರ್ಘಂಮಕಾರಂ ದ್ವಿತೀ ||
ಯಾಮಾಸಪ್ರಥಮಾ ಉಕಾರಮುಭಯಂ ಗೂಡಿರ್ದ್ದಮಾ ಸಾರ್ಥಕಂ |
ಸೋಮಂ ಮತ್ಪ್ರಭುವೈಪುರೀಶ ನೆನ ಲಾಂ ಧನ್ಯಂ ಶಿವಾವಲ್ಲಭಾ ||೧೦೨||

ಟೀಕೆ—ಓಮಿತ್ಯಕ್ಷರಮಾತೃಕಾತ್ರಯದ-ಓಮಿತಿ-ಓಂ ಎಂಬ, ಅಕ್ಷರಮಾತೃಕಾ-ಮಾತೃಕಾಕ್ಷರಂಗಳ, ತ್ರಯದ-ಮೂರರ, ತದ್ವಾಕ್ಯಸ್ಥ-ಆಓಂ ಎಂಬ ವಾಕ್ಯದಲ್ಲಿರ್ಪ, ಮಾತ್ರಾತ್ರಯಂ-ಅಕಾರ ಉಕಾರ ಮಕಾರಗಳು ಮೂರು, ನಾಮಂ-ಪ್ರಾತಿಪದಿಕವು, ಶ್ರೀಮದುಮಾ ಎನಲ್-ಶ್ರೀಮತ್-ಒಪ್ಪುತ್ತಿರ್ಪ, ಉಮಾ ಎನಲ್-ಉಮಾ ಎಂದೆನಲಾಗಿ, ಪರತರಂ-ಅಕ್ಷರಾಣಾಮಕಾರೋಸ್ಮಿ ಎಂಬುದರಿಂ

ಪರತರವೆಂದೊಡೆ ಅಕಾರವು, ದೀರ್ಘಂ-ಆ ಅಕಾರವು ದೀರ್ಘವುಳ್ಳದಾ
ಮಕಾರಂ-ಮಕಾರದೊಡನೆ ಕೂಡಲಾಗಿ, ದ್ವಿತೀಯಾ-ಎರಡನೆಯದಾದ, ಮ
ಮಾ ಎಂಬಕ್ಷರವಾದುದು, ಉಕಾರಂ-ಉಕಾರವು, ಉಭಯಂಗೂಡಿದ್ದು-"
ಎಂಬುದೂ " ಮಾ " ಎಂಬುದೂ ಕೂಡಿದ್ದು, ಉಮಾ-" ಉಮಾ "
ದಾದುದು, ಅದು, ಸಪ್ರಥಮಾ-ಸಕಾರವೇ ಮೊದಲುಳ್ಳದಾಗಿ, ಸೋಮ
ಸೋಮನೆಂದು, ಸಾರ್ಥಕಂ-ಅನ್ವರ್ಥನಾಮವಾದುದು, ಮತ್ಪ್ರಭು-ಎನ್ನೊ
ನಾದ, ಐಪುರೀಶನೆನಲ್-ಜ್ಞಾನವೆಂಬ ಪಟ್ಟಣಕ್ಕಧೀಶ್ವರನೆನಲಾಗಿ, ಆಂ-ನಾ
ಧನ್ಯಂ-ಕೃತಾರ್ಥನು, (ಈಯರ್ಥದಲ್ಲಿ-" ಯಸ್ಯಾಮಾತ್ರಾತ್ರಯಂನಾಮ
ಪ್ರಣವಾತ್ಮಕಂ | ಬಭೌಹ್ರಸ್ವದ್ವಯಂದೀರ್ಘಂದ್ವಿಮಾತ್ರತ್ವಾದುಮೈವಸಾ
ಎಂದುಂಟು) ||೧೦೨||

ಟಿಪ್ಪಣಿ— " ಓಂ " ಎಂಬ ಪ್ರಣವದಲ್ಲಿ ಅ + ಉ + ಮ ಎಂಬ ಮಾತೃಕಾಕ್ಷರ
ಮೂರಿರುವುವು. ಅವುಗಳಲ್ಲಿ ಆದಿಯ ಅಕಾರವು ಅಂತ್ಯದ ಮಕಾರದೊಡನೆ ಕೂಡಿ, ಮ + ಅ =
ಮಾ; ಎಂದಾಯಿತು. ಆ ಮಾಕಾರವು ಉಕಾರದ ಜತೆಯಲ್ಲಿ ಸೇರಿ, ಉ + ಮಾ = ಉಮಾ
ಎಂದಾಯಿತು. ಇಂಥ ಪ್ರಣವಸ್ವರೂಪಿಣಿಯಾದ ಉಮೆಯೊಡನೆ ಕೂಡಿದವನೆಂಬರ್ಥವನ್ನು ಕೊಡ
" ಸ " ಕಾರವು ಸೇರಲಾಗಿ, ಸ + ಉಮಾ = " ಸೋಮ " ನೆಂಬ ಸಾರ್ಥಕನಾಮವು ಸಿದ್ಧ
ಯಿತು. ಅಂಥ ಸೋಮನನ್ನು ಜ್ಞಾನನಗರಿಗೆ ಅಧೀಶ್ವರನಾದ ನನ್ನೊಡೆಯನು ಎಂದು ಸ್ತು
ಲಾಗಿ ನಾನು ಕೃತಾರ್ಥನಾದೆನು. ||೧೦೨||

ಅವತಾರಿಕೆ—ಆಚಾರ್ಯನು ಈ ಶತಕವನೋದಿದವರ್ಗೆಯುಂ ಕೇಳಿದವರ್ಗೆಯುಂ ಫಲವ
ಪೇಳುತಿರ್ದಪಂ:—

ಇದನಾರೋದಿದವರ್ಗ್ಗೆ ಕೇಳ್ದವರಿ ಗುದ್ಯದ್ಭಕ್ತಿಯೋಗಕ್ರಿಯಾ |
ಸ್ಪದಸಮ್ಯಕ್ಪರಮಪ್ರಸನ್ನ ಪರಿಪೂರ್ಣೈಕಾಗ್ರನಿಷ್ಠಾನುಭೂ ||
ತಿದಸಚ್ಚಿತ್ಸುಖರೂಪನಿಷ್ಕಳಮಹಾಲಿಂಗೈಕ್ಯನಿರ್ವಾಣಸಂ |
ಪದನಿತ್ಯತ್ವಮ ನೀವು ದಯ್ಯ ಕೃಪೆಯಿಂ ನೀನೇ ಶಿವಾವಲ್ಲಭಾ ||೧೦೩||

ಟೀಕೆ—ಇದಂ-ಈ ಜ್ಞಾನಪ್ರತಿಪಾದಕವಾದ ಶತಕವನ್ನು, ಆರ್-ಆರಾ
ದೊಡೆ, ಓದಿದವರ್ಗ್ಗೆ-ಪಠಿಸಿದವರ್ಗೆಯೂ, ಕೇಳ್ದವರಿಗೆ-ಕೇಳಿದವರ್ಗೆಯೂ, ಉ
ದ್ಯತ್ ... ನಿತ್ಯತ್ವಮಂ-ಉದ್ಯತ್-ಪ್ರಕಾಶಿಸುತ್ತಿರ್ಪ, ಭಕ್ತಿಯೋಗ-ಭಕ್ತಿಸಂಬಂಧ
ದಲ್ಲಿಯ, ಕ್ರಿಯಾ-ಸತ್ಕ್ರಿಯೆಗೆ, ಆಸ್ಪದ-ಸ್ಥಾನವಾದ, ಸಮ್ಯಕ್-ಲೇಸಾದ
ಪರಮ ಉತ್ಕೃಷ್ಟವಾದ, ಪ್ರಸನ್ನ-ನಿರ್ಮಲವಾದ, ಪರಿಪೂರ್ಣ-ಅಖಂಡಿತವಾದ
ಏಕಾಗ್ರ-ಚಿತ್ತೈಕಾಗ್ರತೆಯಲ್ಲಿಯ, ನಿಷ್ಠಾ-ವಿಶ್ವಾಸದಿಂದಲಾದ, ಅನುಭೂತಿ
ಜ್ಞಾನವನ್ನು, ದ-ಕೊಡುತ್ತಿರ್ಪ, ಸಚ್ಚಿತ್ಸುಖರೂಪ-ಸತ್ಯಜ್ಞಾನಾನಂದರೂಪವಾದ

ನಿಷ್ಕಳ-ಕಳಾತೀತವಾದ, ಮಹಾಲಿಂಗೈಕ್ಯ-ಮಹಾಲಿಂಗಸಾಮರಸ್ಯವೆಂಬ, ನಿರ್ವಾಣ-ಮೋಕ್ಷಕ್ಕೆ, ಸಂಪದ-ಸ್ಥಾನವಾದ, ನಿತ್ಯತ್ವಮಂ-ನಿತ್ಯತ್ವವನ್ನು, ಭೋಶಿವಾವಲ್ಲಭಾ-ಎಲೈ ಉಮಾರಮಣನೆ, ನೀನೆ-ನೀನುತಾನೇ, ಕೃಪೆಯಿಂ-ಕಾರುಣ್ಯದಿಂದೆ, ಈವುದಯ್ಯ-ಕೊಡುವುದಯ್ಯ ||೧೦೩||

ಟಿಪ್ಪಣಿ—ಎಲೈ ಪಾರ್ವತೀಪತಿಯೆ, ಈ ಜ್ಞಾನಪ್ರತಿಪಾದಕ ಶಿವಾವಲ್ಲಭಶತಕವನ್ನು ಓದುವವರಿಗೆ ಕೇಳುವವರಿಗೆಲ್ಲಾ ಭಕ್ತಿಯೋಗ ಸಂಬಂಧವಾದ ಆಚರಣೆಗೆ ಆಶ್ರಯವಾಗಿಯೂ, ಉತ್ಕೃಷ್ಟವಾದ ಚಿತ್ತೈಕಾಗ್ರತೆಯುಳ್ಳ ನಿಷ್ಠೆಯಿಂದ ಲಭ್ಯವಾಗುವ ಶಿವಜ್ಞಾನವನ್ನು ಕೊಡುವುದಾಗಿಯೂ, ಸತ್ಯಜ್ಞಾನಾನಂದ ಸ್ವರೂಪವಾಗಿಯೂ ಇರುವ ಮಹಾಲಿಂಗದಲ್ಲಿಯ ಸಾಮರಸ್ಯವೆಂಬ ಮೋಕ್ಷದ ನಿತ್ಯಪದವಿಯನ್ನು ದಯೆಯಿಂದನುಗ್ರಹಿಸು. ||೧೦೩||

## ಗದ್ಯ.

ಇದು ಸಮಸ್ತ ಶಿವಯೋಗಿಜನಮನೋನಿಲಯ ಶ್ರೀಮನ್ನಿರಂಜನ-ಲಿಂಗ ಚರಣಸರಸೀರುಹಸೌರಭಾಸಕ್ತ ಮತ್ತ ಮಧುಕರಾಯಮಾಣ ಷಟ್ಸ್ಥಲ ಸಿದ್ಧಾಂತ ಸಂಯೋಗಸನ್ಮಾರ್ಗ ಸಿದ್ಧಾಂತಸ್ಥಾಪನಾಚಾರ್ಯ ಪರಮಸುಜ್ಞಾನಸತ್ಕ್ರಿಯಾಯುಕ್ತ ಭಕ್ತಿಭರಿತಾಂತರಂಗ ಪ್ರಣವಪೂರ್ವಕ ಪಂಚಾಕ್ಷರೀ ಮಂತ್ರೋಚ್ಚಾರಿತ ಮಂಜುಳಭಾಷಾವಿಲಾಸನಪ್ಪ ತೋಂಟದಸಿದ್ಧಲಿಂಗದೇಶಿಕನಿಂ ವಿರಚಿತಮಪ್ಪ ಶ್ರೀಮದ್ವೀರಶೈವಾಚಾರ ಸಾರೋದ್ಧಾರಭಕ್ತಿಜ್ಞಾನ ವೈರಾಗ್ಯಪ್ರತಿಪಾದಕ ಶತಕತ್ರಯ ಮಹಾವ್ಯಾಖ್ಯಾನದೊಳ್ ಜ್ಞಾನಪ್ರತಿಪಾದಕ ಶಿವಾವಲ್ಲಭಶತಕಂ ಸಂಪೂರ್ಣಂ.

ಎಂಬಲ್ಲಿಗೆ ಜ್ಞಾನಪ್ರಶಂಸಾಪರವಾದ ಶಿವಾವಲ್ಲಭಶತಕದ ಟಿಪ್ಪಣವು ಸಂಪೂರ್ಣಮಾದುದು.



ಶ್ರೀಃ.

# ಮಹದ್ವೈಪುರೀಶ್ವರಶತಕಂ.

ಶ್ರೀಮದಪಾರಸಾರ ಕರುಣಾಮೃತಸಾಗರ ಭಕ್ತಲೋಕಚಿಂ |
ತಾಮಳನೂತ್ನರತ್ನ ದಿವಿಜೇಂದ್ರಮುನೀಂದ್ರಗಣೇಂದ್ರದಿವ್ಯತೇ ||
ಜೋಮಯಮೌಳಿಮಂಡಿತಪದಾಂಬುಜ ಸರ್ವಗುಣಾಭಿರಾಮನಿ |
ಸ್ಸೀಮ ಧೃತೇಂದುನೇಮ ಪರಮಪ್ರಭುವೇ ಮಹದ್ವೈಪುರೀಶ್ವರಾ

## ಟೀಕೆ.

ಕಂ || ತನುಕರಣೇಂದ್ರಿಯಸುಖಗಳ |
ನನವರತಂ ಬಿಡದ ಮನದ ಭ್ರಾಂತಿಯ ನಡಗಿಪ ||
ಘನವೈರಾಗ್ಯಮನೊಲವಿಂ |
ದೆನಗಿತ್ತೋವುದೆಲೆ ಗುರುನಿರಂಜನಲಿಂಗಾ ||

ಇಂತು ಆಚಾರ್ಯಂ ಶತಕದ್ವಯದಲ್ಲಿ ಭಕ್ತಿಜ್ಞಾನಂಗಳಂ ಪ್ರತಿಪಾದಿಸಿ, ಆ ಭಕ್ತಿಜ್ಞಾನ... ವೈರಾಗ್ಯವಿಲ್ಲದೆ ದೊರಕೊಳ್ಳವಾಗಿ, ಮೂರನೆಯ ಶತಕದಲ್ಲಿ ವೈರಾಗ್ಯಮಂ ಪೇಳಲುದ್ಯುಕ್ತ... ಆದಿಯಲ್ಲಿ ಹತ್ತು ಪದ್ಯಗಳಿಂ ಸ್ವೇಷ್ಟದೇವತೆಯಾದ ಐವುರದ ಸೋಮೇಶ್ವರನಂ ಸ್ತುತಿಸುತ್ತಿದ...

ಟೀಕೆ—ಶ್ರೀಮದಪಾರಸಾರ ಕರುಣಾಮೃತಸಾಗರ-ಶ್ರೀಮತ್-ಒಪ್ಪ... ರ್ಪ, ಅಪಾರ-ಕಡೆಯಿಲ್ಲದಿರ್ಪ-ಸಾರ-ಶ್ರೇಷ್ಠವಾದ, ಕರುಣ-ಕಾರುಣ್ಯಕ್ಕೆ, ಅ... ತಸಾಗರ-ಕ್ಷೀರಸಮುದ್ರವಾದಾತನೆ, ಭಕ್ತಲೋಕಚಿಂತಾಮಳನೂತ್ನ, ರತ್ನ-... ಲೋಕ-ಭಕ್ತಜನರುಗಳ, ಚಿಂತಾ-ಬಯಕೆಗೆ, ಅಮಳ-ನಿರ್ಮಳವಾದ, ನೂತ್ನ... ಹೊಸದಾದ, ರತ್ನ-ರತ್ನವಾದಾತನೆ, ದಿವಿಜೇಂದ್ರ......ಪದಾಂಬುಜ-ದಿವಿಜೇಂ... ದ್ರ-ದೇವೇಂದ್ರನ, ಮುನೀಂದ್ರ-ಮುನೀಶ್ವರರುಗಳ, ಗಣೇಂದ್ರ-ಗಣೇಶ್ವರರು... ದಿವ್ಯ-ಒಪ್ಪುತ್ತಿರ್ಪ, ತೇಜೋಮಯ-ಕಾಂತಿಮಯವಾದ, ಮೌಳಿ-ಕಿರೀಟಂಗ... ಮಂಡಿತ-ಅಲಂಕರಿಸಲ್ಪಟ್ಟ, ಪದಾಂಬುಜ-ಪಾದಾರವಿಂದಗಳುಳ್ಳಾತನೆ, ಸರ್ವಗು... ಣಾಭಿರಾಮ-ಅನಂತಕಲ್ಯಾಣಗುಣಗಳಿಂದೊಪ್ಪುವಾತನೆ, ನಿಸ್ಸೀಮ-ಕಡೆಯಿಲ್ಲ... ತನೆ, ಧೃತೇಂದುನೇಮ-ಧರಿಸಲ್ಪಟ್ಟ ಚಂದ್ರಖಂಡವುಳ್ಳಾತನೆ, ("ನೇಮಾರ್ಧ... ಖಂಡಾನಿ" ಎಂದು ವೈಜಯಂತಿ) ಪರಮಪ್ರಭುವೇ-ಉತ್ಕೃಷ್ಟವಾದ ಸ್ವತಂತ್ರ... ಕರ್ತೃವಾದಂಥ, ಮಹದ್ವೈಪುರೀಶ್ವರಾ-ಮಹತ್-ಪೂಜ್ಯವಾದ, ಐವುರೀಶ್ವರಾ-...

ನವೆಂಬ ಪಟ್ಟಣಕ್ಕೆ ಅಧೀಶ್ವರನಾದ ಎಲೈ ಸೋಮೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು. (ಇಲ್ಲಿ " ಜಯ " ವೆಂಬ ಕ್ರಿಯಾಧ್ಯಾಹಾರಮಂ ಹತ್ತು ಪದ್ಯಂಗಳಿಗೂ ಮಾಡಿಕೊಳ್ಳುವುದು). ||೧||

ಟಿಪ್ಪಣಿ—ಕರುಣಾಮೃತರಸದಿಂದ ತುಂಬಿದ ಮಹಾಸಮುದ್ರನೂ, ಭಕ್ತಜನರ ಇಷ್ಟಾರ್ಥವನ್ನು ಕೊಡುವ ಚಿಂತಾಮಣಿಯೂ, ದೇವೇಂದ್ರನಿಂದಲೂ, ಋಷಿಶ್ರೇಷ್ಠರಿಂದಲೂ, ಗಣವರ್ಯರಿಂದಲೂ, ನಮಸ್ಕರಿಸಲ್ಪಟ್ಟವನೂ ಸರ್ವಜ್ಞತ್ವಾದ್ಯನಂತ ಕಲ್ಯಾಣಗುಣಗಳಿಂದ ರಂಜಿಸುವವನೂ, ಅಪಾರನೂ, ಚಂದ್ರಾರ್ಧಶೇಖರನೂ, ಉತ್ಕೃಷ್ಟನಾದ ನಿಗ್ರಹಾನುಗ್ರಹ ಸಮರ್ಥನೂ ಆದ ಐಪುರದ ಸೋಮೇಶ್ವರನೆ ! ಸರ್ವೋತ್ಕೃಷ್ಟನಾಗು. ||೧||

ವರವೃಷವೀರಭದ್ರಮುಖಸತ್ಪ್ರಮಥಪ್ರಕರಪ್ರಕೀರ್ಣಚಾ |
ರುರಜತಶೈಲಮೂಲಮಣಿಕೀಲವಿಶಾಲ ವಿಚಿತ್ರಮಂಟಪ ||
ಸ್ಥಿರತರತುಂಗಮಂಗಳಮೃಗಾಧಿಪಪೀಠಸುಖೋಪವಿಷ್ಟ ದೇ |
ವರಮಣದೇವದೇವ ಪರಮಪ್ರಭುವೇ ಮಹದೈಪುರೀಶ್ವರಾ ||೨||

ಟೀಕೆ—ವರವೃಷ......ಸುಖೋಪವಿಷ್ಟ-ವರ-ಶ್ರೇಷ್ಠನಾದ, ವೃಷಭ—ವೃಷಭೇಶ್ವರನು, ವೀರಭದ್ರ-ವೀರಭದ್ರನು, ಮುಖ-ಮೊದಲಾದ, ಸತ್ಪ್ರಮಥ-ಮಹಾಪ್ರಮಥಗಣಂಗಳ, ಪ್ರಕರ—ಸಮೂಹಂಗಳಿಂ, ಪ್ರಕೀರ್ಣ—ಹರವಲ್ಪಟ್ಟ, ಚಾರು-ರಮ್ಯವಾದ, ರಜತಶೈಲ-ಬೆಳ್ಳಿಯಬೆಟ್ಟದ, ಮೂಲ-ಮೊದಲಿನಲ್ಲಿಯ, ಮಣಿ-ರತ್ನಂಗಳಲ್ಲಿಯ, ದೀಪ್ತಿ-ಕಾಂತಿಗಳಿಂ, ವಿಶಾಲ-ವಿಸ್ತಾರವಾದ, ವಿಚಿತ್ರ-ಆಶ್ಚರ್ಯಕರಮಾದ, ಮಂಟಪ-ಮಂಟಪದಲ್ಲಿ, ಸ್ಥಿರತರ-ಅತ್ಯಂತಸ್ಥಿರವಾದ, ತುಂಗ-ಉನ್ನತವಾದ, ಮಂಗಳ-ಪರಮಮಂಗಳಸ್ವರೂಪವಾದ, ಮೃಗಾಧಿಪಪೀಠ-ಸಿಂಹಾಸನದಲ್ಲಿ, ಸುಖ-ಸುಖಮಪ್ಪಂತೆ, ಉಪವಿಷ್ಟ-ಕುಳ್ಳಿರ್ಪಾತನೆ, ದೇವರಮಣ-ಬ್ರಹ್ಮವಿಷ್ಣ್ವಾದಿದೇವತಾವಲ್ಲಭನೆ, ದೇವದೇವ-ಇಂದ್ರಿಯಂಗಳಿಗೊಡೆಯನಾದ, (" ಧಿಷೋಹಿದೇವಸ್ಸಹ ಸಸ್ಸಹೀಯಾರ್ " ಎಂದು ತೈತ್ತಿರೀಯೋಪನಿಷತ್ತಿನಲ್ಲಿ " ದೇವ " ಎಂದೊಡೆ ಇಂದ್ರಿಯಕ್ಕೆ ಪೆಸರೆಂದು ತದ್ವ್ಯಾಖ್ಯಾನದಲ್ಲಿ ಉಂಟು). ಎಲೆ ಸೋಮೇಶ್ವರ, ಜಯ-ಸರ್ವೋತ್ಕೃಷ್ಟನಾಗು. ||೨||

ಟಿಪ್ಪಣಿ—ವೃಷಭೇಶ ವೀರಭದ್ರೇಶ ಮೊದಲಾದ ಪ್ರಮಥಶ್ರೇಷ್ಠರುಗಳಿಂದ ತುಂಬಿಕೊಂಡಿರುವ ಕೈಲಾಸದ ತಾಳುಬೆಟ್ಟದಲ್ಲಿ ರತ್ನಕಾಂತಿಯಿಂದ ಝುಗಝುಗಿಸುತ್ತಿರುವ ವಿಸ್ತಾರವಾದ ಮಂಟಪದಲ್ಲಿ ಶಾಶ್ವತವಾಗಿರುವ ಮಂಗಳಸ್ವರೂಪವಾದ ಉನ್ನತ ಸಿಹ್ಮಪೀಠದಲ್ಲಿ ಸುಖವಾಗಿ ಕುಳಿತಿರುವವನೆ ! ದೇವಾಧಿದೇವನೆ ! ಸರ್ವೇಂದ್ರಿಯಾಧಿಪತಿಯೆ ! ಜ್ಞಾನಪುರಾಧೀಶನಾದ ಎಲೈ ಸೋಮೇಶ್ವರನೆ ! ಸರ್ವೋತ್ಕೃಷ್ಟನಾಗು. ||೨||

ಭೂಮಿಧರಾತಪತ್ರಶತಪತ್ರಸುಪುತ್ರಸರೋಜಮಿತ್ರಸು |
ತ್ರಾಮ ಸುಧಾಮಯೂಖ ದಿವಿಜಾತ ದಿತಿಪ್ರಭವೋರಗಾಪ್ಸರ ||
ಸ್ತೋಮ ನಿಬರ್ಹಣಪ್ರಳಯವಹ್ನಿಸಮಪ್ರಭಕಾಳಕೂಟಕೂ |
ಟಾಮಳರಾಮಕಂಠ ಪರಮಪ್ರಭುವೇ ಮಹದೈಪುರೀಶ್ವರಾ ||

ಟೀಕೆ—ಭೂಮಿಧರಾತಪತ್ರ...ಕಂಠ, ಭೂಮಿಧರಾತಪತ್ರ-ಗೋವರ್ಧನಗಿರಿಯೇ ಕೊಡೆಯಾಗುಳ್ಳ ವಿಷ್ಣುವು, ಶತಪತ್ರಸುಪುತ್ರ—ತಾವರೆಯಮಗನಾದ ಬ್ರಹ್ಮನು, ಸರೋಜಮಿತ್ರ-ಕಮಲಂಗಳಿಗೆ ಸಖನಾದ ಸೂರ್ಯನು, ಸುತ್ರಾಮ-ದೇವೇಂದ್ರನು, ಸುಧಾಮಯೂಖ-ಅಮೃತಕಿರಣನಾದ ಚಂದ್ರನು, ದಿವಿಜಾತ-ದೇವರ್ಕಳು, ದಿತಿಪ್ರಭವ-ರಾಕ್ಷಸರು, ಉರಗ-ನಾಗರ್ಕಳು, ಅಪ್ಸರಃ-ಅಪ್ಸರೆಯರು, ಸ್ತೋಮ-ಇವರ ಸಮೂಹಂಗಳನ್ನು, ನಿಬರ್ಹಣ—ಕೊಲ್ಲುತ್ತಿರ್ದ, ಪ್ರಳಯವಹ್ನಿಸಮ-ಪ್ರಳಯಕಾಲದಗ್ನಿಗೆ ಸರಿಯಾದ, ಪ್ರಭ-ಕಾಂತಿಯನುಳ್ಳ, ಕಾಳಕೂಟ-ಕಾಳಕೂಟವಿಷದ, ಕೂಟ-ಸಂಬಂಧದಿಂದ, ಅಮಳ-ನಿರ್ಮಳವಾಗಿ, ರಾಮ-ಒಪ್ಪುತ್ತಿರ್ಪ, ಕಂಠ-ಕೊರಳನುಳ್ಳಾತನಾದ ಎಲೆಸೋಮೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು.

ಟಿಪ್ಪಣಿ—ವಿಷ್ಣು, ಬ್ರಹ್ಮ, ಸೂರ್ಯ, ಚಂದ್ರ, ದೇವತೆಗಳು, ರಾಕ್ಷಸರು, ನಾಗರು, ಅಪ್ಸರರು ಇವರೆಲ್ಲರ ಸಮೂಹವನ್ನೂ ನಾಶಗೊಳಿಸುತ್ತಿದ್ದ ಪ್ರಳಯಕಾಲದ ಅಗ್ನಿಗೆ ಸಮನಾದ ಕಾಂತಿಯುಳ್ಳ ಮಹಾವಿಷದಿಂದ ಕೂಡಿ ಮನೋಹರವಾಗಿ ಒಪ್ಪುತ್ತಿರುವ ನಿರ್ಮಲವಾದ ಕಂಠವುಳ್ಳ ಪರಮೇಶ್ವರನೆ ! ಸರ್ವೋತ್ಕೃಷ್ಟನಾಗು.

ದಾರುವನಾಶ್ರಯಾಶ್ರಿತತಪೋಜಪಹೋಮಯಮಾದಿಸತ್ಕ್ರಿಯಾ |
ಚಾರವಿಯುಕ್ತಮಾರ್ಗನಿಯತದ್ವಿಜರಾಜವಧೂಜನಸ್ಮರಾ ||
ಪಾರವಿಕಾರತಾಪಕೃತಿಕಾರಣಭಿಕ್ಷುಕವೇಷಕೃತ್ರಿಮಾ |
ಕಾರಕಳಾವಿಳಾಸ ಪರಮಪ್ರಭುವೇ ಮಹದೈಪುರೀಶ್ವರಾ ||

ಟೀಕೆ—ದಾರುವನಾ......ವಿಳಾಸ—ದಾರುವನಾಶ್ರಯ—ದಾರುವನದ ಆಶ್ರಯದಲ್ಲಿ, ಆಶ್ರಿತ—ನೆಲಸಿದಂಥ, ತಪಃ-ಚಾಂದ್ರಾಯಣಾದಿತಪವು, ಜಪ-ಮಂತ್ರಜಪವು, ಹೋಮ-ಹವನವು, ಯಮಾದಿ-ಯಮನಿಯಮಾದಿ ಅಷ್ಟಾಂಗಯೋಗಂಗಳ, ಸತ್ಕ್ರಿಯಾ-ಒಳ್ಳಿತಾದ ಕ್ರಿಯೆಗಳ, ಆಚಾರ-ಆಚಾರದೊಡನೆ, ವಿಯುಕ್ತ-ವಿಶೇಷವಾಗಿ ಕೂಡಲ್ಪಟ್ಟ, ಮಾರ್ಗ—ಧರ್ಮಮಾರ್ಗದಲ್ಲಿ, ನಿಯತ-ನಿರತರಾದ, ದ್ವಿಜರಾಜ-ಬ್ರಾಹ್ಮಣೋತ್ತಮರುಗಳ, ವಧೂಜನ-ಸ್ತ್ರೀಜನಂಗಳ, ಸ್ಮರಾಪಾರವಿಕಾರ—ಮನ್ಮಥನಕಡೆಯಿಲ್ಲದ ವಿಕಾರಂಗಳಿಂದಾದ, ತಾಪ-ಸಂತಾಪವನ್ನು, ಕೃತಿ

ಮಾಡುವುದಕ್ಕೆ, ಕಾರಣ-ನಿಮಿತ್ತವಾದ, ಭಿಕ್ಷುಕವೇಷ-ತಾಪಸವೇಷದ, ಕೃತ್ರಿಮ-ಕಪಟವಾದ, ಆಕಾರ-ಮೂರ್ತಿಯು, ಕಳಾ-ಸೌಂದರ್ಯದ, ವಿಲಾಸ-ಲೀಲೆಯುಳ್ಳಾತನಾದ ಎಲೆಸೋಮೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು. ||೪||

ಟಿಪ್ಪಣಿ—ದಾರುಕವನದಲ್ಲಿ ವಾಸಮಾಡಿಕೊಂಡು ಜಪ, ತಪ, ಹೋಮ ಯೋಗಸಂಬಂಧವಾದ ಸತ್ಕ್ರಿಯೆಯ ಆಚರಣೆಯಲ್ಲಿ ತತ್ಪರರಾದ ಬ್ರಾಹ್ಮಣಶ್ರೇಷ್ಠರ ಪತ್ನಿಯರಲ್ಲಿ ಅಪಾರವಾದ ಮನ್ಮಥವಿಕಾರತಾಪವನ್ನುಂಟುಮಾಡುವುದಕ್ಕೆ ಕಾರಣವಾದ ಕಪಟಭಿಕ್ಷುಕವೇಷದ ವಿಲಾಸವುಳ್ಳ ಎಲೈ ಸೋಮೇಶ್ವರನೆ ! ಸರ್ವೋತ್ಕೃಷ್ಟನಾಗು. ||೪||

ಅಹರಹರಂಬುಜೋದ್ಗಮಸಹಸ್ರಕೃತಾರ್ಚನತತ್ಪರತ್ವನಿ |
ರ್ವಹಣನಿಜಾವಧಾನನಿಯಮಸ್ಖಲನೋತ್ಕಟಭಕ್ತಿಭಾವಸ ||
ನ್ನಿಹಿತಗುಣಾರ್ಪಿತಾತ್ಮನಯನಾಚ್ಯುತದಿವ್ಯಸುದರ್ಶನ ಪ್ರದ |
ಪ್ರಹಸಿತವಕ್ತ್ರಪದ್ಮ ಪರಮಪ್ರಭುವೇ ಮಹದೈಪುರೀಶ್ವರಾ ||೫||

ಟೀಕೆ—ಅಹರಹ······ಪ್ರದ-ಅಹರಹಃ—ಪ್ರತಿದಿವಸದಲ್ಲಿಯೂ, ಅಂಬುಜೋದ್ಗಮ-ತಾವರೆಯ ಹೂವುಗಳು, ಸಹಸ್ರ-ಸಾವಿರದಿಂ, ಕೃತ-ಮಾಡಲ್ಪಟ್ಟ, ಅರ್ಚನ-ಪೂಜೆಯಲ್ಲಿಯ, ತತ್ಪರತ್ವ-ತಾತ್ಪರ್ಯವುಳ್ಳತನದ, ನಿರ್ವಹಣ-ನಿರ್ವಹಿಸುವುದರಲ್ಲಿ, ನಿಜ-ತನ್ನ, ಅವಧಾನ-ಎಚ್ಚರದಲ್ಲಿನ, ನಿಯಮ-ನೇಮದ, ಸ್ಖಲನ-ಜಾರುವುದರಿಂ, ಉತ್ಕಟ-ಅಧಿಕವಾದ, ಭಕ್ತಿಭಾವ-ಭಕ್ತಿಭಾವದಿಂ, ಸನ್ನಿಹಿತ-ಸಮೀಪದಲ್ಲಿರ್ದ, ಗುಣ-ಧೈರ್ಯಗುಣದಿಂ, ಅರ್ಪಿತ-ಸಮರ್ಪಿಸಲ್ಪಟ್ಟ, ಆತ್ಮ-ತನ್ನ, ನಯನ-ನೇತ್ರವನುಳ್ಳ, ಅಚ್ಯುತ-ವಿಷ್ಣುವಿಗೆ, ದಿವ್ಯ-ತೇಜೋಮಯವಾದ, ಸುದರ್ಶನ-ಚಕ್ರವನ್ನು, ಪ್ರದ-ಕೊಟ್ಟಾತನೆ, ಪ್ರಹಸಿತವಕ್ತ್ರಪದ್ಮ-ಪ್ರಹಸಿತ-ನಗುವ, ವಕ್ತ್ರಪದ್ಮ-ಮುಖಾರವಿಂದವನುಳ್ಳ, ಎಲೆಸೋಮೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು||

ಟಿಪ್ಪಣಿ—ಪ್ರತಿದಿನದಲ್ಲೂ ಒಂದುಸಾವಿರ ತಾವರೆಹೂವುಗಳಿಂದ ತಪ್ಪದೆ ಶಿವನನ್ನು ಪೂಜಿಸುವ ವ್ರತದಲ್ಲಿ ತುಂಬಾ ಎಚ್ಚರಿಕೆಯಿಂದಿರುತಿದ್ದು, ಒಂದುದಿನ ಅದರಲ್ಲಿ ಒಂದು ಕಮಲವು ಕಡಿಮೆಯಾದುದರಿಂದ ವ್ರತಕ್ಕೆ ಭಂಗ ಬರುವಂತಾಗಲು, ತನ್ನ ದೃಢಭಕ್ತಿಯ ಕೆಚ್ಚಿನಿಂದ ಹುಟ್ಟಿದ ಧೈರ್ಯದಿಂದ ತನ್ನ ಕಣ್ಣನ್ನೇ ಕಳೆದು ತಾವರೆ ಹೂವಿಗೆ ಪ್ರತಿಯಾಗಿ ಶಿವನಿಗೆ ಸಮರ್ಪಿಸಿದ ವಿಷ್ಣುವಿಗೆ ಚಕ್ರಾಯುಧದಾನವನ್ನು ಮಾಡಿದ ನಗೆಮೊಗದಿಂದ ಕೂಡಿದ ಎಲೈ ಸೋಮೇಶ್ವರನೆ ! ಸರ್ವೋತ್ಕೃಷ್ಟನಾಗು. ||೫||

ಸರ್ವಗ ಸರ್ವತತ್ವವರ ಸರ್ವಗುಣಾಧಿಕ ಸರ್ವದೇವರಾ |
ಟ್ಸರ್ವನಮಸ್ಯ ಸರ್ವಸುಖಭೋಗವಿಧಾಯಕ ಸರ್ವಭೂತಕೃ ||
ತ್ಸರ್ವವಿದಾದ್ಯ ಸರ್ವಜಗದಾತ್ಮಕ ಸರ್ವಕಳಾಪ್ರಪಂಚಭೃ |
ತ್ಸರ್ವಪವಿತ್ರಗಾತ್ರ ಪರಮಪ್ರಭುವೇ ಮಹದೈಪುರೀಶ್ವರಾ ||೬||

ಟೀ|| ಸರ್ವಗ-ಸಮಸ್ತರಲ್ಲಿಯೂ ಪರಿಪೂರ್ಣನಾದಾತನೆ, ಸರ್ವತತ್ತ್ವ... ಸಮಸ್ತತತ್ವಂಗಳಿಗೂ ಶ್ರೇಷ್ಠನಾದಾತನೆ, ಸರ್ವಗುಣಾಧಿಕ-ಸಮಸ್ತಗುಣಂಗಳಿ... ಧಿಕನಾದಾತನೆ, ಸರ್ವದೇವರಾಟ್-ಸಮಸ್ತದೇವತೆಗಳಿಗೂ ರಾಜನಾದಾತನೆ, ... ನಮಸ್ಯ-ಸರ್ವರಿಂದಲೂ ನಮಸ್ಕರಿಸಿಕೊಳ್ಳುವಾತನೆ,ಸರ್ವಸುಖಭೋಗವಿಧಾಯ... ಸರ್ವ-ಸಮಸ್ತವಾದ, ಸುಖಭೋಗ-ಸುಖಭೋಗಂಗಳನ್ನು, ವಿಧಾಯಕ-ಮಾ... ವಾತನೆ, ಸರ್ವಭೂತಕೃತ್-ಸಮಸ್ತಭೂತಂಗಳ ಸೃಜಿಸುವಾತನೆ, ಸರ್ವವಿತ್-... ವನ್ನೂ ಬಲ್ಲಾತನೆ, ಆದ್ಯ-ಎಲ್ಲರಿಗೆಯೂ ಮೊದಲಿಗನಾದಾತನೆ, ಸರ್ವಜಗ... ತ್ಮಕ-ಸರ್ವ-ಸಮಸ್ತವಾದ, ಜಗತ್-ಜಗತ್ತಿಗೆ, ಆತ್ಮಕ-ಅಂತರ್ಯಾಮಿಯಾದಾತ... ಸರ್ವಕಳಾಪ್ರಪಂಚಭೃತ್-ಸರ್ವ-ಸಮಸ್ತವಾದ, ಕಳಾ-ವಿದ್ಯೆಯ, ಪ್ರಪಂ... ಪ್ರಪಂಚವನ್ನು, ಭೃತ್-ತಾಳ್ದಾತನೆ, ಸರ್ವಪವಿತ್ರಗಾತ್ರ-ಸರ್ವ-ಎಲ್ಲಾ ... ಲ್ಲಿಯೂ, ಪವಿತ್ರ-ಪಾವನವಾದಗಾತ್ರ-ಶರೀರವನುಳ್ಳ ಎಲೆ ಮಹೇಶ್ವರನೆ, ಜ... ಸರ್ವೋತ್ಕೃಷ್ಟನಾಗು.

ಟಿಪ್ಪಟಿ—ಸರ್ವವ್ಯಾಪಿಯೂ, ಸರ್ವತತ್ವಾಗ್ರೇಸರನೂ, ಷಡ್ಗುಣೈಶ್ವರ್ಯವಿಶಿಷ್ಟನೂ, ಸ... ವಾಧೀಶನೂ, ಸರ್ವವಂದ್ಯನೂ, ಸರ್ವಭೋಗಿಯೂ, ಸರ್ವಭೂತಸೃಷ್ಟಿಕರ್ತನೂ ಸರ್ವಜ್ಞನೂ, ಸರ್ವ... ಮೊದಲಿಗನೂ, ಸಕಲ ಜಗತ್ಸ್ವರೂಪನೂ, ಸರ್ವವಿದ್ಯಾಶ್ರಯನೂ, ಅಷ್ಟಮೂರ್ತಿಯಾದುದಂ... ಪ್ರಪಂಚವೂ ತನ್ನ ದೇಹವೇ ಆಗುಳ್ಳವನೂ ಆದ ಎಲೈಮಹೇಶ್ವರನೆ ! ಸರ್ವೋತ್ಕೃಷ್ಟನಾಗು.

ಬಿಂದುಮಯ ತ್ರಿಶಕ್ತಿಮಯ ನಾದಮಯಾ ಸದಸನ್ಮಯಾಕ್ಷರಾ |
ಸ್ಪಂದಮಯ ಪ್ರಪಂಚಮಯ ಭೂತಮಯ ಪ್ರಣವಸ್ಫುರತ್ಪ್ರಭಾ ||
ವೃಂದಮಯಾತ್ಮತತ್ವಮಯ ಚಿನ್ಮಯ ಜೀವಕಳಾಸುಧಾಮಯಾ |
ನಂದಮಯಾದಿದೇವ ಪರಮಪ್ರಭುವೇ ಮಹದೈಪುರೀಶ್ವರಾ

ಬಿಂದುಮಯ-ಚಿದ್ಬಿಂದುಸ್ವರೂಪನೆ, ತ್ರಿಶಕ್ತಿಮಯ-ಇಚ್ಛಾಜ್ಞಾನಕ್ರಿ... ಶಕ್ತಿಸ್ವರೂಪನೆ, ನಾದಮಯಾ-ಚಿನ್ನಾದಸ್ವರೂಪನೆ, ಸದಸನ್ಮಯ-ಕಾರಣಕಾ... ರೂಪನೆ, ಅಕ್ಷರಾಸ್ಪಂದಮಯ-ಅಕಾರಾದ್ಯಕ್ಷರಗಳಲ್ಲಿಪೊರ್ದುಗೆಯುಳ್ಳಾ... ಪ್ರಪಂಚಮಯ-ಜಗದ್ರೂಪನಾದಾತನೆ, ಭೂತಮಯ-ಪೃಥಿವ್ಯಾದಿಮಹಾಭೂ... ರೂಪವಾದಾತನೆ, ಪ್ರಣವಸ್ಫುರತ್ಪ್ರಭಾವೃಂದಮಯ-ಪ್ರಣವ-ಓಂಕಾರದಲ್ಲಿ ... ರತ್-ಪ್ರಕಾಶಿಸುತ್ತಿರ್ಪ, ಪ್ರಭಾ-ಕಾಂತಿಯ, ವೃಂದಮಯ-ಸಮೂಹವಾದಾ... ಆತ್ಮತತ್ವಮಯ-ಲಿಂಗಾಂಗಸ್ವರೂಪನೆ, (ಜೀವಾತ್ಮಸ್ವರೂಪನೆಂದಾದೊಡಂ ... ಚಿನ್ಮಯ-ಜ್ಞಾನಸ್ವರೂಪನೆ, ಜೀವಕಳಾಸುಧಾಮಯ-ಪ್ರಾಣಕಳೆಯೆಂಬ ...

ತಸ್ವರೂಪನೆ, ಆನಂದಮಯ-ಪರಮಾನಂದಸ್ವರೂಪನೆ, ಆದಿದೇವ-ಎಲ್ಲವಕ್ಕೆಯೂ ಮೊದಲಿಗನಾದ ಎಲೆ ಮಹೇಶ್ವರನೇ, ಜಯ-ಸರ್ವೋತ್ಕೃಷ್ಟನಾಗು. ||೭||

ಟಿಪ್ಪಣಿ—ಬಿಂದುಸ್ವರೂಪನೆ, ಇಚ್ಛಾದಿ ಶಕ್ತಿಸ್ವರೂಪನೆ, ನಾದಸ್ವರೂಪನೆ, ಕಾರಣಕಾರ್ಯ ಸ್ವರೂಪನೆ, ಅಕಾರಾದ್ಯಕ್ಷರ ಸ್ವರೂಪನೆ, ಜಗತ್ಸ್ವರೂಪನೆ, ಪಂಚಭೂತಾತ್ಮಕನೆ। ಓಂಕಾರದಲ್ಲಿ ಹೊಳೆಯುವ ಕಾಂತಿಯ ಸ್ವರೂಪನೆ, ಲಿಂಗಾಂಗಸ್ವರೂಪನೆ, ಜ್ಞಾನಸ್ವರೂಪನೆ, ಜೀವಕಳಾಮೃತ ಸ್ವರೂಪನೆ, ಆನಂದರೂಪನೆ, ಎಲ್ಲ ದೇವತೆಗಳಿಗೂ ಮೊದಲಿಗನಾದ ಪರಮೇಶ್ವರನೆ, ಸರ್ವೋತ್ಕೃಷ್ಟನಾಗು. ||೭||

ನಿತ್ಯ ನಿರೀಹ ನಿರ್ಮಳ ನಿರಂಜನ ನಿಷ್ಕಳ ನಿಷ್ಪ್ರಪಂಚ ನಿ |
ಷ್ಪ್ರತ್ಯಯ ನಿರ್ವಿಕಲ್ಪ ನಿರುಪಾಧಿಕ ನಿಶ್ಚಲ ನಿರ್ವಿಕಾರನಿ ||
ಷ್ಕೃತ್ಯನಿರೂಪ್ಯ ನಿರ್ಗುಣ ನಿರಾವರಣಾಭಿಧ ನಿರ್ವಿಶೇಷ ನಿ |
ಸ್ತುತ್ಯ ನಿರಸ್ತನಿಂದ್ಯ ಪರಮಪ್ರಭುವೇ ಮಹದ್ವೈಪುರೀಶ್ವರಾ ||೮||

ಟೀಕೆ—ನಿತ್ಯ-ಕೇಡಿಲ್ಲದಾತನೆ, ನಿರೀಹ-ನಿಸ್ಪೃಹನಾದಾತನೆ, ನಿರ್ಮಳ-ಕಳಂಕಿಲ್ಲದಾತನೆ, ನಿರಂಜನ-ಪಾಪರಹಿತನೆ, ನಿಷ್ಕಳ-ಕಳಾರಹಿತನೆ, ನಿಷ್ಪ್ರಪಂಚ-ಪ್ರಪಂಚರಹಿತನೆ, ನಿಷ್ಪ್ರತ್ಯಯ-ಕಾರಣರಹಿತನೆ, ನಿರ್ವಿಕಲ್ಪ-ಸಂಕಲ್ಪರಹಿತನೆ, ನಿರುಪಾಧಿಕ-ಕಾರ್ಯೋಪಾಧಿಯಿಲ್ಲದಾತನೆ, ನಿಶ್ಚಲ-ಚಲನೆಯಿಲ್ಲದಾತನೆ, ನಿರ್ವಿಕಾರ-ಭೂತವಿಕಾರವಿಲ್ಲದಾತನೆ, ನಿಷ್ಕೃತ್ಯ-ಪ್ರಯೋಜನವಿಲ್ಲದಾತನೆ, ನಿರೂಪ್ಯ-ವೇದಾಂತಂಗಳಿಂ ಪ್ರತಿಪಾದಿಸಲ್ತಕ್ಕಾತನೆ, ನಿರ್ಗುಣ-ಗುಣತ್ರಯಾತೀತನೆ, ನಿರಾವರಣಾಭಿಧ-ಮಾಯಾವರಣವಿಲ್ಲದಾತನೆಂಬ ಪೆಸರನುಳ್ಳಾತನೆ, ನಿರ್ವಿಶೇಷ-ಬೇರೊಂದು ವಿಶೇಷವಿಲ್ಲದಾತನೆ, ನಿಸ್ತುತ್ಯ-ಸ್ತುತಿಸಲಳವಲ್ಲದಾತನೆ, ನಿರಸ್ತನಿಂದ್ಯ-ತಿರಸ್ಕರಿಸಲ್ಪಟ್ಟ ಮಲತ್ರಯುವನುಳ್ಳಾತನಾದ ಎಲೆ ಮಹೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು. ||೮||

ಟಿಪ್ಪಣಿ—ಶಾಶ್ವತನಾದ-ಇಚ್ಛೆಯಿಲ್ಲದ-ಕಳಂಕಿಲ್ಲದ-ಪಾಪವಿಲ್ಲದ--ಕಲೆಯಿಲ್ಲದ--ಪ್ರಪಂಚವಿಲ್ಲದ-ತನಗೊಂದು ಕಾರಣವಿಲ್ಲದ-ಸಂಕಲ್ಪವಿಕಲ್ಪಗಳಿಲ್ಲದ-ಉಪಾಧಿಯಿಲ್ಲದ-ಚಲನೆಯಿಲ್ಲದ-ಭೂತವಿಕಾರವಿಲ್ಲದ--ವೇದವೇದಾಂತ ಪ್ರತಿಪಾದ್ಯನಾದ--ಗುಣಾತೀತನಾದ--ಮಾಯಾವರಣವಿಲ್ಲದ--ತನ್ನಲ್ಲಿ ಬೇರೊಂದುವಿಶೇಷವಿಲ್ಲದ-ಸ್ತುತಿಸಲಶಕ್ಯನಾದ-ಮಲತ್ರಯದೂರನಾದ-ಪರಮೇಶ್ವರನೆ। ಸರ್ವೋತ್ಕೃಷ್ಟನಾಗು. ||೮||

ಅಕ್ಷರ ಸಾಕ್ಷರಾತ್ಮಕ ನಿರಕ್ಷರರೂಪ ಕಳಾಕ್ಷರಾಂಗ ಮೂ |
ಲಾಕ್ಷರಜೀವಮಂತ್ರ ನಿಗಮಾಕ್ಷರಸಂಸ್ತವನೀಯ ಸರ್ವಮಂ ||
ತ್ರಾಕ್ಷರದಕ್ಷ ನಿಷ್ಕಳಶಿವಾಕ್ಷರಲಕ್ಷಣಲಕ್ಷಿತಾದಿಪಂ |
ಚಾಕ್ಷರನಾಮಧಾಮ ಪರಮಪ್ರಭುವೇ ಮಹದ್ವೈಪುರೀಶ್ವರಾ ||೯||

ಟೀಕೆ—ಅಕ್ಷರ-ಕೇಡಿಲ್ಲದಾತನೆ, ಸಾಕ್ಷರಾತ್ಮಕ-ವರ್ಣಸ್ವರೂಪನಾದಾತ
ನಿರಕ್ಷರರೂಪ—ನಿಶ್ಯಬ್ದಸ್ವರೂಪನೆ, ಕಳಾಕ್ಷರಾಂಗ—ಷೋಡಶಕಳಾಕ್ಷರಂಗಳೆ
ದೇಹವಾಗುಳ್ಳಾತನೇ, ಮೂಲಾಕ್ಷರಜೀವಮಂತ್ರ—ಮೂಲಾಕ್ಷರ—ಓಂಕಾರಕ್ಕೆ
ಜೀವಮಂತ್ರ-ಜೀವಮಂತ್ರಸ್ವರೂಪವಾದ ಹಕಾರವಾದಾತನೆ, ನಿಗಮಾಕ್ಷರ-ವೇದಾ
ಕ್ಷರಂಗಳಿಂದ, ಸಂಸ್ತವನೀಯ-ಸ್ತೋತ್ರವಮಾಡಲ್ತಕ್ಕಾತನೆ, ಸರ್ವ...ಧಾಮ
ಸರ್ವ-ಸಮಸ್ತವಾದ, ಮಂತ್ರ-ಸಪ್ತಕೋಟಿಮಹಾಮಂತ್ರಂಗಳಲ್ಲಿಯ, ಅಕ್ಷರ
ವರ್ಣಂಗಳೊಳು, ದಕ್ಷ-ಸಮರ್ಥವಾದ, ನಿಷ್ಕಳ-ಕಳಾತತ್ವಮಂಮೀರಿದ, ಶಿವಾ
ಕ್ಷರ-ಶಿವ ಎಂಬ ಅಕ್ಷರಂಗಳೆರಡರ, ಲಕ್ಷಣ-ಅಸಾಧಾರಣಧರ್ಮದಿಂ-ಲಕ್ಷಿತ-ಕಾ
ಲ್ಪಡುವ, ಆದಿ—ಮುಖ್ಯವಾದ, ಪಂಚಾಕ್ಷರನಾಮ—ಪಂಚಾಕ್ಷರವೆಂಬಪೆಸರು
ಧಾಮ-ಸ್ಥಾನವಾದ ಎಲೆ ಸೋಮೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು ||೯||

ಟಿಪ್ಪಣಿ—ಅಳಿವಿಲ್ಲದ-ಸರ್ವವರ್ಣಸ್ವರೂಪನಾದ--ನಿರ್ವಾಯರೂಪನಾದ--ಅಕಾರಾದಿ ವಿಸ
ರ್ಗಾಂತ ಷೋಡಶಕಲಾಕ್ಷರಗಳೇ ದೇಹವಾಗುಳ್ಳ-ಓಂಕಾರಕ್ಕೆ ಜೀವಾಕ್ಷರವಾದ ಹಕಾರಸ್ವರೂಪ
ನಾದ, ವೇದಮಂತ್ರಾಕ್ಷರಗಳಿಂದ ಹೊಗಳಲ್ಪಟ್ಟವನಾದ-ಸಪ್ತಕೋಟಿ ಮಹಾಮಂತ್ರಗಳೆಲ್ಲದ
ಲ್ಲಿಯೂ ಇರುವ ಅಕ್ಷರಗಳಲ್ಲೆಲ್ಲಾ ಶ್ರೇಷ್ಠವಾದ "ಶಿವ" ಎಂಬ ಎರಡು ಅಕ್ಷರಗಳ ಲಕ್ಷಣ
ದಿಂಕೂಡಿದ ಮುಖ್ಯವಾದ ಪಂಚಾಕ್ಷರೀ ಮಂತ್ರ (ವಾಚಕ) ಕ್ಕೆ ಆಶ್ರಯನಾದ ಎಲೈ ಪರಮೇಶ್ವ
ರನೇ, ಸರ್ವೋತ್ಕೃಷ್ಟನಾಗು. ||೯||

ಲಿಂಗ ಚಿದಾತ್ಮಲಿಂಗ ಗುರುಲಿಂಗ ಶಿವಾಹ್ವಯಲಿಂಗ ವಿಶ್ವಕೃ |
ಲ್ಲಿಂಗ ಸುಸೂಕ್ಷ್ಮಲಿಂಗ ಪರಲಿಂಗ ಪರಾಪರಲಿಂಗ ಸರ್ವವಿ ||
ಲ್ಲಿಂಗ ನಿಜಾಂಗಲಿಂಗ ಚರಲಿಂಗ ಚರಾಚರಲಿಂಗ ಭಕ್ತಹೃ |
ಲ್ಲಿಂಗ ವಿಶುದ್ಧಲಿಂಗ ಪರಮಪ್ರಭುವೇ ಮಹದೈಪುರೀಶ್ವರಾ ||೧೦||

ಟೀಕೆ—ಲಿಂಗ-ಲಯಗಮನಂಗಳಿಗಾಶ್ರಯವಾದ ಲಿಂಗವೆ, ಚಿದಾತ್ಮಲಿಂಗ-
ಜ್ಞಾನಸ್ವರೂಪವಾದ ಲಿಂಗವೆ, ಗುರುಲಿಂಗ-ಗುರುವೆಂಬಪೆಸರುಳ್ಳ ಲಿಂಗವೆ, ಶಿವಾ
ಹ್ವಯಲಿಂಗ-ಶಿವವೆಂಬಪೆಸರನುಳ್ಳ ಲಿಂಗವೆ, ವಿಶ್ವಕೃಲ್ಲಿಂಗ-ಸರ್ವಪ್ರಪಂಚವನ್ನು
ಸೃಜಿಸುವ ಲಿಂಗವೆ, ಸುಸೂಕ್ಷ್ಮಲಿಂಗ-ಇಂದ್ರಿಯಂಗಳಿಗೆ ಗೋಚರವಲ್ಲದ ಲಿಂಗವೆ,
ಪರಲಿಂಗ ಉತ್ಕೃಷ್ಟವಾದ ಲಿಂಗವೆ, ಪರಾಪರಲಿಂಗ-ಬ್ರಹ್ಮಾದಿಗಳಿಗಿಂದತ್ತಲಾದ
ಲಿಂಗವೇ, ಸರ್ವವಿಲ್ಲಿಂಗ-ಸರ್ವಜ್ಞಸ್ವರೂಪವಾದ ಲಿಂಗವೆ, ನಿಜಾಂಗಲಿಂಗ-ನಿಜ-
ಸಹಜವಾದ, ಅಂಗಲಿಂಗ-ಇಷ್ಟಲಿಂಗಸ್ವರೂಪವೆ, ಚರಲಿಂಗ-ಜಂಗಮಸ್ವರೂಪವಾದ
ಲಿಂಗವೆ, ಚರಾಚರಲಿಂಗ-ಜ್ಞಾನಕ್ರಿಯಾತ್ಮಕವಾದ ಲಿಂಗವೆ, ಭಕ್ತಹೃಲ್ಲಿಂಗ-ಭಕ್ತ
ರ್ಗಂತರಂಗವಾದ ಲಿಂಗವೆ, ವಿಶುದ್ಧಲಿಂಗ-ನಿರ್ಮಲಸ್ವರೂಪವಾದ ಲಿಂಗವೆ, ಭೋ
ಪರಮಪ್ರಭುವೇ-ಎಲೆ ಸೋಮೇಶ್ವರಾ, ಜಯ-ಸರ್ವೋತ್ಕೃಷ್ಟನಾಗು. ||೧೦||

ಟಿಪ್ಪಣಿ—ಜಗತ್ತಿನ ಲಯೋದಯಗಳಿಗೆ ಸ್ಥಾನವಾದ ಲಿಂಗಸ್ವರೂಪನೆ, ಗುರುಲಿಂಗಸ್ವರೂಪನೆ, ಗುರುಲಿಂಗ ಶಿವಲಿಂಗವೆಂಬ ನಾಮವುಳ್ಳವನೆ, ಜಗನ್ನಿರ್ಮಾಣಕಲಿಂಗವೆ, ಸ್ಥೂಲನೇತ್ರಕ್ಕೆ ಗೋಚರಿಸದ ಸೂಕ್ಷ್ಮಲಿಂಗವೆ, ಉತ್ಕೃಷ್ಟವಾದ ಲಿಂಗವೆ, ಬ್ರಹ್ಮ ವಿಷ್ಣ್ವಾದಿ ದೇವಶ್ರೇಷ್ಠರಿಗಿಂತಲೂ ಶ್ರೇಷ್ಠವಾದ ಸರ್ವಜ್ಞವಾದ ಲಿಂಗವೆ, ಅಂಗಲಿಂಗ, ರೂಪಗೊಂಡವನೆ, ಜಂಗಮಲಿಂಗವೆ, ಜ್ಞಾನಕ್ರಿಯಾತ್ಮಕಲಿಂಗವೆ, ಭಕ್ತರ ಹೃದಯದಲ್ಲಿ ಮೆರೆಯುವ ಲಿಂಗವೆ, ನಿರ್ಮಲರೂಪನಾದ ಪರಮೇಶ್ವರನೆ, ಸರ್ವೋತ್ಕೃಷ್ಟನಾಗು. ||೧೦||

ಅವತಾರಿಕೆ—ಇಂತು ಆಚಾರ್ಯಂ ತನ್ನ ಸ್ವೇಷ್ಟದೇವತಾಸ್ತೋತ್ರಮಂ ಮಾಡಿ ಗುರುನಮಸ್ಕಾರಮಂ ಮಾಡುತ್ತಿರ್ದಪಂ—

ಶ್ರೀಗುರವೇ ನಮ ಶ್ಶರಣಲೋಕಸುಖೈಕಕರಾಯ ಶಿಷ್ಯಹೃ |
ದ್ರೋಗಭಿಷಕ್ತಮಾಯ ಭವಕರ್ಮಸಮಿದ್ದಹನಾಗ್ನಯೇ ಶಿವೈ ||
ಕ್ಯಾಗಮಸಾರವೀರವಿಮಲಾಶ್ರಯಧರ್ಮಪದಪ್ರದಾಯ ತೇ |
ರಾಗವಿರಾಗದೂರ ಪರಮಪ್ರಭುವೇ ಮಹದ್ವೈಪುರೀಶ್ವರಾ ||೧೧||

ಟೀಕೆ—ಭೋಮಹದ್ವೈಪುರೀಶ್ವರಾ-ಎಲೈ ಮಹದ್ವೈಪುರೀಶ್ವರನೇ, ಶ್ರೀಗುರವೇ-ಶ್ರೀಗುರುರೂಪನಾದ, ತೇ-ನಿನಗೋಸ್ಕರ, ನಮಃ-ನಮಸ್ಕಾರವು, ಶರಣಲೋಕಸುಖೈಕಕರಾಯ-ಶರಣಲೋಕ-ಶರಣಜನರ್ಗೆ, ಸುಖೈಕ-ಪರಿಣಾಮವನೊಂದನೇ, ಕರಾಯ-ಮಾಡುತ್ತಿರ್ಪ,ತೇ-ನಿನಗೋಸ್ಕರ, ನಮಃ-ನಮಸ್ಕಾರವು, ಶಿಷ್ಯಹೃದ್ರೋಗಭಿಷಕ್ತಮಾಯ-ಶಿಷ್ಯ-ಶಿಷ್ಯನ, ಹೃತ್-ಹೃದಯದಲ್ಲಿಯ, ರೋಗ-ಸಂಸಾರವ್ಯಾಧಿಗೆ, ಭಿಷಕ್ತಮಾಯ-ಒಳ್ಳೆತ್ತಾದ ವೈದ್ಯನಾದ, ತೇ-ನಿನಗೆ, ನಮಃ-ನಮಸ್ಕಾರವು. ಈ ಅರ್ಥದಲ್ಲಿ "ಭಿಷಕ್ತಮಂತ್ವಾಂಭಿಷಜಾಂಶ್ರುಣೋಮಿ" ಎಂದು ಋಗ್ವೇದಮುಂಟು) ಭವಕರ್ಮಸಮಿದ್ದಹನಾಗ್ನಯೇ—ಭವಕರ್ಮ-ಸಂಸಾರವ್ಯಾಪಾರವೆಂಬ, ಸಮಿತ್-ಕಟ್ಟಿಗೆಗಳ, ದಹನ-ಸುಡುವಲ್ಲಿ, ಅಗ್ನಯೇ-ವಹ್ನಿಸ್ವರೂಪನಾದ, ತೇ-ನಿನಗೋಸ್ಕರ, ನಮಃ-ನಮಸ್ಕಾರವು, ಶಿವೈಕ್ಯಾಗಮಸಾರವೀರವಿಮಲಾಶ್ರಯಧರ್ಮಪದಪ್ರದಾಯ-ಶಿವೈಕ್ಯ-ಶಿವಲಿಂಗೈಕ್ಯವನು ಬೋಧಿಸುವ, ಆಗಮಸಾರ-ಆಗಮಂಗಳೊಳಗೆ ಶ್ರೇಷ್ಠವಾದ, ವೀರ-ವೀರಮಾಹೇಶ್ವರನ, ವಿಮಲ-ನಿರ್ಮಲವಾದ, ಆಶ್ರಯ-ನಿಲುಗಡೆಯಾದ, ಧರ್ಮ-ಆಚಾರದ, ಪದ-ಮಾರ್ಗವನು, ಪ್ರದಾಯ-ಕೊಡುವಂಥ, ತೇ-ನಿನಗೋಸ್ಕರ, ನಮಃ-ನಮಸ್ಕಾರವು, ರಾಗವಿರಾಗದೂರಪರಮಪ್ರಭುವೇ—ರಾಗವಿರಾಗದೂರ—ಕಾಮನಿಷ್ಕಾಮಂಗಳಿಗೆ ದೂರನಾದ, ಪರಮ-ಉತ್ಕೃಷ್ಟನಾದ, ಪ್ರಭುವೇ-ಎನ್ನೊಡೆಯನಾದ, ತೇ-ನಿನಗೋಸ್ಕರ, ನಮಃ-ನಮಸ್ಕಾರವು. ||೧೧||

ಟಿಪ್ಪಣಿ—ಇಚ್ಛಾಧ್ವೈರಾಗ್ಯಗಳಿಗೆ ದೂರನಾದ ಎಲೈ ಪರಮೇಶ್ವರನೆ, ಭಕ್ತಜನರಿಗೆ ಸು... ಯಕನೂ-ಶಿಷ್ಯರ ಹೃದಯದಲ್ಲಿರುವ ಭವರೋಗವನ್ನು ನಿವಾರಿಸುವಲ್ಲಿ ಉತ್ತಮವೈದ್ಯನೂ ಸಂಸಾ... ವ್ಯಾಪಾರವೆಂಬ ಕಟ್ಟಿಗೆಗಳನ್ನು ಸುಡುವ ಅಗ್ನಿಯೂ-ಲಿಂಗಾಂಗಸಾಮರಸ್ಯಬೋಧಕವಾದ ... ಗಮ ಶಾಸ್ತ್ರಂಗಳಲ್ಲಿ ಶ್ರೇಷ್ಠವಾದ ನಿರ್ಮಲ ವೀರಶೈವಧರ್ಮವನ್ನು ತೋರಿಸಿಕೊಡುವವನೂ... ಶ್ರೀಗುರುವಿನ ಸ್ವರೂಪನಾದ ನಿನಗೆ ನಮಸ್ಕಾರವು (" ಯಶ್ಶಿವಸ್ಸಗುರುಜ್ಞೇಯೋ ಯೋಗು... ಶಿವಸ್ಸ್ಮೃತಃ | ನತಯೋರಂತರಂಕುರ್ಯಾದಾಜ್ಞಾನಾವಾಪ್ತಮಹಾಮತಿಃ " ಎಂಬ ವಚನದಿಂ... ಆಚಾರ್ಯನು ಇಲ್ಲಿ ಗುರುವನ್ನು ಶಿವಾಭಿನ್ನನನ್ನಾಗಿ ಭಾವಿಸಿ ನಮಸ್ಕಾರಾತ್ಮಕ ಮಂಗಳವನ್ನಾ... ರುವನು.

ಗುರುಪದಸಿದ್ಧಮದ್ಗುರುವೆ ಸದ್ಗುರುತತ್ವವೆ ತತ್ವಸಾರಚಿ |
ದ್ಗುರುವೆ ಭವಪ್ರಪಂಚಗುಣದೋಷನಿವಾರಣವೈದ್ಯತಂತ್ರಕೃ ||
ದ್ಗುರುವೆ ಶರೀರದುಃಖಪುನರಾಗತದುರ್ಗತಿಕರ್ಮಕಾಂಡಭಿ |
ದ್ಗುರುವೆ ಗುರುತ್ರಿಣೇತ್ರಪರಮಪ್ರಭುವೇ ಮಹದೈಪುರೀಶ್ವರಾ ||೧...

ಟೀಕೆ—ಗುರುಪದಸಿದ್ಧಮದ್ಗುರುವೆ-ಗುರುಪದ-ಆಚಾರ್ಯಪಟ್ಟದಲ್ಲಿ, ಸಿದ್ಧ- ಪ್ರಸಿದ್ಧವಾದ, ಮದ್ಗುರುವೆ-ಎನ್ನಗುರುವೆ, ಸುದ್ಗುರುತತ್ವವೆ-ಸದ್ರೂಪವಾದ ಗು... ತತ್ವವೆ (" ನಾಸ್ತಿತತ್ವಂಗುರೋಃಪರಮೆಂದುಂಟಾಗಿ '' ತತ್ವಸಾರಚಿದ್ಗುರುವೆ- ತತ್ವ-ಮೂವತ್ತಾರುತತ್ವಂಗಳೊಳಗೆ, ಸಾರ-ಶ್ರೇಷ್ಠವಾದ, ಚಿದ್ಗುರುವೆ-ಜ್ಞಾನಸ್ವ... ರೂಪನಾದ ಗುರುವೆ, ಭವಪ್ರಪಂಚಗುಣದೋಷನಿವಾರಣವೈದ್ಯತಂತ್ರಕೃದ್ಗುರುವೆ- ಭವಪ್ರಪಂಚ-ಸಂಸಾರಪ್ರಪಂಚದ, ಗುಣದೋಷಂಗಳನ್ನು, ನಿವಾರಣ-ಓಡಿಸುವ... ವೈದ್ಯತಂತ್ರಕೃತ್-ವೈದ್ಯಸಿದ್ಧಾಂತಮಾಡುವಂಥ, ಗುರುವೆ-ಆಚಾರ್ಯನೆ, ಶ... ದುಃಖಪುನರಾಗತದುರ್ಗತಿಕರ್ಮಕಾಂಡಭಿದ್ಗುರುವೆ-ಶರೀರದುಃಖ—ದೇಹದುಃಖಂಗ... ಪುನರಾಗತ-ತಿರುಗಿಬರ್ಪಲ್ಲಿಯ, ದುರ್ಗತಿ-ನರಕಸ್ವರೂಪವಾದ, ಕರ್ಮಕಾಂಡ-ಕ... ಕಾಂಡವನು, ಭಿತ್-ಮೆಟ್ಟಿಸೀಳುತ್ತಿರ್ಪ, ಗುರುವೆ-ಆಚಾರ್ಯನೆ, ಗುರು-ಪೂಜ್ಯವಾ... ತ್ರಿಣೇತ್ರ-ಸೂರ್ಯಚಂದ್ರಾಗ್ನಿಲೋಚನವುಳ್ಳ, ಪರಮಪ್ರಭುವೇ-ಎಲೈ ಸೋಮೇ... ರನೆ, ಜಯ-ಸರ್ವೋತ್ಕೃಷ್ಟನಾಗು. ||೧...

ಟಿಪ್ಪಣಿ—ಆಚಾರ್ಯಪದವಿಯಲ್ಲಿ ಪ್ರಖ್ಯಾತನಾದ ನನ್ನ ಗುರುವೆ, ಸಕಲ ತತ್ವಾತೀತ... ಜ್ಞಾನಗುರುವೆ, ಜನನ ಮರಣಾತ್ಮಕ ಸಂಸಾರದ ಗುಣದೋಷಗಳನ್ನು ಹೋಗಲಾಡಿಸುವ ವೈದ್ಯಶಾ... ಸ್ತ್ರವನ್ನು ರಚಿಸಿದ ಗುರುವೆ, ಪುನರಪಿ ಜನನವೆಂಬ ದೇಹದುಃಖರೂಪವಾದ ದುರ್ಗತಿಯುಳ್ಳ ಕ... ಕಾಂಡವನ್ನು ಭೇದಿಸಿದ ಗುರುವೆ, ಮುಕ್ಕಣ್ಣುಗಳುಳ್ಳ ಪರಮೇಶ್ವರನ ಸ್ವರೂಪನಾದ ... ಗುರುವೆ ! ಸರ್ವೋತ್ಕೃಷ್ಟನಾಗು. ||೧...

ಪರುಸಮುಮಂ ಲಸದ್ಗುರುಪದಾಂಬುಜಮಂ ಸಮವೆಂದು ಕಲ್ಪಿಸ |
ಲ್ನರಕ ಮದೆಂತೆನಲ್ ಪರುಸಮುಂ ಪರುಷ... ಗಿಮ ||

ದ್ಗುರುಪದ ಮಾಗುರುತ್ವಮನೆ ಮಾಡುವ ಕಾರಣ ಮಾಂ ನಿರಂತರಂ |
ಗುರುಶರಣೆಂಬೆನಯ್ಯ ಪರಮಪ್ರಭುವೇ ಮಹದೈವುರೀಶ್ವರಾ ||

ಟೀಕೆ—ಪರುಸಮುಮಂ-ಸಿದ್ಧರಸವನ್ನೂ, ಲಸದ್ಗುರುಪದಾಂಬುಜಮಂ-ಲಸತ್-ಒಪ್ಪುತ್ತಿರುವ, ಗುರುಪದಾಂಬುಜಮಂ-ಗುರುಚರಣಾಂಬುಜವನ್ನೂ, ಸಮ ಮೆಂದು-ಸದೃಶವೆಂದು, ಕಲ್ಪಿಸಲು-ಸಂಕಲ್ಪಿಸಲಾಗಿ, ನರಕಂ-ದುರ್ಗತಿಯು, ಅದೆಂತೆನಲ್-ಅದು ಹೇಂಗೆನಲಾಗಿ, ಪರುಸಂ-ಸಿದ್ಧರಸವು, ಪರುಸಮಂ-ತನ್ನಂತಹಸಿದ್ಧರ ಸವನ್ನು, ನೆರೆ-ಚೆನ್ನಾಗಿ, ಮಾಡದಾಗಿ-ಮಾಡದಿರ್ದಕಾರಣವಾಗಿ, ಮದ್ಗುರುಪದಂ-ಎನ್ನ ಶ್ರೀಗುರುಪಾದವು, ಆಗುರುತ್ವಮನೆ-ಆಗುರುತನವನ್ನೇ, ಮಾಡುವಕಾರಣಂ-ಮಾಡುವನಿಮಿತ್ತವಾಗಿ, ಆಂ-ನಾನು, ನಿರಂತರಂ-ಯಾವಾಗಲೂ, ಗುರುಶರಣೆಂಬೆನಯ್ಯ-ಗುರುವನೇ ಮರೆಹುಗುವೆನು ||೧೩||

ಟಿಪ್ಪಣಿ—ಸಿದ್ಧರಸವನ್ನೂ, ಗುರುಪಾದಕಮಲವನ್ನೂ ಒಂದಕ್ಕೊಂದು ಸಮವೆಂದು ಹೇಳಿದರೆ ನರಕವಾಗದೆ ತಪ್ಪದು. ಏಕೆಂದರೆ—ಗುರುಪಾದ ಕಮಲಕ್ಕೆ ಸಿದ್ಧರಸವು ಸಮನಲ್ಲ. ಹೇಗೆಂದರೆ—ಸಿದ್ಧರಸವು ಲೋಹವನ್ನು ಸುವರ್ಣವನ್ನಾಗಿ ಮಾಡಬಲ್ಲುದಲ್ಲದೆ ತನ್ನಂತಹ ಸಿದ್ಧರಸವನ್ನಾಗಿ ಮತ್ತೊಂದನ್ನು ಮಾಡಲಾರದು. ಗುರುಪಾದವಾದರೊ ತನ್ನನುಗ್ರಹಕ್ಕೆ ಒಳಗಾದ ಇತರನನ್ನೂ ಗುರುವನ್ನಾಗಿಯೇ ಮಾಡುವುದು ಅದುಕಾರಣ, ನಾನು ಯಾವಾಗಲೂ ಶ್ರೀಗುರುವನ್ನೇ ಮರೆಹುಗುವೆನು. ||೧೩||

ಅವತಾರಿಕೆ—ಇಂತು ಆಚಾರ್ಯನು ಸಂಸಾರನಿರಾಸಪೂರ್ವಕವಾಗಿ ಜ್ಞಾನವಂ ಪ್ರಾರ್ಥಿಸುತ್ತಿರ್ದಪಂ.

ಅಭಿಮತಸಿದ್ಧಿದಾನಪರನೆಂದು ಕೃಪಾಮೃತಸಿಂಧು ವೆಂದು ಗ |
ರ್ಭಭವಜರಾಮೃತಿಪ್ರಭೃತಿದುರ್ಭಯಸಂಹರನೆಂದು ಚಿತ್ಕಳಾ ||
ವಿಭುಗುರುನಾಥ ನಿನ್ನ ನಿರದಿತ್ತ ನಿದೇಂ ದಯೆಗೆಯ್ಯಲೊಲ್ಲೆ ಪೇಳ್ |
ತ್ರಿಭುವನಮೂಲಲಿಂಗ ಪರಮಪ್ರಭುವೇ ಮಹದೈವುರೀಶ್ವರಾ ||೧೪||

ಟೀಕೆ—ಭೋತ್ರಿಭುವನಮೂಲಲಿಂಗ-ಎಲೆ ತನುತ್ರಯಂಗಳಿಗೆ ಕಾರಣವಾದ ಪರಮಾತ್ಮಲಿಂಗವೆ, ನಿನ್ನಂ-ನಿನ್ನನು, ಅಭಿಮತಸಿದ್ಧಿದಾನಪರನೆಂದು-ಅಭಿಮತ-ಇಷ್ಟಾರ್ಥಂಗಳ, ಸಿದ್ಧಿ-ಸಿದ್ಧಿಯು, ದಾನ-ಕೊಡುವಲ್ಲಿ, ಪರನೆಂದು-ತಾತ್ಪರ್ಯವುಳ್ಳವನೆಂದು, ಕೃಪಾಮೃತಸಿಂಧುವೆಂದು-ಕೃಪಾ-ಕಾರುಣ್ಯವೆಂಬ, ಅಮೃತ-ಸುಧೆಗೆ ಸಿಂಧುವೆಂದು-ಸಮುದ್ರನೆಂದು, ಗರ್ಭಭವಜರಾಮೃತಿಪ್ರಭೃತಿದುರ್ಭಯಸಂಹರನೆಂದು ಗರ್ಭಭವ-ಜನ್ಮವು, ಜರಾ-ಮುಪ್ಪು, ಮೃತಿ-ಮರಣವು, ಪ್ರಭೃತಿ-ಇವು ಮೊದಲಾದವರಿಂದಾದ, ದುರ್ಭಯ-ಮಹಾಭಯದ, ಸಂಹರನೆಂದು-ಪರಿಹರಿಸುವಾತನೆಂದು, ಚಿತ್ಕಳಾವಿಭುಗುರುನಾಥ-ಜ್ಞಾನಕಳೆಗೆಕರ್ತೃವಾದ ಶ್ರೀಗುರುಸ್ವಾಮಿಯು, ಇರದೆ

ಇತ್ತಂ–ಶೀಘ್ರವಾಗಿಕೊಟ್ಟನು. ಇದೇಂದಯೆಗೆಯ್ಯಲೊಲ್ಲೆ–ಇದೇನುಕಾರಣ ದ
ಗೆಯ್ಯಲೊಲ್ಲೆ ? ಪೇಳ್–ನಿರೂಪಿಸು.

ಟಿಪ್ಪಣಿ—ಸ್ಥೂಲಾದಿ ದೇಹತ್ರಯಕ್ಕೆ ಕಾರಣನಾದ ಎಲೈ ಪರಮಲಿಂಗವೆ ! ನೀನು ಧ
ರ್ಥಸಿದ್ಧಿಯನ್ನು ಕೊಡತಕ್ಕವನು, ದಯಾಮೃತ ಸಮುದ್ರನು, ಜನನ ಜರಾಮರಣಾದಿ ಭಯ
ರಕನು ಎಂದು ಜ್ಞಾನಚೈತನ್ಯಕ್ಕೆ ಅಧಿಪತಿಯಾದ ಶ್ರೀಗುರುಸ್ವಾಮಿಯು ಉಪದೇಶಿಸಿ
ನನಗೆ ಅನುಗ್ರಹಿಸಿದನು. ಆದರೂ ನೀನು ಅದೇನುಕಾರಣ ನನ್ನಲ್ಲಿ ಕೃಪೆಮಾಡುವುದಿಲ್ಲ ?

ವರಗುರುನಾಥ ನೆಂತಿರಿಸಿದಂ ತಿರದಿರ್ದೊಡೆ ನೀನು ಮಾನು ಮೀ |
ರ್ವರು ಸಲೆ ಕೆಟ್ಟುಪೋಪುದಿದು ನಿಶ್ಚಯ ಮೇತಕೆ ಸುಮ್ಮನಿರ್ಪೆಕೇ ||
ಅರಸ ವಿಚಾರಮಿಲ್ಲದಿರ ಲೇತಕೆ ನೀ ನಿರಹೇಳಿದಂತೆ ಯಾ |
ನಿರದೊಡೆ ಭೀತಿಯೈಸೆ ಪರಮಪ್ರಭುವೇ ಮಹದೈಪುರೀಶ್ವರಾ ||

ಟೀಕೆ—ಅರಸ–ಎಲೆಒಡೆಯನೆ, ವರಗುರುನಾಥಂ–ಶ್ರೇಷ್ಠನಾದ ಶ್ರೀಗು
ರುಸ್ವಾಮಿಯು, ಎಂತಿರಿಸಿದ–ಹೇಂಗಿರಿಸಿದನು, ಅಂತು–ಹಾಂಗೆ, ಇರದಿರ್ದೊಡೆ–ಇರ
ದಿರ್ದೊಡೆ, ನೀನುಮಾನುಮೀರ್ವರು–ನೀನು ನಾನೆಂಬೀರ್ವರೂ, ಸಲೆ–ಚೆನ್ನಾಗಿ
ಕೆಟ್ಟುಪೋಪುದು–ಕೆಟ್ಟುಹೋಗುವುದು, ಇದು ನಿಶ್ಚಯಂ–ದಿಟವಿದು ಏತಕೆಸುಮ್ಮ
ನಿರ್ಪೆ–ಏನುಕಾರಣ ನೀ ಸುಮ್ಮನಿರ್ದಪೆ ? ವಿಚಾರಮಿಲ್ಲದೆ–ವಿವೇಕವಿಲ್ಲದೆ, ಇರಲೇ
ತಕೆ–ಇರ್ಪುದೇತಕೆ ? ಆಂ–ನಾನು, ನೀಂ ಇರಹೇಳಿದಂತೆ–ನೀನಿರಹೇಳಿದಹಾಂಗೆ, ಇರ
ದೊಡೆ–ಇರದಿರ್ದೊಡೆ, ಭೀತಿಯೈಸೆ–ಭಯವಷ್ಟೆ ? (ಇರ್ದೊಡೆ ಭಯವಿಲ್ಲವೆಂಬ
ದರ್ಥಂ) " ಯಥಾನಿಯುಕ್ತೋಽಸ್ಮಿ ತಥಾಕರೋಮಿ " ಎಂದು ಪುರಾಣವಾಕ್ಯ
ಮುಂಟು. ||

ಟಿಪ್ಪಣಿ—ಒಡೆಯನಾದ ಎಲೈ ಪರಶಿವನೇ ! ಶ್ರೀಗುರುಶ್ರೇಷ್ಠನು ಹೇಗಿರಬೇಕೆಂದು ಹೇಳಿ
ದನೋ ಹಾಗೆ ಇಲ್ಲದಿದ್ದರೆ ನೀನೂ ನಾನೂ ಇಬ್ಬರೂ ಕೆಟ್ಟುಹೋಗುವುದು ನಿಜ. ಹೀಗಿದ್ದು
ಅದೇತಕ್ಕೆ ಸುಮ್ಮನಿರುತ್ತೀಯೆ ? ವಿವೇಕವಿಲ್ಲದೆ ಇರುವುದಕ್ಕೆ ಕಾರಣವೇನು ? ನನ್ನಲ್ಲಿ ತಪ್ಪು
ಇಲ್ಲ. ನೀನು ಹೇಳಿದಂತೆ ನಡಕೊಳ್ಳದೆ ಹೋದರೆತಾನೇ ನನಗೆ ಭಯ ? ಹೇಳಿದಂತೆ ನಡೆದು
ಕೊಳ್ಳಲು ನಾನು ಸಿದ್ಧನಾಗಿರುವಾಗ ಗುರು ನಿರೂಪಿಸಿದಂತೆ ನಿನ್ನ ಕಾರ್ಯವನ್ನು ನೀನು ಮಾಡ
ದ್ದರೆ ನಿನ್ನ ಭಕ್ತವಾತ್ಸಲ್ಯಕ್ಕೂ ಕೊರತೆ, ನಿನ್ನನ್ನು ನಂಬಿದ ನನಗೂ ನಿಷ್ಫಲವೆಂದು ಭಾವವು.

ಅವತಾರಿಕೆ—ಗುರುಕಾರುಣ್ಯವುಳ್ಳವರಿಗೆ ಸಂಚಿತಾದಿ ಕರ್ಮವಿಲ್ಲೆಂದು ಪೇಳ್ದಪರು.

ಶಿವಶಿವ ಪೂರ್ವಜನ್ಮಕೃತಕರ್ಮಫಲಂ ಭವಿತವ್ಯ ಮೆಂಬ ವಾ |
ಕ್ಯವೆ ದಿಟ ಮಪ್ಪೊಡಕ್ಕಟ ಪುನರ್ಜನನಂ ಗುರುಹಸ್ತದಿಂದೆ ಸಂ ||
ಭವಿಸಿ ಶಿವಾತ್ಮರಾಗಿ ಶಿವಮಂತ್ರಶರೀರಿಗಳಾಗಿ ಪೂರ್ವಜ |
ನ್ಮವನಳಿದರ್ಗದುಂಟೆ ಪರಮಪ್ರಭುವೇ ಮಹದೈಪುರೀಶ್ವರಾ ||

ಟೀಕೆ—ಪೂರ್ವಜನ್ಮಕೃತಕರ್ಮಫಲಂ-ಪೂರ್ವಜನ್ಮ-ಮುನ್ನಿನಜನ್ಮದಲ್ಲಿ,ಕೃತ-ಮಾಡಲ್ಪಟ್ಟ, ಕರ್ಮಫಲಂ-ಸಂಚಿತಕರ್ಮಫಲವು, ಭವಿತವ್ಯಂ-ಅನುಭವಿಸಿದಲ್ಲದೆ ಬಿಡದು ಎಂಬ-ಹೀಗೆಂಬ, ವಾಕ್ಯವೆ "ಅವಶ್ಯಮನುಭೋಕ್ತವ್ಯಂಕೃತಂಕರ್ಮ ಶುಭಾಶುಭಂ" ಎಂಬ ವಚನವೇ, ದಿಟಮಪ್ಪೊಡೆ-ಸಹಜವಾಗುವೊಡೆ, ಪುನರ್ಜನನಂ-ಮರಳಿ ಜನನವು, ಗುರುಹಸ್ತದಿಂದೆ-ಗುರುವಿನಕರದಿಂದೆ, ಸಂಭವಿಸಿ-ಪುಟ್ಟಿ, ಶಿವಾತ್ಮರಾಗಿ-ಶಿವಸ್ವರೂಪರಾಗಿ, ಶಿವಮಂತ್ರಶರೀರಿಗಳಾಗಿ, ಶಿವಮಂತ್ರವೇದೇಹವಾಗುಳ್ಳವರಾಗಿ, ಪೂರ್ವಜನ್ಮಮಂ-ಮೊದಲಜನ್ಮವನ್ನು, ಅಳಿದರ್ಗೆ-ನಾಶಮಾಡಿದವರ್ಗೆ, ಅದು ಉಂಟೆ-ಆಸಂಚಿತಕರ್ಮಫಲಭೋಗವುಂಟೆ ? ಅಕ್ಕಟಾ-ಅಯ್ಯೊ ! ಶಿವಶಿವ-ಅಚ್ಚರಿ ! ಅಚ್ಚರಿ !! ಈ ಅರ್ಥದಲ್ಲಿ-ಸದ್ಗುರೋಃಪಾಣಿಜಾತಸ್ಯ ಸ್ಥಿತಿಸ್ಸದ್ಭಕ್ತಿಸಂಗಿನಃ | ಲೀಯತೇಚಮಹಾಲಿಂಗೆಶೈವಸ್ಸರ್ವೋತ್ತಮೋತ್ತಮಃ" ಎಂದಾಗಮವುಂಟಾಗಿ, ಸಂಚಿತಾದಿಗಳಿಲ್ಲವೆಂಬುದೇ ಪರಮಾರ್ಥಂ. ||೧೬||

ಟಿಪ್ಪಣಿ—ಪೂರ್ವಜನ್ಮದಲ್ಲಿ ಮಾಡಿದ ಶುಭಾಶುಭ ಕರ್ಮದ ಫಲವು ಇಹಜನ್ಮದಲ್ಲಿ ಅನುಭವಿಸಿದಲ್ಲದೆ ಬಿಡದು, ಎಂಬ ವಚನವೇ ನಿಜವಾದ ಪಕ್ಷದಲ್ಲಿ, ಗುರುಕರಕಮಲದಿಂದ ಸಂಜನಿಸಿ ಶಿವಸ್ವರೂಪರಾಗಿಯೂ, ಮಂತ್ರಕಾಯರಾಗಿಯೂ ಪರಿಣಮಿಸಿ, ಪೂರ್ವಜನ್ಮವನ್ನು ಅಳಿದಿರುವವರಿಗೆ "ಸ್ವಪ್ನಕಾಲೇಕೃತಂಪಾಪಂ ಬ್ರಹ್ಮಹತ್ಯಾದಿಕಂಚಯತ್- | ಯಥಾಪ್ರಬೋಧಸಮಯೆತನ್ಮಿಥ್ಯಾಭವತಿ ಸ್ವಯಂ | ತಥಾಕೃತಂ ಮಹಾಪಾಪಂ·ಲಿಂಗಧಾರಣತಃಪುರಾ | ಯದಸ್ತಿತಲ್ಲಯಂಯಾತಿಲಿಂಗಧಾರಣತಃಪರಂ" ಎಂಬ ವಚನದಲ್ಲಿ ಹೇಳಲ್ಪಟ್ಟಿರುವಂತೆ ಸಂಚಿತ, ಆಗಾಮಿಪ್ರಾರಬ್ಧರೂಪ ಕರ್ಮಫಲಭೋಗವೆಂಬುದು ಇರುವುದಿಲ್ಲ. "ಲಿಂಗಾಂಗಸಂಗಿನೋವತ್ಸ ಪುನರ್ಜನ್ಮನವಿದ್ಯತೆ" ಎಂಬ ಆಗಮವಚನರೀತ್ಯಾ ಶ್ರೀಗುರುದತ್ತ ಲಿಂಗಧಾರಣಸಂಪನ್ನನಾದ ಶುದ್ಧಮುಕ್ತನಿಗೆ ಪುನರ್ಜನ್ಮವುಕೂಡ ಇರುವುದಿಲ್ಲವೆಂದುಭಾವ ||೧೬||

ಭವ ಮಳಿದುಂ ಭವಪ್ರಭವಕರ್ಮಫಲಂ ಕಿಡದೆಂಬ ವಾದ ಮಾ |
ಭುವನದೊ ಳುಳ್ಳೊ ಡುಂಟು ಮೊದಲಿಲ್ಲದ ಭೂಮಿರುಹಕ್ಕೆ ಶಾಖೆಬಂ ||
ಜೆವನಿತೆ ಗಾತ್ಮಜಂ ಮೃತಶರೀರಿಗೆ ಜೀವಕಳಾಪ್ರವೇಶ ಮೆಂ |
ಬಿವು ಪೆರತೇನು ದೇವ ಪರಮಪ್ರಭುವೇ ಮಹದೈಪುರೀಶ್ವರಾ ||೧೭||

ಟೀಕೆ—ಭವಮಳಿದುಂ—ಜನ್ಮನಾಶವಾಗಿಯೂ, ಭವಪ್ರಭವಕರ್ಮಫಲಂ-ಭವ-ಸಂಸಾರದಿಂದ, ಪ್ರಭವ-ಹುಟ್ಟಿದಂಥ, ಕರ್ಮಫಲಂ-ಸಂಚಿತಾದಿ ಕರ್ಮಫಲವು, ಕಿಡದು ಎಂಬ-ನಾಶವಾಗದೆಂಬ, ವಾದಂ-ವಾದವು, ಈ ಭುವನದೊಳ್-ಈ ಲೋಕದಲ್ಲಿ, ಮೊದಲಿಲ್ಲದ-ಬೇರಿಲ್ಲದ, ಭೂಮಿರುಹಕ್ಕೆ-ವೃಕ್ಷಕ್ಕೆ, ಶಾಖೆ-ಶಾಖೆಯು, ಬಂಜೆವನಿತೆಗೆ-ಬಂಜೆಯಾದ ಸ್ತ್ರೀಗೆ, ಆತ್ಮಜಂ-ಮಗನು, ಮೃತಶರೀರಿಗೆ-ಮರಣವನ್ನೈದಿದ ಮನುಷ್ಯನಿಗೆ, ಜೀವಕಳಾಪ್ರವೇಶಂ-ಪ್ರಾಣಕಳೆಪ್ರವೇಶವು, ಎಂಬಿವು-ಹೀಗೆಂ

ಬಿವು, ಉಳ್ಳೊಡೆ-ಉಂಟಾದೊಡೆ, ಉಂಟು-ಆವಾದವುಂಟು, ಪೆರತೇನುದೇ...
ಮಾತೇನಯ್ಯ ?

ಟಿಪ್ಪಣಿ—ಲೋಕದಲ್ಲಿ ಬುಡವಿಲ್ಲದ ಮರಕ್ಕೆ ಕೊಂಬೆಯೊಡೆಯುವುದೂ, ಬಂಜೆ... ಆಗುವುದೂ, ಸತ್ತವನಿಗೆ ಜೀವಬರುವುದೂ ನಿಜವಾದಲ್ಲಿ, " ಭವವಳಿದು ಹೋದರೂ ... ಬಂಧವಾದ ಕರ್ಮದ ಫಲವು ಅಳಿದುಹೋಗುವುದಿಲ್ಲ " ಎಂಬ ಮಾತು ನಿಜವಾಗಬಹುದು, ... ಹೊರತು ಕರ್ಮಫಲವುಂಟೆಂಬ ವಾದವು ಸತ್ಯವಲ್ಲವೆಂದು ಭಾವ.

ಇದಕೆ ಶಿವಾಂಗಲಿಂಗ ಕೃತಸಂಗಸಮರ್ಚನಮೇಕೆ ಕಾಲಕ |
ರ್ಮದುರಿತದೋಷಪೀಡೆ ಯೆಡೆಗೊಂಡನುವಾಸರ ಮಾರ್ದು ನಿಸ್ತುಷಂ ||
ಸದೆವೊಡೆ ಭಕ್ತರೇಂ ಭವಿಗಳೇಂ ಶಿವಭಕ್ತಿಗುಣಪ್ರಭಾವ ಮಿ |
ಲ್ಲದೊಡೆ ವಿಭೇದಮೇನು ಪರಮಪ್ರಭುವೇ ಮಹದೈಪುರೀಶ್ವರಾ ||...

ಟೀಕೆ—ಅನುವಾಸರಂ-ಪ್ರತಿದಿವಸದಲ್ಲಿಯೂ, ಕಾಲಕರ್ಮದುರಿತದೋಷ... ಡೆ-ಕಾಲ-ಭೂತಾದಿಕಾಲದಲ್ಲಿಯ, ಕರ್ಮ-ಸಂಚಿತಾದಿ ಕರ್ಮದ, ದುರಿತ-... ಕಂಗಳ, ದೋಷ-ಪಾಪಂಗಳ, ಪೀಡೆ-ಬಾಧೆ, ಎಡೆಗೊಂಡು-ಸ್ಥಳವಮಾಡಿಕೊಂ... ಆರ್ದು-ಬೊಬ್ಬಿಟ್ಟು, ನಿಸ್ತುಷಂ-ಹೊಟ್ಟುಳಿಯದಂತೆ, ಸದೆವೊಡೆ-ಕೊಲ್ಲು... ಇದಕ್ಕೆ-ಈಕೊಲಿಸಿಕೊಂಬುದಕ್ಕೆ, ಶಿವಾಂಗಲಿಂಗಕೃತಸಂಗಸಮರ್ಚನಂ-ಶಿವ... ಗಳಸ್ವರೂಪವಾದ, ಅಂಗಲಿಂಗಕೃತಸಂಗ-ಲಿಂಗಾಂಗಸಂಬಂಧವು, ಸಮರ್ಚನ-... ಲಿಂಗಪೂಜೆಯು, ಏಕೆ-ಏತಕ್ಕೆ ? ಶಿವಭಕ್ತಿಗುಣಪ್ರಭಾವಂ-ಶಿವಭಕ್ತಿ-ಶಿವಭಕ್ತಿ... ಗುಣಪ್ರಭಾವಂ-ಮಹಿಮಾತಿಶಯವು, ಇಲ್ಲದೊಡೆ-ಇಲ್ಲದಿರ್ದೊಡೆ, ಭಕ್ತರೇಂ-ಭ... ರೇನು ? ಭವಿಗಳೇಂ-ಭವಿಗಳೇನು ? ವಿಭೇದವೇನು-ಈ ಭೇದವೇನುಂಟು ? ... ವೆಂಬುದರ್ಥಂ. ||...

ಟಿಪ್ಪಣಿ—ಯಾವಾಗಲೂ ಭಕ್ತನನ್ನು ಭೂತಾದಿಕಾಲತ್ರಯದ ಸಂಚಿತಾದಿ ಕರ್ಮ... ವಾದ ಪಾಪದುಃಖವು ಕಾಲುಹಾಕಿಕೊಂಡು ಆರ್ಭಟಿಸಿ ಅಂಜಿಸುವುದಾದರೆ, ಹೀಗೆ ಕೆ... ಳ್ಳುವ ಸುಖಕ್ಕೆ ಲಿಂಗಾಂಗಸಂಯೋಗವೇತಕ್ಕೆ ? ಲಿಂಗಾರ್ಚನವೇತಕ್ಕೆ ? ಕರ್ಮದುಃಖವನ್ನು ... ಸುವ ಶಕ್ತಿಯು ಅವಕ್ಕಿಲ್ಲದ ಬಳಿಕ ಆ ಲಿಂಗಾಂಗಸಂಯೋಗಾದಿಗಳಿಂ ಪ್ರಯೋಜನವೇನು ? ... ಭಕ್ತಿಯಲ್ಲಿ ಮಹತ್ತ್ವವು ಇಲ್ಲದೆ ಹೋದಮೇಲೆ ಭಕ್ತರಿಗೂ, ಭವಿಗಳಿಗೂ ಭೇದವೇನಿರುವುದು ?

ಅಗ ಲದಕ್ಕೆ ತಪ್ಪಿದು ದದೇನು ವಿಶೇಷಿಸಿ ಕರ್ಮಪೀಡನಂ |
ತಾಗುವ ವೇಳೆಯೊ ಳ್ತಿಗೆದು ತಪ್ಪಿಸಿ ತನ್ನಿ ಮಿಷಂ ಸಮುದ್ಧರಿ ||
ಪ್ಪಾಪ್ಪಗುಣ ಮಿಲ್ಲದಿರ್ದೊಡೆ ಭವಿತ್ವಕೆ ಭಾಕ್ತಿಕ ಕೇನು ಭೇದಮ |
ಯ್ಯೋ ಗುರುನಾಥನಾಥ ಪರಮಪ್ರಭುವೇ ಮಹದೈಪುರೀಶ್ವರಾ ||...

ಟೀಕೆ—ನಾಥ-ಎನ್ನೊಡೆಯನಾದ, ಗುರುನಾಥ-ಎಲೆಗುರುಸ್ವಾಮಿ, ಅದಕ್ಕೆ ತಪ್ಪಿದುದು ಅದೇನು-ಅದಕ್ಕೆ ತಪ್ಪಿದುದಾವುದು ? ಆಗಲಿ-ಆದಾಗಲಿ, ವಿಶೇಷಿಸಿ-ವೆಗ್ಗಳವಾಗಿ, ಕರ್ಮಪೀಡನಂ-ಕರ್ಮಬಂಧವು, ತಾಗುವವೇಳೆಯೊಳ್-ಸೋಂಕುವ ಸಮಯದಲ್ಲಿ, ತೆಗೆದು-ಕಡೆಗೆತೆಗೆದು, ತಪ್ಪಿಸಿ-ಆ ಕರ್ಮಬಂಧಮಂತೊಲಗಿಸಿ, ತನ್ನಿಮಿಷಂ-ಆಯೆವೆಹಳಚುವಷ್ಟುವೇಳೆ, ಸಮುದ್ಧರಿಪ್ಪ-ಚೆನ್ನಾಗಿರಕ್ಷಿಸುವ, ಆಗುಣಂ-ಅಂತಪ್ಪಗುಣವು, ಇಲ್ಲದಿರ್ದೊಡೆ-ಉಂಟಾಗದಿರಲಾಗಿ, ಭವಿತ್ವಕೆ—ಭವಿತನಕ್ಕೆ, ಭಾಕ್ತಿಕಕೆ-ಶಿವಭಕ್ತನಾಗುವತನಕ್ಕೆ, ಏನುಭೇದಂ-ಆವುದು ಭೇದವು ? ಅಯ್ಯೋ-ಅಕ್ಕಟಾ ! ||೧೯||

ಟಿಪ್ಪಣಿ—ಎಲೈ ಗುರುಸ್ವಾಮಿಯೆ ! ಆ ಕರ್ಮಫಲವು ಸಂಘಟಿಸಿದರೆ ಸಂಘಟಿಸಲಿ, ತಾವ ನ್ಮಾತ್ರದಲ್ಲೇ ತಪ್ಪಾದುದೇನು ? ಆ ಕರ್ಮದುಃಖವು ಬಂದು ಸಂಘಟಿಸುವಷ್ಟರೊಳಗಾಗಿ ಥಟ್ಟನೆ ಆ ಕರ್ಮಬಂಧವನ್ನು ಕಿತ್ತು ಬಿಸುಟು ಉದ್ಧಾರಮಾಡುವ ಶಕ್ತಿಯು ಭಕ್ತಿಗೆ ಇಲ್ಲದಿದ್ದರೆ, ಭವಿತನಕ್ಕೂ ಭಕ್ತನಾಗಿರುವಿಕೆಗೂ ಇನ್ನು ಭೇದವೇನುಳಿಯುವುದು ? ||೧೯||

ಧರೆಯೊಳೆ ದೇಹಧರ್ಮಗತಿ ಯೊಂದೆ ಸಮಸ್ತಶರೀರಿಗಳ್ಗೆ ಭ |
ಕ್ತರಿಗೆ ಶುಭಾಶುಭದ್ವಿವಿಧಕರ್ಮಫಲಂ ಸಮವಾಗ ಲಾದೊಡೇ ||
ನಿರದದು ಮುಟ್ಟಿ ಬಂದೆಡೆಯೊ ಳಾಂತು ದುರಾಗತದುಃಖಮಂ ಸಮು |
ದ್ಧರಿಸದೊ ಡೇಕೆ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೨೦||

ಟೀಕೆ—ಭೋಪರಮಪ್ರಭುವೇ—ಎಲೆ ಮಹಾಲಿಂಗವೆ, ಧರೆಯೊಳೆ-ಜಗತ್ತಿನಲ್ಲಿ, ಸಮಸ್ತಶರೀರಿಗಳ್ಗೆ-ಸಮಸ್ತಪ್ರಾಕೃತಾತ್ಮರಿಗೆಯೂ, ಭಕ್ತರಿಗೆ-ಶಿವಭಕ್ತರಿಗೆಯೂ, ದೇಹಧರ್ಮಗತಿ—ದೇಹಗುಣಂಗಳ ನಡತೆಯು, ಒಂದೇ—ಒಂದೇತೆರನು, ಶುಭಾಶುಭದ್ವಿವಿಧಕರ್ಮಫಲಂ-ಪುಣ್ಯಪಾಪಂಗಳೆಂಬೆರಡುಕರ್ಮಫಲಂಗಳು, ಸಮಂ-ಸರಿಯು, ಆಗಲಿ-ಉಂಟಾಗಲಿ, ಆದೊಡೇಂ-ಆದೊಡೇನು, ಇರದೆ-ನಿಲ್ಲದೆ, ಅದು-ಆ ಶುಭಾಶುಭಕರ್ಮಂಗಳು, ಮುಟ್ಟಿಬಂದೆಡೆಯೊಳ್-ಸೊಂಕಿಬಂದಬಳಿಯಲ್ಲಿ, ಆಂತು-ಇದಿರಾಗಿಬಂದು, ದುರಾಗತದುಃಖಮಂ-ಬರಬಾರದ ಕ್ಲೇಶಮಂ, ಸಮುದ್ಧರಿಸದೊಡೆ-ಕಡೆಗೆ ತೊಲಗಿಸಿ ಪಾಲಿಸದಿರ್ದೊಡೆ, ಭಕ್ತಿ-ಶಿವಭಕ್ತಿತಾನು, ಏಕೆ-ಏತಕ್ಕೆ ? ಅದರಿಂದೇನು ಪ್ರಯೋಜನವು ? ||೨೦||

ಟಿಪ್ಪಣಿ—ಎಲೈ ಪರಮಶಿವನೆ ! ಭೂಮಿಯಲ್ಲಿ ಸಕಲ ಪ್ರಾಕೃತಜನರಿಗೂ ಅಪ್ರಾಕೃತರಾದ ಭಕ್ತರಿಗೂ ದೇಹಧರ್ಮ ವ್ಯಾಪಾರವು ಒಂದೇ ವಿಧವಾಗಿರುವುದು. ಅವರೀರ್ವರಿಗೂ ಉಂಟಾಗತಕ್ಕ ಶುಭಾಶುಭ ಕರ್ಮಗಳ ಫಲವೂ ಒಂದೇ ತೆರನಾಗಿರುವುದು. ಆಗಲಿ; ಹಾಗಾದಮಾತ್ರದಿಂದಲೇ ಏನು ? ಆ ಶುಭಾಶುಭ ಕರ್ಮಫಲವು ಬಂದು ಭಕ್ತನನ್ನು ಸೊಂಕುವಷ್ಟರೊಳಗಾಗಿ ಭಕ್ತಿಪ್ರಭಾ

ವವು ಅದಕ್ಕೆ ಪ್ರತಿಭಟಿಸಿ ಆ ಕರ್ಮಪೀಡೆಯನ್ನು ಕಡೆಗೆ ತೊಲಗಿಸಿ ರಕ್ಷಿಸದೆಯಿದ್ದರೆ ಆ ಭಕ್ತಿ... ಪ್ರಯೋಜನವೇನು ?

ಶೀತಗೃಹೀತಭೀತ ನಮಳಾನಳತೇಜಮ ನಪ್ಪಿದಂತೆ ರೋ |
ಗಾತಿ ವಿಶೇಷದೋಷಹರಕೌಷಧ ಸೇವನೆ ಯೆಯ್ದಿದಂತೆ ನಿ ||
ರ್ಧೂತಶರೀರದುಃಖಭಯ ಹೋಗದೊ ಡೇತರ ದೇವಪೂಜೆ ಸಾ |
ಕೇತರಭಕ್ತಿಯಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||...

ಟೀಕೆ—ಶೀತಗೃಹೀತಭೀತಂ-ಶೀತ-ಚಳಿಯಿಂ, ಗೃಹೀತ—ಹಿಡಿಯಲ್ಪಟ್ಟ... ನಾಗಿ, ಭೀತಂ-ಅಂಜಿದವನು, ಅಮಳಾನಳತೇಜಮಂ-ಅಮಳ-ನಿರ್ಮಳಮಾದ, ... ಲ-ಅಗ್ನಿಯ, ತೇಜಮಂ—ಕಾಂತಿಯನ್ನು, ಅಪ್ಪಿದಂತೆ—ಆಲಿಂಗನವಮಾಡಿದ... ರೋಗಾತಿವಿಶೇಷದೋಷಹರಕೆ-ರೋಗ-ವ್ಯಾಧಿಯ, ಅತಿವಿಶೇಷ-ಮಿಗೆವೆಗ್ಗ... ದೋಷ-ವಾತಾದಿ ದೋಷಂಗಳ, ಹರಕೆ-ಪರಿಹಾರಕ್ಕೆ, ಔಷಧಸೇವನೆ-ರಸಾ... ಸೇವನೆ, ಎಯ್ದಿದಂತೆ-ದೊರಕೊಂಡಂತೆ, ನಿರ್ಧೂತಶರೀರದುಃಖಭಯ—ನಿರ್ಧೂ... ಕೊಡಹಲ್ಪಟ್ಟ, ಶರೀರ-ದೇಹದ, ದುಃಖ-ದುಃಖದತ್ತಣಿಂ, ಭಯ-ಅಂಜಿಕೆ, ("... ಭಕ್ತಿತೋಯಂಸಿರ್ದೆಶಃ'' ಎಂದುಂಟು). ಹೋಗದೊಡೆ--ಪರಿಹರಿಸದಿರ್ದೊಡೆ, ... ರದೇವಪೂಜೆ-ಶಿವಪೂಜೆಯೇತರದು ? ಏತರಭಕ್ತಿಯಯ್ಯ-ಶಿವಭಕ್ತಿಯಾವುದಯ್ಯ ಸಾಕು-ಅದುಸಾಕು. ||...

ಟಿಪ್ಪಣಿ—ಚಳಿಹಿಡಿದು ಭಯಗೊಂಡವನು ಬೆಂಕಿಯ ಹಬೆಯನ್ನು ತಬ್ಬಿಕೊಂಡಂತೆಯು ಅತ್ಯಂತ ರೋಗಗ್ರಸ್ತನಾದವನು ತತ್ಪರಿಹಾರಕ್ಕಾಗಿ ತಕ್ಕ ಔಷಧವನ್ನು ಸೇವಿಸಿದಂತೆಯೂ, ... ನಿಗೆ ದೇಹದುಃಖಬಂಧದ ಭಯವು ಭಕ್ತಿಯಿಂದ ತೊಲಗಿಹೋಗದಿದ್ದರೆ ಅದೆಂತಹ ಭಕ್ತಿ ! ... ತಹ ದೇವಪೂಜೆ ? ಅವುಗಳಿಂದ ಪ್ರಯೋಜನವೇನು ?

ದಿನದೆಡೆಯುಂಟೆ ಸೂರ್ಯನುದಯಕ್ಕೆ ತಮೋವಿಲಯಕ್ಕೆ ಹಚ್ಚಕ |
ಬ್ಬುನದಳಿವಿಂಗೆ ಸಿದ್ಧರಸದಾಕ್ರಮಣ ಕ್ಕೆಲೆದೇವದೇವ ನೀ ||
ನನುಕರಿಸಿದ್ದುರ್ವಂ ದುರಿತದುಃಖಭಯಕ್ಷಯಕಿಂದು ನಾಳೆ ಯೆಂ |
ಬಿನಿತು ವಿಳಂಬಮೇಕೆ ಪರಮಪ್ರಭುವೇ ಮಹದೈಪುರೀಶ್ವರಾ ||...

ಟೀಕೆ—ಎಲೆ ದೇವದೇವ-ದೇವತಾವಲ್ಲಭನೆ, ಸೂರ್ಯನುದಯಕ್ಕೆ-ಸೂರ್ಯೋ... ದಯಕ್ಕೆಯೂ, ತಮೋವಿಲಯಕ್ಕೆ-ಕತ್ತಲೆ ಹರಿವುದಕ್ಕೆಯೂ, ದಿನದ ಎಡೆ... ಕಾಲವಿಳಂಬವುಂಟೆ ? ಇಲ್ಲ. ಹಚ್ಚಕಬ್ಬುನದ-ಅಚ್ಚಲೋಹದಸ್ವರೂಪದ, ಅಳಿವಿ... ನಾಶಕ್ಕೆಯೂ, ಸಿದ್ಧರಸದ ಆಕ್ರಮಣಕ್ಕೆ—ಸ್ಪರ್ಶವೇದಿಸುವುದಕ್ಕೆಯೂ, ದಿನ... ಎಡೆಉಂಟೆ-ಕಾಲಕ್ಷೇಪವುಂಟೆ ? ನೀಂ ಅನುಕರಿಸಿದುರ್ವ-ನೀನಂಗೀಕರಿಸಿದ...

ದುರಿತದುಃಖ ಭಯಕ್ಷಯಕ್ಕೆ-ದುರಿತ-ಸೈರಿಸಲಳವಲ್ಲದ, ದುಃಖ-ಕ್ಲೇಶಂಗಳತ್ತಣಿಂದಾದ, ಭಯ-ಭೀತಿಯ, ಕ್ಷಯಕ್ಕೆ-ನಾಶಕ್ಕೆ, ಇಂದುನಾಳೆಯೆಂಬ-ಈಗಲಾಗಲೆಂಬ, ಇನಿತುವಿಳಂಬಂ-ಇಷ್ಟುತಡವು, ಏಕೆ-ಏತಕ್ಕೆ ? ||೨೨||

ಟಿಪ್ಪಣಿ—ಎಲೈ ದೇವತಾಸಾರ್ವಭೌಮನಾದ ಪರಮಶಿವನೆ ! ಸೂರ್ಯೋದಯವಾಗುವದಕ್ಕೂ ಕತ್ತಲೆ ಹರಿವುದಕ್ಕೂ ಮಧ್ಯಕಾಲವಿಳಂಬವುಂಟೆ ? ಸಿದ್ಧರಸವು ಸೋಂಕುವುದಕ್ಕೂ, ಕಬ್ಬಿನದ ಸ್ವರೂಪವು ಅಳಿವುದಕ್ಕೂ ಮಧ್ಯೆ ತಡವಾಗುವುದುಂಟೆ ? ನೀನು ಅನುಗ್ರಹಮಾಡಿದ್ದರೂ ನನ್ನ ಕರ್ಮದುಃಖವು ಭಯವು ಅಳಿವುದಕ್ಕೆ ಈಗ ಆಗ ಎಂದು ಇಷ್ಟೊಂದು ಕಾಲಯಾಪನೆ ಯೇತಕ್ಕೆ ? ||

ಆರಿಗೆ ಪೇಳ್ವೆ ನಾರಿಗೆ ಪಲುಂಬುವೆ ನಾರಿಗೆ ತೋರ್ಪೆ ನೆನ್ನ ಸಂ |
ಸಾರದುರಾಪ್ತದುಃಖಭಯಮಂ ನಿನಗಲ್ಲದೆ ಭಕ್ತಲೋಕಮಂ ||
ದಾರ ವರಾಭಯಪ್ರದ ಭವಚ್ಚರಣಾಂಬುಜಭಕ್ತಿಯೆತ್ತ ಸಂ |
ಸಾರದ ಭೀತಿ ಯೆತ್ತ ಪರಮಪ್ರಭುವೇ ಮಹದೈಪುರೀಶ್ವರಾ ||೨೩||

ಟೀಕೆ—ಭಕ್ತಲೋಕಮಂದಾರ—ಭಕ್ತಜನಂಗಳ್ಗೆ ಕಲ್ಪವೃಕ್ಷವಾದಾತನೆ, ವರಾಭಯಪ್ರದ-ಅಭಯವರಂಗಳ ಕೊಡುವಾತನೆ, ಎನ್ನ-ಎನ್ನ ಸಂಬಂಧವಾದ, ಸಂಸಾರದುರಾಪ್ತದುಃಖಭಯಮಂ-ಸಂಸಾರ-ಜನ್ಮಮರಣಂಗಳಲ್ಲಿಯ, ದುರಾಪ್ತ-ಐದಲಳವಲ್ಲದ, ದುಃಖ-ಕ್ಲೇಶದಿಂದಾದ, ಭಯಮಂ-ಭೀತಿಯನ್ನು, ಆರಿಗೆಪೇಳ್ವೆಂ-ಆರಿಗೆಹೇಳುವೆನು? ಆರಿಗೆಪಲುಂಬುವೆಂ-ಆರಿಗೆ ಬಾಯಿಬಿಡುವೆನು? ಆರಿಗೆತೋರ್ಪೆಂ-ಆರಿಗೆ ತೋರಿಸುವೆನು ? ನಿನಗಲ್ಲದೆ-ನಿನಗೋರ್ವಂಗಲ್ಲದೆ, ಭವಚ್ಚರಣಾಂಬುಜಭಕ್ತಿ-ನಿನ್ನ ಪಾದಾರವಿಂದದಭಕ್ತಿಯು, ಎತ್ತ-ಎಲ್ಲಿ ? ಸಂಸಾರದಭೀತಿಯೆತ್ತ-ಸಂಸಾರದಭಯವೆಲ್ಲಿ ! ||೨೩||

ಟಿಪ್ಪಣಿ—ಭಕ್ತರ ಇಷ್ಟಾರ್ಥವನ್ನು ಕೊಡುವಲ್ಲಿ ಕಲ್ಪವೃಕ್ಷಪ್ರಾಯನಾದವನೆ, ಆಶ್ರಿತರಿಗೆ ಬೇಡಿದ ವರಗಳನ್ನೂ ಅಭಯವನ್ನೂ ದಾನಮಾಡುವ ಎಲೈ ಪರಮೇಶ್ವರನೆ, ನನ್ನ ದುಸ್ಸಹ ಸಂಸಾರದುಃಖದ ಭೀತಿಯನ್ನು ನಿನ್ನೊಡನಲ್ಲದೆ ಮತ್ತಾರಿಗೆ ಹೇಳಿಕೊಳ್ಳಲಿ ? ಯಾರೊಡನೆ ಬಾಯ್ಬಿಟ್ಟು ದೂರಿಕೊಳ್ಳಲಿ ? ಮತ್ತಾರಿಗೆ ತೋರಿಸಲಿ ? ನಿನ್ನ ಪಾದಕಮಲದ ಭಕ್ತಿಯೆಲ್ಲಿ ! ಸಂಸಾರದ ಭಯವೆಲ್ಲಿ ! ಇದಕ್ಕದಕ್ಕೇನು ಸಂಬಂಧ ? (ಭವರೋಗನಿವಾರಕನು ನೀನೊಬ್ಬನೇ ಆದುದರಿಂದ ನನ್ನ ಭವದುಃಖವನ್ನು ನಿನ್ನೊಬ್ಬನಿಗಲ್ಲದೆ ಮತ್ತಾರಿಗೆ ಹೇಳಿಕೊಳ್ಳುವುದೂ ವ್ಯರ್ಥವೆಂದು ಭಾವ.)

ಪರಮಪತಿವ್ರತಾಸತಿ ನಿಜಪ್ರಿಯವಲ್ಲಭ ನೊಲ್ಲದಿರ್ದೊಡ |
ತ್ಯುರುತರದುಃಖಭಾವದಿ ನಳಲ್ವ ಬಳಲ್ವ ಕೆರಳ್ವ ಬೈವವೊ ||
ಲ್ಯರಣರುವೀರಶೈವ ರತಿನಿಷ್ಠರು ಕೋಪಿಸ ರೇನದಿನ್ನು ಪಾ |
ಮರ ರ್ಗೆನಲುಂಟೆ ಶಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೨೪||

ಟೀಕೆ—ಪರಮಪತಿವ್ರತಾಸತಿ-ಪರಮ-ಉತ್ಕೃಷ್ಟಳಾದ, ಪತಿವ್ರತಾ-ಪತಿವ್ರತಾಂಗನೆಯು, ನಿಜಪ್ರಿಯವಲ್ಲಭಂ-ತನ್ನಪ್ರಾಣವಲ್ಲಭನು, ಒಲ್ಲದಿದ್ದ-ಉದಾಸೀನದಿಂದಿರ್ದೊಡೆ, ಅತ್ಯುರುತರದುಃಖಭಾವದಿಂ-ಅತ್ಯುರುತರ-ಮಿಗಿಲ-ತ್ತಾದ, ದುಃಖಭಾವದಿಂ-ಕ್ಲೇಶಭಾವದಿಂದ, ಅಳಲ್ವ-ಆಯಾಸಗೊಂಬ, ಬಿಸ-ನೋವ, ಕೆರಳ್ವ-ಕೋಪಿಸುವ, ಬೈವ-ದೂಷಿಸುವ, ವೋಲ್-ಹಾಂಗೆ, ಶರ-ಶಿವಶರಣರಾದ, ವೀರಶೈವರ್-ವೀರಶೈವರಾದ, ಅತಿನಿಷ್ಠುರು-ಅತ್ಯಂತದೃಢವಂತ-ಕೋಪಿಸರೇಂ-ಕೋಪಿಸರೇನು ? ಇನ್ನು, ಪಾಮರರ್ಗೆ-ಪ್ರಾಕೃತಮನುಷ್ಯ-ಅದು ಶಕ್ತಿ-ಆಸಾಮರ್ಥ್ಯವು, ಎನಲುಂಟೆ-ಇರುವುದೆಂದು ಹೇಳಲುಂಟೆ ? ಇಲ್ಲ.

ಟಿಪ್ಪಣಿ—ಎಲೈ ಶಂಕರನೆ ! ತನ್ನ ಪ್ರಾಣಕಾಂತನು ತನ್ನವಿಷಯದಲ್ಲಿ ಔದಾಸೀನ್ಯ-ದ್ದರೆ, ಪರಮಪತಿವ್ರತೆಯಾದ ಪತ್ನಿಯು ಅತ್ಯಂತ ವ್ಯಸನದಿಂದ ಆಯಾಸಗೊಳ್ಳುವಂತೆಯೂ, ದುಕೊಳ್ಳುವಂತೆಯೂ, ಕೋಪಿಸುವಂತೆಯೂ, ಬೈಯುವಂತೆಯೂ ಅತ್ಯಂತ ನಿಷ್ಠರಾದ ಶಿವ-ಶರಣರು ನಿನ್ನ ಔದಾಸೀನ್ಯವನ್ನು ಕಂಡು ಕೋಪಗೊಳ್ಳದೆ ಇರುವರೆ ? ನಿನ್ನ ವಿಷಯದಲ್ಲಿ ಹ-ನಡೆದುಕೊಳ್ಳುವ ಸಾಮರ್ಥ್ಯವು ಶರಣಸತಿ ಲಿಂಗಪತಿಭಾವವಳವಟ್ಟ ಭಕ್ತರಿಗಲ್ಲದೆ ಪ್ರಾಕೃ-ವುದುಂಟೆ ? ಎಂದಿಗೂ ಇಲ್ಲ.

ಆಮಯಘಾತಿಯಿಂ ವಿಷಯದಂಡಲೆಯಿಂ ಬಹುದುಃಖದೊಗ್ಗಿನಿಂ |
ತಾಮಸದಿರ್ಕೆಯಿಂ ನೆರೆ ಮುದಂಗೆಡುತ್ತೈದೆನೆ ದೇವ ಭಕ್ತಕಾ ||
ಯೋಮಮ ಕಾಯಮೆಂಬ ವಚನಂ ದಿಟಮಾದೊಡೆ ರಕ್ಷಿ 'ಸೆನ್ನುವಂ |
ಕಾಮಪುರಾಂತಕಾರಿ ಪರಮಪ್ರಭುವೇ ಮಹದೈಪುರೀಶ್ವರಾ || ೩೯

ಟೀಕೆ—ಕಾಮಪುರಾಂತಕಾರಿದೇವ-ಕಾಮ-ಮನ್ಮಥಂಗೆಯೂ, ಪುರ-ತ್ರಿ-ರಕ್ಕೆಯೂ, ಅಂತಕ-ಕಾಲಂಗೆಯೂ, ಅರಿದೇವ-ಹಗೆಯಾದದೇವನೆ, ಆಮಯಘಾ-ತಿಯಿಂ-ಭವರೋಗದ ಪೆಟ್ಟನಿಂ, ವಿಷಯದ-ಶಬ್ದಾದಿವಿಷಯಂಗಳ, ಅಂಡಲೆಯ-ಕಾಟದಿಂದೆಯೂ, ಬಹುದುಃಖದ-ಹಲವುತೆರನಾದ ಕ್ಲೇಶಗಳ, ಒಗ್ಗಿನಿಂ-ಸಮೂ-ದಿಂದೆಯೂ, ತಾಮಸದ ಇಕ್ಕೆಯಿಂ-ಅಜ್ಞಾನಕ್ಕೆ ನೆಲೆಯಾಗಿಪ್ಪುದರಿಂದೆಯೂ-ನೆರೆ-ಚೆನ್ನಾಗಿ, ಮುದಂಗೆಡುತೆ-ಸಂತಸಕೆಡುತ್ತೆ, ಐದೆನೆ-ಇದ್ದೇನೆ ಭಕ್ತಕಾಯೋ-ಮಕಾಯಮೆಂಬ-ಭಕ್ತನದೇಹವೇ ಎನ್ನ ದೇಹವೆಂಬ, ವಚನಂ-ನಿನ್ನವಾಕ್ಯ-ದಿಟಮಾದೊಡೆ-ಯಥಾರ್ಥಮಾದೊಡೆ, ಎನ್ನುವಂ-ನನ್ನನು, ಸಲಹು-ರಕ್ಷಿಸು.

ಟಿಪ್ಪಣಿ—ಕಾಮನನ್ನೂ ತ್ರಿಪುರವನ್ನೂ ಯಮನನ್ನೂ ನಾಶಗೊಳಿಸಿದ ಎಲೈಸ್ವಾಮಿ-ಭವರೋಗದ ಹೊಡತದಿಂದಲೂ, ಇಂದ್ರಿಯ ವಿಷಯಗಳ ಕಾಟದಿಂದಲೂ, ನಾನಾ ಕ್ಲೇಶಗಳ ಸಮೂ-ಹದಿಂದಲೂ, ಅಜ್ಞಾನಕ್ಕೆ ನೆಲೆಯಾದುದರಿಂದಲೂ ಉಲ್ಲಾಸವಳಿದಿರುವೆನು. ಭಕ್ತನ ದೇಹ-ನನ್ನ ದೇಹವೆಂದು ಹೇಳಿರುವ ನಿನ್ನ ಶಿವಾಗಮವಾಕ್ಯವು ದಿಟವಾದ ಪಕ್ಷದಲ್ಲಿ ಕಷ್ಟಕ್ಕೀಡಾಗಿ-ನನ್ನನ್ನು ರಕ್ಷಿಸು (ಹಾಗಲ್ಲದಿದ್ದರೆ ನಿನ್ನ ನುಡಿಯೇ ಸುಳ್ಳಾಗುವುದು ಎಂದು ಭಾವವು).

ಅವತಾರಿಕೆ—ಶರಣನು ಆಶಾರಹಿತನಾಗಿರಬೇಕೆಂದು ಪೇಳುತ್ತಿರ್ದಪಂ.—

ಭುವನಚತುರ್ದಶೈಕವಿಭುವಾಗಿ ವಿರಾಜಿಸುತಿರ್ಪರ್ ನಿನ್ನ ವೈ |
ಭವದೊಳ ಗಾಂ ದರಿದ್ರ ನೆನಿಸಿರ್ಪುದಿದೇಂ ಕೆಲವೂರ ನಾಳ್ವ ಮಾ ||
ನವ ನೊಳಗಾಗಿ ತನ್ನ ನಿರ ದಾಶ್ರಯಿಸಿರ್ದ್ದರ ನೊಲ್ದು ರಕ್ಷಿಪಂ |
ಶಿವ ನಿನಗೇ ನಪೂರ್ವ ಪರಮಪ್ರಭುವೇ ಮಹದೈಪುರೀಶ್ವರಾ ||೨೬||

ಟೀಕೆ—ಭುವನಚತುರ್ದಶೈಕವಿಭುವಾಗಿ—ಭುವನಚತುರ್ದಶ—ಹದಿನಾಲ್ಕು ಲೋಕಂಗಳಿಗೆಯೂ, ಏಕವಿಭುವಾಗಿ-ಓರ್ವನೇ ಕರ್ತೃವಾಗಿ, ವಿರಾಜಿಸುತಿರ್ಪ-ಒಪ್ಪುತ್ತಿರ್ಪ, ನಿನ್ನವೈಭವದೊಳಗೆ-ನಿನ್ನೈಶ್ವರ್ಯದಲ್ಲಿ, ಆಂ-ನಾನು, ದರಿದ್ರನೆನಿಸಿರ್ಪುದು-ಬಡವನೆನಿಸಿರ್ಪುದು, ಇದೇಂ-ಇದೇನು ? ಕೆಲವೂರನಾಳ್ವ-ಕೆಲವು ಹಳ್ಳಿಗಳನಾಳುತ್ತಿರ್ಪ, ಮಾನವನೊಳಗಾಗಿ-ಹುಲ್ಲುಮನುಷ್ಯನು ಸಹವಾಗಿ, ತನ್ನಂ-ತನ್ನನ್ನು, ಇರದೆ-ಬಿಡದೆ, ಆಶ್ರಯಿಸಿರ್ದ್ದರಂ-ಪೊರ್ದುಕೊಂಡಿರ್ದವರನು, ಒಲ್ದು-ಪ್ರೀತಿಯಿಂದೆ ರಕ್ಷಿಪಂ-ಸಲಹುವನು, ಶಿವ-ಎಲೈ ಪರಮಮಂಗಳಸ್ವರೂಪನಾದ ದೇವನೆ, ನಿನಗೆ ಏನಪೂರ್ವಂ-ನನ್ನಂರಕ್ಷಿಸುವುದಕ್ಕೆ ನಿನಗೇನಿಲ್ಲ ? ರಕ್ಷಿಸು. ||೨೬||

ಟಿಪ್ಪಣಿ—ಎಲೈ ಪರಮೇಶ್ವರನೆ ! ನೀನು ಹದಿನಾಲ್ಕು ಲೋಕಗಳಿಗೂ ಸಾರ್ವಭೌಮನಾಗಿ ಒಪ್ಪುತ್ತಿರುವಲ್ಲಿ, ಅಂತಹ ನಿನ್ನ ಮಹಾವೈಭವದಲ್ಲಿ ನಿನ್ನನ್ನು ನಂಬಿದ ನಾನು ದಟ್ಟದರಿದ್ರನಾಗಿ ಬಾಳುತ್ತಿರುವೆನೆಂದು ಹೇಳಿಸಿಕೊಳ್ಳುವುದು ಇದೇನು ಸರಿಯೆ ? ನಾಲ್ಕಾರು ಹಳ್ಳಿಗಳನ್ನು ಪರಿಪಾಲಿಸುವ ಹುಲ್ಲುಮನುಷ್ಯನು ಸಹ ತನ್ನನ್ನು ನಂಬಿದವರನ್ನು ಎಷ್ಟೋ ಪ್ರೀತಿಯಿಂದ ಸಲಹುವನು. ಹೀಗಿರುವಾಗ, ನನ್ನನ್ನು ರಕ್ಷಿಸುವುದು ನಿನಗೊಂದು ದೊಡ್ಡದೆ ? ನನ್ನ ರಕ್ಷಣೆ ಮಾಡುವುದಕ್ಕೆ ನಿನಗೆ ಕೊರತೆಯಾಗಿರುವುದೇನು ? ||೨೬||

ಸಕಲಸುಖೈಕಕರ್ತೃವಹ ನಿನ್ನೊಡಗೂಡಿ ವಿರಾಜಿಸುತ್ತ ಮಾ |
ವಿಕಳಮನುಷ್ಯರಂ ಬರಿದೆ ಬೇಡಿ ಲಘುತ್ವಮ ನೆಯ್ದಿ ದೈನ್ಯದಿಂ ||
ದಕಟಕಟಾ ಮುದಂಗೆಡಲು ನೋಳ್ಪರೆ ಪೇಳ್ನಿಜಭಕ್ತವತ್ಸಲಾ |
ಪ್ರಕಟಕೃಪಾಸಮುದ್ರ ಪರಮಪ್ರಭುವೇ ಮಹದೈಪುರೀಶ್ವರಾ ||೨೭||

ಟೀಕೆ—ನಿಜಭಕ್ತವತ್ಸಲಾ-ತನ್ನ ನಂಬಿದಭಕ್ತರಲ್ಲಿ ಸ್ನೇಹವನುಳ್ಳ, ಪ್ರಕಟಕೃಪಾಸಮುದ್ರ-ಪ್ರಖ್ಯಾತನಾದ ಕರುಣಾಸಮುದ್ರನೆ, ಸಕಲಸುಖೈಕಕರ್ತೃವಹ-ಸಕಲ-ಸಮಸ್ತವಾದ, ಸುಖ-ಸುಖಂಗಳಿಗೆ, ಏಕ-ಮುಖ್ಯವಾದ, ಕರ್ತೃವಹ-ಅಧಿಪತಿಯಾದ, ನಿನ್ನ, ಒಡಗೂಡಿ-ಸಂಗಡವಿರ್ದು, ವಿರಾಜಿಸುತ್ತಂ-ಒಪ್ಪುತ್ತ, ಆಂ-ನಾನು, ದೈನ್ಯದಿಂದೆ-ದೀನತ್ವದಿಂದ, ಈ ವಿಕಳಮನುಷ್ಯರಂ-ಈ ಮರುಳುಮನುಜರನ್ನು, ಬರಿದೆ-ವ್ಯರ್ಥವಾಗಿ, ಬೇಡಿ-ಯಾಚಿಸಿ, ಲಘುತ್ವಮಂ ಎಯ್ದಿ-ಹಗುರವಾಗಿ,

ಮುದಂಗೆಡಲು-ಸಂತಸಂಗೆಡಲು, ನೋಳ್ಪರೆಪೇಳ್-ನೋಡುವರೆ ? ಹೇಳು,
ಕಟಾ-ಅಯ್ಯಯ್ಯೋ !

ಟಿಪ್ಪಣಿ—ತನ್ನ ನಂಬಿದ ಭಕ್ತರಲ್ಲಿ ವಾತ್ಸಲ್ಯವುಳ್ಳ ದಯಾರಸ ಸಮುದ್ರನೆಂದು ಪ್ರ
ನಾದ ಎಲೈ ಪರಮೇಶ್ವರನೆ, ಸರ್ವಸೌಖ್ಯಗಳನ್ನು ಕೊಡುವುದಕ್ಕೂ, ಅನುಭವಿಸುವು
ಮುಖ್ಯ ಕರ್ತೃವಾಗಿರುವ ನಿನ್ನ ಅನುಚರನಾಗಿದ್ದರೂ ನಾನು ಬಡತನದಿಂದ ನೊಂದು
ಮನುಷ್ಯರ ಬಳಿಗೆ ಹೋಗಿ ವ್ಯರ್ಥವಾಗಿ ಅವರನ್ನು ಬೇಡಿ ಲಾಘವವನ್ನು ಹೊಂದಿ ಕ
ಅದನ್ನು ನೀನು ಸುಮ್ಮನೆ ನೋಡಿಕೊಂಡಿರುತ್ತೀಯಾ ? ಅಯ್ಯೋ ! ಇದಾಗಬಹುದೆ ?

ಕ್ಷೀರಸಮುದ್ರಸನ್ನಿಧಿಯೊಳಿರ್ದ್ದು ಪಿಪಾಂಸಿತನಾಗಿ ಬಾವಿಯಂ |
ಹಾರೆಯ ನಾಂತಗುಳ್ವವನೊಲಾಯ್ತು ಸಮಸ್ತಸುಖೈಕಸಿದ್ಧಿವಿ ||
ಸ್ತಾರಕ ನಪ್ಪ ನಿನ್ನ ನುಪಧಾವಿಸ ದನ್ಯಮನುಷ್ಯಮಾತ್ರಮಂ |
ಹಾರುವ ಬುದ್ಧಿ ಯೆನ್ನ ಪರಮಪ್ರಭುವೇ ಮಹದೈಪುರೀಶ್ವರಾ

ಟೀಕೆ—ಪರಮಪ್ರಭುವೇ-ಎಲೆ ಸಮಸ್ತಜಗದ್ವಲ್ಲಭನೆ, ಸಮಸ್ತಸುಖೈಕ
ವಿಸ್ತಾರಕನಪ್ಪ-ಸಮಸ್ತ-ಸಕಲವಾದ, ಸುಖೈಕ-ಸುಖವೊಂದರ, ಸಿದ್ಧಿ-ಸಿದ್ಧಿ
ವಿಸ್ತಾರಕನಪ್ಪ-ವಿಸ್ತರಿಸುವನಾದಂಥ, ನಿನ್ನ-ನಿನ್ನನು, ಉಪಧಾವಿಸದೆ-
ಅನ್ಯಮನುಷ್ಯಮಾತ್ರಮಂ-ಬೇರಾದ ಮನುಷ್ಯಮಾತ್ರವನು, ಹಾರುವ-
ಡುವ, ಎನ್ನಬುದ್ಧಿ-ಎನ್ನ ವಿವೇಕವು, ಕ್ಷೀರಸಮುದ್ರಸನ್ನಿಧಿಯೊಳ್-ಪಾಲ್ಗಡ
ಯಲ್ಲಿ, ಇರ್ದು, ಪಿಪಾಂಸಿತನಾಗಿ-ನೀರಡಸಿದವನಾಗಿ, ಬಾವಿಯಂ-ಕೊಪ
ಹಾರೆಯನಾಂತು—ಹಾರೆಯಪಿಡಿದು, ಅಗುಳ್ವವನೊಲಾಯ್ತು—ಅಗೆವ
ಬುದ್ಧಿಯಂತಾಯ್ತು.

ಟಿಪ್ಪಣಿ—ಎಲೈ ಮಹಾಪ್ರಭುವೆ, ಸಕಲ ಸೌಖ್ಯವನ್ನೂ ಕೊಡುವುದರಲ್ಲಿ ಮುಖ್ಯ
ವಾದ ನಿನ್ನನ್ನು ನಾನು ಪ್ರಾರ್ಥಿಸದೆ, ಉಳಿದ ಸಾಮಾನ್ಯಮನುಷ್ಯನಾರನ್ನಾದರೂ ಆಸ
ಕೋರಿದರೆ, ಅಂಥ ನನ್ನ ಬುದ್ಧಿಯು, ಹಾಲ್ಗಡಲ ತೀರದಲ್ಲಿ ಕುಳಿತು ನೀರಡಿಕೆಗೊಂಡು,
ಯನ್ನು ಹಿಡಿದು ಬಾವಿಯನ್ನು ತೋಡಲು ಪ್ರಯತ್ನಿಸಿದವನ ಬುದ್ಧಿಗೆ ಸಮನಾಗುವುದಲ್ಲವೆ !

ಬೇಡಿದವರ್ಗ್ಗೆ ಬೇಡಿದ ಪದಾರ್ಥಮ ನೀವುತೆ ನೀನದಾರುವುಂ |
ಬೇಡದ ಭಕ್ತಿಸೌಖ್ಯಪರಿಣಾಮುಪದಸ್ಥಿತಿಯ ಪ್ರಭಾವದಿಂ ||
ದಾಡುತೆ ಪಾಡುತಿರ್ಪ್ಪತುಳಭಕ್ತಿಯ ನೆನ್ನೊ ಳಯತ್ನದಿಂದೆ ಕೈ |
ಗೂಡಿಸಿ ರಕ್ಷಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ

ಟೀಕೆ—ಭೋಪರಮಪ್ರಭುವೇ-ಎಲೈ ಜಗದ್ವಲ್ಲಭನೆ, ನೀಂ-ನೀನು,
ವರ್ಗ್ಗೆ—ಯಾಚಿಸುವರ್ಗೆ, ಬೇಡಿದಪದಾರ್ಥಮಂ—ಇಷ್ಟವಾದ ಪದಾರ್ಥ

ಈವುತೆ-ಕೊಡುತ್ತೆ, ಆದಾರುವುಂ-ಆರಾದೊಡೆಯೂ, ಬೇಡದ-ಯಾಚಿಸದ, ಭಕ್ತಿ ಸೌಖ್ಯಪರಿಣಾಮಪದಸ್ಥಿತಿಯ-ಭಕ್ತಿ-ಶಿವಭಕ್ತಿಯಲ್ಲಿಯ, ಸೌಖ್ಯ-ಆನಂದದ, ಪರಿಣಾಮ-ಅನುಭವದ, ಪದ-ಮಾರ್ಗದ, ಸ್ಥಿತಿಯ-ನಿಲುಕಡೆಯ, ಪ್ರಭಾವದಿಂದೆ-ಸಾಮರ್ಥ್ಯದಿಂದ, ಆಡುತೆ-ಕ್ರೀಡಿಸುತ್ತೆ, ಪಾಡುತೆ-ಗಾನವಂಮಾಡುತೆ, ಇಪ್ಪ-ಇಹಂಥ, ಅತುಳಭಕ್ತಿಯಂ-ಸರಿಯಿಲ್ಲದ ಶಿವಭಕ್ತಿಯನ್ನು, ಎನ್ನೊಳ್-ಎನ್ನಲ್ಲಿ, ಅಯತ್ನದಿಂದೆ-ಅಪ್ರಯಾಸದಿಂದೆ, ಕೈಗೂಡಿಸಿ-ಹಸ್ತಗತಮಂಮಾಡಿ, ರಕ್ಷಿಸಯ್ಯ-ಪಾಲಿಸಯ್ಯ. ||೨೯||

ಟಿಪ್ಪಣಿ—ಎಲೈ ಮಹಾಸ್ವಾಮಿಯೆ ! ಬೇಡಿದವರಿಗೆ ಬೇಡಿದ ವಸ್ತುವನ್ನು ಕೊಡುತ್ತಲೂ, ಮತ್ತಾರೂ ಬೇಡದಿರುವಂಥ ಭಕ್ತಿಸುಖಾನುಭವಮಾರ್ಗವರ್ತನದ ಮಹಿಮೆಯಿಂದ ಕ್ರೀಡಿಸುತ್ತಲೂ ಗಾನಮಾಡುತ್ತಲೂ, ಆನಂದದಿಂದಿರುವಂಥ ಅಸಮಾನವಾದ ಭಕ್ತಿಯನ್ನು ನಿರಾಯಾಸವಾಗಿ ನನಗೆ ಅನುಗ್ರಹಿಸಿ, ಕಾಪಾಡು. ||೨೯||

ಕನಸಿನೊಳಾದೊಡಂ ಮಗನೆ ಬಾ ನಿನಗೀಗತಿ ಯೀಪ್ರಯತ್ನಮೀ |
ಯನು ಇದರಿಂ ದನೂನಘನಸಂಪದಸಿದ್ಧಿ ಯಿದಕ್ಕೆ ಚಿಂತೆ ಬೇ ||
ಡೆನುತೆ ಕರಾಬ್ಜಮಂ ಶಿರದೊಳಿಟ್ಟು ಕೃಪಾಮೃತಸಾರಪೂರಲೋ |
ಚನದೆ ನಿರೀಕ್ಷಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೩೦||

ಟೀಕೆ—ಭೋಪರಮಪ್ರಭುವೇ-ಎಲೆಜಗದ್ವಲ್ಲಭನೆ, ಕನಸಿನೊಳಾದೊಡಂ-ಸ್ವಪ್ನಾವಸ್ಥೆಯಲ್ಲಿಯಾದೊಡೆಯೂ, ಮಗನೆ-ಎಲೆಪುತ್ರನೆ, ಬಾ-ಇತ್ತಬಾ. ನಿನಗೆ-ನಿನಗೋಸುಗ, ಈಗತಿ-ಈಮಾರ್ಗವು, ಈ ಪ್ರಯತ್ನಂ-ಈಉಪಾಯವು, ಈ ಅನು-ಈಕಾರ್ಯ, ಇದರಿಂದೆ-ಇದರದೆಸೆಯಿಂದ, ಅನೂನಘನಸಂಪದಸಿದ್ಧಿ-ಅನೂನ-ಪೂರ್ಣವಾದ, ಘನ-ದೊಡ್ಡಿತ್ತಾದ, ಸಂಪದಸಿದ್ಧಿ-ಒಳ್ಳೆತ್ತಾದ ಸ್ಥಾನದಸಿದ್ಧಿಯು, ಇದಕ್ಕೆ-ಈಯರ್ಥಕ್ಕೆ, ಚಿಂತೆಬೇಡ-ವ್ಯಾಕುಲಬೇಡ, ಎನುತೆ-ಹೀಗೆ ಹೇಳುತ್ತ, ಕರಾಬ್ಜಮಂ-ಹಸ್ತಪದ್ಮಮಂ, ಶಿರದೊಳ್-ಮಸ್ತಕದಲ್ಲಿ, ಇಟ್ಟು-ಇರಿಸಿ, ಕೃಪಾಮೃತಸಾರಪೂರಲೋಚನದ-ಕೃಪಾ-ಕರುಣವೆಂಬ, ಅಮೃತಸಾರ-ಅಮೃತರಸದ, ಪೂರ-ಪ್ರವಾಹವನುಳ್ಳ, ಲೋಚನದೆ-ನೋಟದಿಂದ, ನಿರೀಕ್ಷಿಸಯ್ಯ-ನಿಟ್ಟಿಸಯ್ಯ. ||೩೦||

ಟಿಪ್ಪಣಿ—ಎಲೈ ಜಗದೀಶ್ವರನೆ, ನೀನು ನನ್ನ (ಜಾಗ್ರದವಸ್ಥೆಯಲ್ಲಲ್ಲದೆ ಹೋದರೆ) ಸ್ವಪ್ನಾವಸ್ಥೆಯಲ್ಲಾದರೂ ಗೋಚರಿಸಿ, " ಮಗನೇ ! ಬಾ: ಇದೊ ನಿನಗೆ ಇಂಥ ಗತಿಯು ಪ್ರಾಪ್ತವಾಗುವುದು; ಅದಕ್ಕೆ ಇಂಥ ಉಪಾಯವನ್ನು ಮಾಡು ; ಈ ಕೆಲಸವನ್ನೆಸಗು ; ಅದರಿಂದ ನಿನಗೆ ಸಂಪೂರ್ಣವಾದ ಉತ್ತಮಪದವಿಯು ಸಿದ್ಧಿಸುವುದು ; ಈ ವಿಷಯದಲ್ಲಿ ನೀನು ಚಿಂತೆಪಡಬೇಡ " ಎಂದು ಹೇಳಿ, ನಿನ್ನ ಹಸ್ತಕಮಲವನ್ನು ನನ್ನ ತಲೆಯಮೇಲಿಟ್ಟು, ದಯಾಮೃತರಸದಿಂದ ತುಂಬಿದ ನೋಟದಿಂದ ನೋಡಿ ಅನುಗ್ರಹಿಸುವವನಾಗು. ||೩೦||

ಅಳದಿರು ಕಂದ ನಿನ್ನಭಿಮತೈಕಫಲೋದಯಸೌಖ್ಯಸಿದ್ಧಿಯಂ |
ಸಲೆ ನಿನಗಿತ್ತೆ ನಂಜದಿರು ಚಿಂತಿಸದಿ ರ್ಮನಗುಂದದಿ ರ್ವೃಥಾ ||
ಕಳವಳ ವೇತ ಕಾನಿರಲು ಬೇಡ ಮನೋವ್ಯಥೆ ಯೆಂದು ನೇಹದಿಂ |
ತಲೆದಡವುತ್ತೆ ನೋಡು ಪರಮಪ್ರಭುವೇ ಮಹದೈಪುರೀಶ್ವರಾ ||

ಟೀಕೆ—ಭೋಪರಮಪ್ರಭುವೇ-ಎಲೆಜಗತ್ಕರ್ತನೆ, ಕಂದ-ಎಲೆಮಗನೆ, ... ದಿರು-ರೋದನವಂಮಾಡದಿರು ನಿನ್ನ-ನಿನ್ನ ಸಂಬಂಧವಾದ, ಅಭಿಮತೈಕಫಲೋ... ಸೌಖ್ಯಸಿದ್ಧಿಯಂ-ಅಭಿಮತ-ಇಷ್ಟವಾದ, ಏಕ-ಮುಖ್ಯವಾದ, ಫಲ-ಫಲ... ಉದಯ-ಅಭ್ಯುದಯದಿಂದಾದ, ಸೌಖ್ಯ-ಪರಿಣಾಮದ, ಸಿದ್ಧಿಯಂ-ಸಿದ್ಧಿ... ಸಲೆ-ಚೆನ್ನಾಗಿ, ನಿನಗೆ, ಇತ್ತೆಂ-ಕೊಟ್ಟೆನು, ಅಂಜದಿರು-ಭಯಗೊಳ್ಳದಿರು, ... ದಿರು-ವ್ಯಾಕುಲಿಸದಿರು, ಮನಗುಂದದಿರು ಅಳಿಮನಬೇಡ ಆಂ ಇರಲು-ನಾನಿರು... ವೃಥಾ-ವ್ಯರ್ಥವಾಗಿ, ಕಳವಳವು ಏತಕೆ-ಹಂಬಲಿಸುವುದೇತಕೆ? ಮನೋ... ಮನದನೋವು, ಬೇಡ, ಎಂದು-ಹೀಗೆಂದು, ನೇಹದಿಂ-ಸ್ನೇಹದಿಂದ, ತಲೆದಡ... ಶಿರವನೇವರಿಸುತ್ತ, ನೋಡು-ಈಕ್ಷಿಸು. ||

ಟಿಪ್ಪಣಿ—ಎಲೈ ಮಹಾಪ್ರಭುವೆ ! " ಎಲೆ ಮಗನೆ ! ಅಳಬೇಡ, ಬೇಕಾದ ಫಲವ... ವಿಸುವ ಸೌಖ್ಯದ ಪ್ರಾಪ್ತಿಯನ್ನು ನಿನಗೆ ಕೊಟ್ಟೆನು. ಹೆದರಬೇಡ, ವ್ಯಾಕುಲಪಡಬೇಡ, ... ಗೆಡಬೇಡ, ನಾನಿರುವಾಗ ನೀನು ವ್ಯರ್ಥವಾಗಿ ಹಂಬಲಿಸುವುದೇಕೆ? ಮನೋವ್ಯಥೆ ಸಾಕು, ... ಎಂದು ಹೇಳಿ ಅನುರಾಗದಿಂದ ನನ್ನ ತಲೆಯನ್ನು ಸವರುತ್ತ ಕರುಣೆಯಿಂದ ನೋಡು. ||

ಸಲುಗೆಯೊ ಳೆಂದೆನ್ನೈಸೆ ಬರಿ ದಿಲ್ಲದು ದೆಲ್ಲಮ ನುಂಟುಮಾಡಿ ನೀಂ |
ಸುಲಭತೆಯಿಂ ತೊದಲ್ನುಡಿಯ ನಾಲಿಸುವಲ್ಲಿ ವಿನೋದಶೀಲನೆಂ ||
ದಲಸದೆ ಸಾಕದಂತಿರಲಿ ನಿನ್ನಪದಾಂಬುಜಭಕ್ತಿಭಾಗ್ಯನಿ |
ಶ್ಚಲಸುಖಮಂ ಕುಡಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||

ಟೀಕೆ—ಭೋಪರಮಪ್ರಭುವೇ-ಎಲೆ ವಿಶ್ವವಲ್ಲಭನೆ, ನೀಂ-ನೀನು, ಸು... ತೆಯಿಂ-ಸುಲಭತ್ವದಿಂದೆ, ತೊದಲ್ನುಡಿಯಂ-ತೊದಲುನುಡಿಯನ್ನು, ಆಲಿಸು... ಕೇಳುವಲ್ಲಿ, ವಿನೋದಶೀಲನೆಂದು—ಪ್ರೀತಿಯುಳ್ಳವನೆಂದು, ಅಲಸದೆ—ಬೇಸ... ಬರಿದೆ-ಸುಮ್ಮನೆ, ಇಲ್ಲದುದೆಲ್ಲಮಂ-ಇಲ್ಲದ ಗುಣವನೆಲ್ಲವನೂ, ಉಂಟುಮಾ... ನಿನ್ನೊಳುಳ್ಳುದನ್ನಾಗಿ ಮಾಡಿ, ಸಲುಗೆಯೊಳ್-ಸಲುಗೆಯಲ್ಲಿ, ಎಂದೆನ್ನೈಸೆ... ನಷ್ಟೇ, ಅದುಸಾಕು-ಆ ಮಾತನ್ನು ಬಿಡು, ಅಂತಿರಲಿ-ಹಾಂಗಿರಲಿ, ನಿನ್ನ-ನಿನ್ನ ಸಂ... ಬಂಧವಾದ, ಪದಾಂಬುಜಭಕ್ತಿಭಾಗ್ಯನಿಶ್ಚಲಸುಖಮಂ-ಪದಾಂಬುಜ-ಪಾದಪ...

ಗಳಲ್ಲಿಯ, ಭಕ್ತಿಭಾಗ್ಯ-ಭಕ್ತಿಸಂಪತ್ತಿನಿಂದಾದ, ನಿಶ್ಚಲ-ಚಲನೆಯಿಲ್ಲದ, ಸುಖ ಮಂ-ಪರಿಣಾಮವನು, ಕುಡಯ್ಯ-ಪಾಲಿಸಯ್ಯ. ||೩೨||

ಟಿಪ್ಪಣಿ—ಎಲೈಜಗತ್ಪತಿಯೆ, ನೀನು ತೊದಲ್ಮಾತನ್ನು ಕೇಳುವುದರಲ್ಲಿ ಪ್ರೀತಿಯುಳ್ಳವನೆಂಬು ದನ್ನು ತಿಳಿದು ನಾನು ಸಲುಗೆಯಿಂದ ಇಲ್ಲದ ಗುಣವನ್ನೆಲ್ಲಾ ನಿನ್ನಲ್ಲಿ ಉಂಟುಮಾಡಿ ವ್ಯರ್ಥವಾಗಿ ಇಷ್ಟನ್ನೆಲ್ಲಾ ಬೇಸರಿಲ್ಲದೆ ಆಡಿದೆನು. ಆ ಮಾತು ಸಾಕು. ಹಾಗಿರಲಿ, ನಿನ್ನ ಪಾದಕಮಲದ ಭಕ್ತಿ ಯೆಂಬ ಸ್ಥಿರಸಂಪತ್ತಿನ ಸೌಖ್ಯವನ್ನು ನನಗೆ ಅನುಗ್ರಹಿಸು. ||೩೨||

ಪುಟ್ಟಿದು ದಂಜ ದಲ್ಲದೊಡೆ ಮುಟ್ಟಿದು ದಂಜ ದೆನಿಪ್ಪ ದೊಂದುನಾ |
ಣ್ಣುಟ್ಟಿಯು ಗಾದೆ ಗೊಂದೊರೆ ವಿಶೇಷ ಮದೆಂತೆನೆ ನಿನ್ನ ತೇಜದಿಂ ||
ಪುಟ್ಟಿ ಮಗುಳ್ದು ನಿನ್ನುವನೆ ಮುಟ್ಟಿದಕಾರಣ ಮಂಜೆ ನಂಜೆನಾಂ |
ನೆಟ್ಟನೆ ಧೀರನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೩೩||

ಟೀಕೆ—ಭೋಪರಮಪ್ರಭುವೇ-ಎಲೆ ವಿಶ್ವಾಧಿನಾಥನೆ, ಪುಟ್ಟಿದುದು-ಹುಟ್ಟಿ ದಂತಹುದು, ಅಂಜದು-ಬೆದರದು, ಅಲ್ಲದೊಡೆ-ಅಲ್ಲದಿರ್ದೊಡೆ, ಮುಟ್ಟಿದುದು-ಸೋಂ ಕಿದುದು, ಅಂಜದು-ಹೆದರದು, ಎನಿಪ್ಪ-ಹೀಗೆಂಬ, ಒಂದುನಾಣ್ಣುಟ್ಟಿಯಗಾದೆಗೆ-ಒಂದುನಾಡಾಡಿಯಮಾತಿಗೆ, ಒಂದೊರೆ-ಒಂದುಬಣ್ಣವು, ವಿಶೇಷಂ-ಘನವು, ಅದು ಎಂತೆನೆ-ಅದೆಂತೆಂದೊಡೆ, ಆಂ-ಆನು, ನಿನ್ನತೇಜದಿಂ-ನಿನ್ನಪ್ರಭಾವದಿಂದ, ಪುಟ್ಟಿ-ಉದಯವಾಗಿ, ಮಗುಳ್ದು-ಮರಳಿ, ನಿನ್ನುವನೆ-ನಿನ್ನನೇ, ಮುಟ್ಟಿದಕಾರಣಂ-ಸೋಂ ಕಿದನಿಮಿತ್ತವಾಗಿ, ಅಂಜೆನಂಜೆಂ-ಹೆದರೆ ಹೆದರೆನು, ನೆಟ್ಟನೆ-ಚೆನ್ನಾಗಿ, ಧೀರನಯ್ಯ-ಪರಾಕ್ರಮಿಯಯ್ಯ. ||೩೩||

ಟಿಪ್ಪಣಿ—ಎಲೈ ಜಗದೀಶನೆ, ಲೋಕದಲ್ಲಿ " ತನ್ನಲ್ಲಿ ಹುಟ್ಟಿದುದು ತನಗೆ ಅಂಜುವುದಿಲ್ಲ; ತನ್ನನ್ನು ಮುಟ್ಟಿದುದೂ ತನಗೆ ಅಂಜುವುದಿಲ್ಲ " ಎಂಬ ಒಂದುಗಾದೆಯ ಮಾತುಂಟು. ನನ್ನ ವಿಷಯವು ಆ ಗಾದೆಯಮಾತಿಗಿಂತಲೂ ಒಂದು ಬಣ್ಣವು ಹೆಚ್ಚಾಗಿಯೇ ಇರುವುದು. ಹೇಗೆಂದರೆ:- ನಾನು ನಿನ್ನ ಚೈತನ್ಯದಿಂದಲೇ ಹುಟ್ಟಿದವನು. ಗುರುವಿನ ಅನುಗ್ರಹದಿಂದ ನಿನ್ನನ್ನು ಮುಟ್ಟಿರು ವೆನು. (ಲಿಂಗಾಂಗಸಂಗಿಯಾಗಿರುವೆನು) ಈ ಕಾರಣದಿಂದ ನಾನು ನಿನಗೆ ಹೆದರದ ಧೀರನಾಗಿ ಸಲು ಗೆಯಿಂದ ಇಷ್ಟುಮಾತನ್ನಾಡುತ್ತಿರುವೆನೆಂದು ಭಾವ. ||೩೩||

ಸಲೆ ಮಮಕೃ ತ್ಯಹಂಕೃತಿ ವಿಕೃತ್ಯವಗಾಢವಿಮೂಢಲೌಕಿಕ |
ಸ್ಥಳದೊ ಳಮದ್ದುರ್ಧ ಸರ್ವವಿಷಯಂಗಳೊ ಳಾ ನೆನಗೆಂಬ ಮೋಹದಿಂ ||
ಚಲಿಸಿ ವೃಥಾಭಿಮಾನಭರಭಾರಕೆ ಬಿರ್ಬ್ರನೆ ಬೀಗಿ ಸಾಯದಂ |
ತೆಲೆಪರಿ ರಕ್ಷಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೩೪||

ಟೀಕೆ—ಎಲೆ ಪರಮಪ್ರಭುವೇ-ಎಲೆ ಜಗದೀಶ್ವರನೆ, ಸಲೆ-ಚೆನ್ನಾಗಿ, ಮಮ ಕೃತ್ಯಹಂಕೃತಿ ವಿಕೃತ್ಯವಗಾಢ ವಿಮೂಢಲೌಕಿಕಸ್ಥಳದೊಳ್—ಮಮಕೃತಿ—ಮಮ

ಕಾರವು, ಅಹಂಕೃತಿ–ಅಹಂಕಾರವು, ವಿಕೃತಿ–ವಿಕಾರವು, ಇವುಗಳಿಂದ ಅವಗಾ
ಢವಾದ, ವಿಮೂಢ–ಅಜ್ಞಾನಸ್ವರೂಪವಾದ, ಲೌಕಿಕಸ್ಥಳದೊಳ್–ಮಾಯಾ
ಪ್ರಪಂಚದಲ್ಲಿ, ಅಮರ್ದ್ದು–ಪೊರ್ದುಗೆಯಾಗಿ, ಸರ್ವವಿಷಯಂಗಳೊಳ್–ಎಲ್ಲಾ ವಿ
ಯಂಗಳಲ್ಲಿ, ಆಂ–ಆನು, ಎನಗೆ–ಅವು ನನಗೆ, ಎಂಬ–ಹೀಗೆಂಬ, ಮೋಹದಿಂ–ಅಜ್ಞಾ
ನದಿಂದ, ಚಲಿಸಿ–ವ್ಯಾಕುಲಿತನಾಗಿ, ವೃಥಾ–ವ್ಯರ್ಥವಾಗಿ, ಅಭಿಮಾನಭರಭಾರಕ್ಕೆ
ಅಹಂಕಾರದ ಮಹಾಭಾರಕ್ಕೆ, ಬಿರ್ರನೆ–ಬೆಬ್ಬನೆ, ಬೀಗಿ–ಬೆರತು, ಸಾಯದಿ
ಸಾಯದಹಾಂಗೆ, ಪರಿರಕ್ಷಿಸಯ್ಯ–ಚೆನ್ನಾಗಿ ರಕ್ಷಿಸಯ್ಯ. ||೩೪||

ಟಿಪ್ಪಣಿ—ಎಲೈಸ್ವಾಮಿಯೆ, ನಾನು ಮಮಕಾರ ಅಹಂಕಾರಗಳಿಂದ ತುಂಬಿ ಅಜ್ಞಾನಮಯ
ವಾಗಿರುವ ಮಾಯಾಪ್ರಪಂಚದಲ್ಲಿ ಸಿಲ್ಕಿ, ಸಕಲ ವಿಷಯಗಳಲ್ಲೂ ನಾನು ನನ್ನದು ಎಂಬ ಮೋಹ
ವುಳ್ಳವನಾಗಿ ತೊಳಲಿ, ವ್ಯರ್ಥವಾದ ಮಹಾದುರಭಿಮಾನದಲ್ಲಿ ಬಿದ್ದು ಬಿರ್ರನೆ ಬೀಗಿ ಸಾಯದಂತೆ
ಮಾಡಿ ನನ್ನನ್ನು ಸಂರಕ್ಷಿಸು. ||೩೪||

ಇದರ ವಿಶೇಷಮೇ ನಿದರ ದೊಡ್ಡಿತದೇ ನೊಳಬೊಳ್ಳೆಯಾದ ವೇ |
ಷದ ಬಲು ಹೇನಿದಕ್ಕೆ ಹೊರಹಂಚೆಯು ಲೇನಹು ದೇನು ಮಾಗದಾ ||
ಗದು ಬಲುಕಾಡಬೇಡ ನಿಜಭಕ್ತಿಯ ನಿತ್ತು ಭವತ್ಪ್ರಸನ್ನತಾ |
ಸದನದೊ ಳಿಂಬಿಡಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೩೫||

ಟೀಕೆ—ಭೋಪರಮಪ್ರಭುವೇ–ಎಲೆ ಜಗತ್ಕರ್ತನೆ, ಇದರ–ಈ ಬಾಹ್ಯಪ್ರಪಂ
ಚದಲ್ಲಿ, ವಿಶೇಷಮೇಂ–ಹೆಚ್ಚಿಗೆ ಏನು ? ಇದರ, ದೊಡ್ಡಿತು ಅದೇಂ–ಪೆರ್ಮೆ
ತಾನೇನು ? ಒಳಬೊಳ್ಳೆಯಾದ–ಒಳಪೊಳ್ಳಾದ, ವೇಷದ–ಲಾಂಛನದ, ಬಲುಹೇಂ–
ಬಲ್ಮೆತಾನೇನು ? ಇದಕ್ಕೆ ಹೊರಹಂಚೆಯಲಿ–ಬಾಹ್ಯವೇಷದ ಬಣ್ಣದಲ್ಲಿ, ಏನಹುದು–
ಏನಾಗುವುದು ? ಏನುಂ–ಆವುದೂ, ಆಗದು ಆಗದು–ದೊರೆಯದು ದೊರೆಯದು,
ಬಿಡು–ವಿಸರ್ಜಿಸು, ಕಾಡಬೇಡ–ಆಯಾಸಗೊಳಿಸಬೇಡ, ನಿಜಭಕ್ತಿಯಂ–ಸಹಜಭಕ್ತಿ
ಯನ್ನು, ಇತ್ತು–ಕೊಟ್ಟು, ಭವತ್ಪ್ರಸನ್ನತಾಸದನದೊಳ್–ಭವತ್–ನಿನ್ನ, ಪ್ರಸ
ನ್ನತಾ–ಅನುಗ್ರಹವೆಂಬ, ಸದನದೊಳ್–ಮಂಟಪದಲ್ಲಿ, ಇಂಬಿಡಯ್ಯ–ಇಂಬುಗೊಳಿ
ಸಯ್ಯ. ||೩೫||

ಟಿಪ್ಪಣಿ—ಎಲೈ ಜಗತ್ಕರ್ತನೆ, ಈ ಬಾಹ್ಯಮಾಯಾಪ್ರಪಂಚದಲ್ಲಿ ಅಪೂರ್ವಾಂಶವೇನಿರುವುದು
ಇದರ ಹೆಚ್ಚಿಗೆಯೇನು ? ಒಳಗೆ ಸತ್ವವಿಲ್ಲದೆ ನಿಸ್ಸಾರವಾಗಿ ಮೇಲೆ ವೇಷಮಾತ್ರದಿಂ ಮನೋಹರ
ವಾಗಿರುವ ಈ ಪ್ರಪಂಚದ ಶಕ್ತಿಯು ಎಷ್ಟುಮಾತ್ರದುದು ? ಹೊರಡಬ್ಬಿನ ಇದರ ಬಣ್ಣದಿಂದೇ
ನಾಗುವುದು ? ಈ ಮಾಯಿಕ ಪ್ರಪಂಚದಿಂದ ಯಾವ ಇಷ್ಟಾರ್ಥವೂ ಆಗುವುದಿಲ್ಲ. ಆದರ ಸುದ್ದಿ
ಯನ್ನು ಬಿಡು. ವ್ಯರ್ಥವಾಗಿ ನನ್ನನ್ನು ಕಾಡಬೇಡ. ನಿನ್ನ ಭಕ್ತಿಯನ್ನು ನನಗೆ ಕೊಟ್ಟು, ನಿನ್ನ
ಅನುಗ್ರಹವೆಂಬ ಮಂಟಪದಲ್ಲಿ ನನ್ನನ್ನು ಸುಖಿಸು. ||೩೫||

ಬಹುವಿಧದೋಷದುಷ್ಟತಮಮಾದೊಡ ಮಾತ್ಮಶರೀರ ಮಾತ್ಮನಿ |
ಗ್ರಹಕರಮಾಗಿ ತೋರದೆ ಗುಣಾಧಿಕಮಾಗಿಯೆ ತೋರುವಂದದಿಂ ||
ಸಹಜಶರೀರಮಾಗೆ ನಿನ ಗಕ್ಕಟ ನಿನ್ನಶರೀರ ಭಕ್ತಸಂ |
ಸ್ಪೃಹ ನಿಜಭಕ್ತಕಾಯ ಪರಮಪ್ರಭುವೇ ಮಹದೈಪುರೀಶ್ವರಾ ||೩೬||

ಟೀಕೆ—ನಿಜಭಕ್ತಕಾಯ-ಭಕ್ತರದೇಹವೇ ತನ್ನದೇಹವಾಗುಳ್ಳಾತನೆ, ಆತ್ಮಶರೀರಂ-ಎನ್ನಶರೀರವು, ಬಹುವಿಧದೋಷದುಷ್ಟತಮಮಾದೊಡಂ-ಬಹುವಿಧ-ಹಲವುತೆರನಾದ, ದೋಷ-ದೋಷಂಗಳಿಂದ, ದುಷ್ಟತಮಮಾದೊಡಂ-ಅತ್ಯಂತ ದುಷ್ಟವಾದೊಡೆಯೂ, ಆತ್ಮನಿಗ್ರಹಕರಮಾಗಿ-ತನಗೆ ನಿಗ್ರಹಮಾಡುವುದಾಗಿ, ತೋರದೆ-ಕಾಣಿಸದೆ, ಗುಣಾಧಿಕಮಾಗಿಯೆ-ಸದ್ಗುಣಗಳಿಂದಧಿಕಮಾಗಿಯೇ, ತೋರುವಂದದೆ-ಕಾಣಿಸುವಹಾಂಗೆ, ಅಕ್ಕಟಾ-ಅಯ್ಯೋ, ನಿನಗೆ-ಎಲೆ ಶಿವನೇ ನಿನಗೆ, ಸಹಜಶರೀರಮಾಗೆ-ಸಹಜವಾದ ಶರೀರವಾಗಲಾಗಿ, ನಿನ್ನಶರೀರ-ನಿನ್ನದೇಹವು, ಭಕ್ತಸಂಸ್ಪೃಹ-ಭಕ್ತರಿಚ್ಛೆಯನುಳ್ಳುದು (ನಿನ್ನದೇಹವೇ ಭಕ್ತರದೇಹವೆಂಬುದರ್ಥಂ). ||೩೬||

ಟಿಪ್ಪಣಿ—ಎಲೈ ಭಕ್ತದೇಹಿಯಾದ ಪರಮೇಶ್ವರನೆ, ಲೋಕದಲ್ಲಿ ತನ್ನ ಶರೀರವು ದೋಷದಿಂದ ತುಂಬಿ ಅತ್ಯಂತ ದುಷ್ಟವಾದುದಾಗಿದ್ದರೂ, ಅದು ತನಗೆ ಅಹಿತವಾಗಿ ತೋರದೆ ಸದ್ಗುಣಾಢ್ಯವಾಗಿಯೇ ತೋರುವಂತೆ, ಭಕ್ತನೇ ನಿನ್ನ ಸಹಜವಾದ ಶರೀರವಾಗಿರುವುದರಿಂದ ಆ ಭಕ್ತನಲ್ಲಿ ಏನು ಸಾರವಿಲ್ಲದಿದ್ದರೂ ಅವನನ್ನು ಗುಣಿಯೆಂತಲೇ ತಿಳಿದು ನೀನು ಅನುಗ್ರಹಿಸುವವನಾಗಬೇಕು. ನಿನ್ನ ಲಿಂಗರೂಪಶರೀರವಾದರೊ, ಭಕ್ತರಲ್ಲಿಚ್ಛೆಯಿಂದ ರಾರಾಜಿಸುತ್ತಿರುವುದು (ಈ ಅರ್ಥದಲ್ಲಿ--"ಯಾತೇ ರುದ್ರಶಿವಾತನೂರಘೋರಾಽಪಾಪಕಾಶಿನೀ" ಎಂದು ವೇದವಚನವುಂಟು). ||೩೬||

ಹೊರಗೊಳಗೆನ್ನದೆನ್ನ ಕರಣಂಗಳೊಳೆಲ್ಲಿಯುಂ ಮಿರ್ಪನಿನ್ನನಾ |
ನರಿವೊಡುಪಾಯ ವಾವುದು ಮನಂ ಮನನಂ ಮನನೀಯಮೆಂಬ ಮೂ ||
ರರಮಯ ಮೈದೆ ನಿನ್ನಮಯ ಮಾಮಯ ಮೆನ್ನಮಯಂಪರಸ್ಪರಂ |
ತೆರ ಹಿನಿತಿಲ್ಲ ದೇವ ಪರಮಪ್ರಭುವೇ ಮಹದೈಪುರೀಶ್ವರಾ ||೩೭||

ಟೀಕೆ—ದೇವ-ಎಲೆ ಸ್ವಯಂಪ್ರಕಾಶರೂಪನೆ, ಹೊರಗು ಒಳಗು ಎನ್ನದೆ-ಬಾಹ್ಯಾಭ್ಯಂತರವೆನ್ನದೆ, ಎನ್ನಕರಣಂಗಳೊಳ್ ಎಲ್ಲಿಯುಂ-ಎನ್ನಬುದ್ಧ್ಯಾದಿಕರಣಂಗಳೊಳೆಲ್ಲಿಯೂ, ಇರ್ಪ-ಪರಿಪೂರ್ಣವಾಗಿರ್ಪ, ನಿನ್ನಂ-ನಿನ್ನನು, ಆಂಅರಿವೊಡೆ-ನಾನು ತಿಳಿವೊಡೆ, ಉಪಾಯವಾವುದು-ಸಾಧನವಾವುದು ? ಮನಂ-ಮನವು, ಮನನಂ-ನೆನೆವುದು, ಮನನೀಯಂ-ನೆನೆಯಲ್ತಕ್ಕವಸ್ತುವು,ಎಂಬ-ಹೀಗೆಂಬ, ಮೂರರಮಯಂ-ತ್ರಿಪುಟಸ್ವರೂಪವು, ಐದೆ-ಚೆನ್ನಾಗಿ, ನಿನ್ನಮಯಂ-ನಿನ್ನಸ್ವರೂಪವು,

ಆಮಯಂ-ಆಸ್ವರೂಪವೇ, ಎನ್ನಮಯಂ-ಎನ್ನ ಸ್ವರೂಪವು, ಪರಸ್ಪರಂ-ಅನ್ಯೋನ್ಯ ವಾಗಿ, ತೆರಹು-ಅವಕಾಶವು, ಇನಿತಿಲ್ಲ-ಕಿಂಚಿತ್ತೂ ಇಲ್ಲ. ||೩೭||

ಟಿಪ್ಪಣಿ—ಎಲೈ ಸರ್ವೇಶನೆ ! ನನ್ನ ಸಕಲೇಂದ್ರಿಯಗಳಲ್ಲೂ ಒಳಗೆ ಹೊರಗೆಂಬ ಭೇದವಿಲ್ಲದೆ ಸರ್ವತ್ರ ವ್ಯಾಪಿಸಿಕೊಂಡಿರುವ ನಿನ್ನನ್ನು ನಾನು ಬೇರೆಯಾಗಿ ಕಾಣುವುದಕ್ಕೆ ಉಪಾಯವೇನುಂಟು? ಜ್ಞಾತೃ ಜ್ಞಾನ ಜ್ಞೇಯವೆಂಬ ಈಮೂರೂ ನೀನೇ ಆಗಿರುವೆ. ಅಂಥನೀನೇ ನಾನಾಗಿರುವನು, ಹೀಗೆ ಪರಸ್ಪರ ಸ್ವಲ್ಪವೂ ಬಿಡುವಿಲ್ಲದೆ ಇರುತ್ತಿರುವುದು. ||೩೭||

ಅವತಾರಿಕೆ—ಇನ್ನು ಶಿವಾನುಗ್ರಹವೇ ಭಕ್ತಿಗೆ ಕಾರಣವೆಂದು ಪೇಳುತ್ತಿರ್ದಪಂ:—

ಅರಿದಪೆನೆಂಬವಂ ಗರಿಯಬಾರದು ನಿನ್ನ ನಿಜಪ್ರಯತ್ನದಿಂ |
ದರಿದಪೆ ನೆನ್ನದಂ ಗರಿಯಬರ್ಪುದು ನೀಂ ಕೃಪೆಮಾಡೆ ಚೋದ್ಯಮೇ ||
ನರಸುವವಂಗೆ ಸಿಲ್ಕದ ನಿಧಾನ ಮಯತ್ನಪರಂಗೆ ಭಾಗ್ಯದಿಂ |
ದರಸದೆ ಸಿಲ್ಕುವಂತೆ ಪರಮಪ್ರಭುವೇ ಮಹದೈಪುರೀಶ್ವರಾ ||೩೮||

ಟೀಕೆ—ನಿನ್ನ ನಿಜ-ನಿನ್ನ ಸ್ವರೂಪು, ಅರಿದಪೆನೆಂಬವಂಗೆ-ತಿಳಿದಪೆನೆಂಬಾತಂಗೆ, ಅರಿಯಬಾರದು-ತಿಳಿಯಬಾರದು, ಪ್ರಯತ್ನದಿಂದೆ-ಉಪಾಯದಿಂದ, ಅರಿದಪೆಂ ಎನ್ನದಂಗೆ-ತಿಳಿದಪೆನು ಎನ್ನದಾತಂಗೆ, ನೀಂಕೃಪೆಮಾಡೆ-ನೀನು ಕರುಣಿಸಲಾಗಿ, ಅರಿಯಬರ್ಪುದು-ತಿಳಿಯಬರುವುದು, ಚೋದ್ಯಮೆ-ಅಚ್ಚರಿಯೆ ? ಅಲ್ಲ. ಅದೆಂತೆಂದೊಡೆ- ಅರಸುವವಂಗೆ-ಬೆದಕುತ್ತಿರ್ದಾತಂಗೆ, ಸಿಲ್ಕದ-ಕಾಣಿಸದ, ನಿಧಾನಂ-ದ್ರವ್ಯವು, ಅಯತ್ನಪರಂಗೆ-ಯತ್ನಮಂಮಾಡದಾತಂಗೆ, ಭಾಗ್ಯದಿಂದೆ-ಆತನ ಅದೃಷ್ಟದಿಂದ, ಅರಸದೆ-ಬೆದಕದೆ, ಸಿಲ್ಕುವಂತೆ-ನಿಧಾನಂಕೈಸೇರುವಹಾಂಗೆ.

ಟಿಪ್ಪಣಿ—ಪ್ರಯತ್ನಪೂರ್ವಕವಾಗಿ ನಿಧಿಯನ್ನು ದೊರಕಿಸಿಕೊಳ್ಳುತ್ತೇನೆಂದು ಯತ್ನಿಸಿ ಕಡ ಕುವವನಿಗೆ ಅದು ದೊರೆಯದೆ, ಏನೊಂದೂ ಪ್ರಯತ್ನವಿಲ್ಲದಿರುವವನಿಗೆ ಅದೃಷ್ಟವಶಾತ್ ತಾನಾಗಿ ನಿಧಿಯು ದೊರೆಯುವಂತೆ, ನಾನು ಅರಿಯುತ್ತೇನೆಂದು ಅಭಿಮಾನಗೊಳ್ಳುವವನಿಗೆ ನಿನ್ನ ಸ್ವರೂಪ ಸಾಕ್ಷಾತ್ಕಾರವಾಗದು. ಏನೊಂದು ಪ್ರಯತ್ನವಿಲ್ಲದವನಿಗಾದರೂ ನಿನ್ನ ಕೃಪೆಯುಂಟಾದರೆ ನಿನ್ನ ಸಾಕ್ಷಾತ್ಕಾರವಾಗುವುದು. ಇದರಲ್ಲಿ ಆಶ್ಚರ್ಯವೇನುಂಟು (ನಿನ್ನನುಗ್ರಹವು ಮುಖ್ಯವೇ ಹೊರತು ಅದಿಲ್ಲದ ಪೌರುಷಯತ್ನವು ಸಫಲವಾಗುವುದಿಲ್ಲವೆಂದು ಭಾವ) ? ||೩೮||

ಬಳಸಿಯು ಮುಂಡು ಮುಟ್ಟು ಮಭಿಮಾನಿಸಿಯುಂ ವಿಷಯಂಗಳೊಳ್ಸಮು |
ಜ್ಜ್ವಳಿತಭವತ್ಪ್ರಸಾದ ಪರಿಪೂರ್ಣನಿರರ್ಗಳಭಕ್ತಿಯೋಗಸಂ ||
ಮಿಳಿತಶುಭಾಶುಭದ್ವಿವಿಧಕರ್ಮಸುನಿರ್ಮಳಚೇಷ್ಟನೊಪ್ಪುವಂ |
ಪ್ರಳಯವಿದೂರನಾಗಿ ಪರಮಪ್ರಭುವೇ ಮಹದೈಪುರೀಶ್ವರಾ ||೩೯||

ಟೀಕೆ—ಸಮುಜ್ಜ್ವಳಿತ.......ಚೇಷ್ಟಂ-ಸಮುಜ್ಜ್ವಳಿತ-ಬೆಳಗುತ್ತಿರ್ಪ, ಭವತ್ಪ್ರಸಾದ-ನಿನ್ನನುಗ್ರಹದಿಂ, ಪರಿಪೂರ್ಣ-ತುಂಬಲ್ಪಡೆದ, ನಿರರ್ಗಳ-ಎಡೆತಡೆಯ

ಲ್ಲದ, ಭಕ್ತಿಯೋಗ-ಭಕ್ತಿಯೋಗದೊಡನೆ, ಸಂಮಿಳಿತ-ಕೂಡಿದಂಥ, ಶುಭಾಶುಭ-ಪುಣ್ಯಪಾಪವೆಂಬ, ದ್ವಿವಿಧ-ಎರಡುತೆರನಾದ, ಕರ್ಮ-ಕರ್ಮದಲ್ಲಿ, ಸುನಿರ್ಮಳ-ಅತ್ಯಂತಶುದ್ಧವಾದ, ಚೇಷ್ಟಂ-ವ್ಯಾಪಾರವುಳ್ಳಾತನು, ವಿಷಯಂಗಳೊಳ್-ಶಬ್ದಾದಿ ವಿಷಯಂಗಳಲ್ಲಿ, ಬಳಸಿಯುಂ-ಸಂಚರಿಸಿಯೂ, ಉಂಡು-ಭೋಗಿಸಿ, ಉಟ್ಟು-ಹೊದೆದು, ಅಭಿಮಾನಿಸಿಯುಂ-ಎನ್ನದೆಂದುಮಮಕರಿಸಿಯೂ, ಪ್ರಳಯವಿದೂರ ನಾಗಿ-ಕೇಡಿಲ್ಲದವನಾಗಿ, ಒಪ್ಪುವಂ-ವಿರಾಜಿಸುವನು, ||೩೯||

ಟಿಪ್ಪಣಿ—ನಿನ್ನನುಗ್ರಹದಿಂದ ಪರಿಪೂರ್ಣವಾದ ಯಾವುದೊಂದರ ತಡೆಯೂ ಇಲ್ಲದ ಭಕ್ತಿ ಯೋಗದಲ್ಲಿ ಕೂಡಿ ಶುಭಾಶುಭಕರ್ಮಲೇಪವಿಲ್ಲದೆ ಶುದ್ಧವಾದ ನಡತೆಯುಳ್ಳ ಶರಣನು ಇಂದ್ರಿಯ ವಿಷಯಗಳಲ್ಲಿ ಸುಳಿದಾಡುತ್ತಿದ್ದರೂ, ಲೌಕಿಕರಂತೆ, ಉಂಡು ಉಟ್ಟು ನನಗೆ ನನ್ನದು ಎಂದು ಅಭಿಮಾನಿಸುತ್ತಿದ್ದರೂ ಸಹ ಅವುಗಳ ಬಂಧಕ್ಕೆ ಸಿಲ್ಕದೆ ಜೀವನ್ಮುಕ್ತನಾಗಿರುತ್ತಿರುವನು. ||೩೯||

ತುಂಬಿಯ ಶಕ್ತಿಪಾತಗುಣದಿಂ ಪುಳು ತುಂಬಿಯದಾಯ್ತೊ ತನ್ನಭಾ |
ವಂಬಲಿದಾಯ್ತೊ ತುಂಬಿ ಪುಳುವಂ ಪಿಡಿದೊಯ್ಯುದೊ ತಾನೆಪೋದುದೋ ||
ಬೆಂಬಳಿಗೊಂಡು ಪೇಳ್ವೊಡೆ ಯನುಗ್ರಹಶಕ್ತಿಯೆಮುಕ್ತಿಕಾರಣಂ |
ನಂಬುಗೆ ಯೆಂಬುದೇನು ಪರಮಪ್ರಭುವೇ ಮಹದೈಪುರೀಶ್ವರಾ ||೪೦||

ಟೀಕೆ—ಪುಳು-ಕೀಟವು, ತುಂಬಿಯ-ಭ್ರಮರದ, ಶಕ್ತಿಪಾತಗುಣದಿಂ-ಸಾಮರ್ಥ್ಯವ ನಿಲಿಸುವಗುಣದಿಂದ, ತುಂಬಿ ಅದಾಯ್ತೊ-ತುಂಬಿಯೇತಾನುದುದೊ ? ತನ್ನ ಭಾವಂ-ಆಪುಳುವು ತನ್ನಭಾವವೇ, ಬಲಿದು ಆಯ್ತೊ-ಬಲಿದು ಭ್ರಮರವಾದುದೊ ? ತುಂಬಿ-ಭ್ರಮರವು, ಪುಳುವಂ-ಹುಳುವನ್ನು, ಪಿಡಿದುಒಯ್ದುದೊ-ಪಿಡಿದುಕೊಂಡು ಹೋದುದೊ ? ತಾನೆಪೋದುದೋ-ಪುಳುತಾನೇಪೋಯಿತೋ, ಬೆಂಬಳಿಗೊಂಡು-ತರಂಗೊಂಡು, ಪೇಳ್ವೊಡೆ-ಹೇಳುವೊಡೆ, ಅನುಗ್ರಹಶಕ್ತಿಯೆ-ಎಲೆಶಿವನೆ ನಿನ್ನನುಗ್ರಹ ಸಾಮರ್ಥ್ಯವೇ, ಮುಕ್ತಿಕಾರಣಂ-ಮೋಕ್ಷಕ್ಕೆ ಕಾರಣವು, ನಂಬುಗೆಯೆಂಬುದು-ಎನ್ನ ವಿಶ್ವಾಸವೆಂಬುದು, ಏನು-ಆವುದು ? ||೪೦||

ಟಿಪ್ಪಣಿ—ಹುಳುವಿನಲ್ಲಿ ಭ್ರಮರವು ತನ್ನ ಶಕ್ತಿಯನ್ನು ನಿಲ್ಲಿಸುವ ಗುಣದಿಂದ ಹುಳುವು ಭ್ರಮರವಾಯಿತೊ ? ಅಥವಾ ಆ ಹುಳುವಿನಲ್ಲಿ ಅದರ ಭಾವವೇ ಬಲಿತು ತನ್ನಷ್ಟಿಗೆತಾನೇ ಭ್ರಮರ ವಾಯಿತೊ ? ಭ್ರಮರವು ತಾನಾಗಿ ಬಂದು ಹುಳುವನ್ನು ತೆಗೆದುಕೊಂಡು ಹೋಯಿತೊ ? ಅಥವಾ ಹುಳುವೇ ಭ್ರಮರವಿದ್ದಲ್ಲಿಗೆ ಹೋಯಿತೊ ? ಭ್ರಮರವು ತಾನಾಗಿ ಬಂದು ಹುಳುವನ್ನು ತೆಗೆದು ಕೊಂಡು ಹೋಗಿ, ತನ್ನ ಚೈತನ್ಯವನ್ನು ಅದರಲ್ಲಿ ನಿಯೋಗಿಸಿ, ಹುಳುವನ್ನು ತನ್ನಂತೆಯೇ ಮಾಡಿ ಕೊಂಡಿತು. ಅದರಂತೆಯೇ ಎಲೆ ಶಿವನೆ ನಿನ್ನನುಗ್ರಹದಿಂದ ಮೋಕ್ಷವಾಗಬೇಕೇ ಹೊರತು ಬರಿಯ ನಂಬುಗೆಯಿಂದಲೂ ಪ್ರಯತ್ನದಿಂದಲೂ ಏನೂ ಆಗುವ ಹಾಗಿಲ್ಲ. ||೪೦||

ಪರುಸದ ಸಂಗಮಂ ಪಸಿಯ ಕಬ್ಬುನವೋಂ ನೆರೆ ನಂಬಿ ಕೂಡೆಸಂ |
ಸ್ಮರಣೆಯ ನೆಯ್ದಿತೇ ಬಯಲಬೋಧೆಯ ಬಾಧೆ ಯದೇಕೆ ದೇವನೀಂ ||

ಕರುಣಿಸಿ ನೋಡದಿರ್ದೊಡೊಣನಂಬುಗೆಗಿಂಬುಗೆಯೆಂಬುದಾವುದು |
ತ್ತರಪದಸಿದ್ಧಿಗಯ್ಯಪರಮಪ್ರಭುವೇ ಮಹದೈಪುರೀಶ್ವರಾ ||೪೧

ಟೀಕೆ—ಭೋದೇವ-ಎಲೆಸ್ವಯಂಪ್ರಕಾಶನೆ, ಪರುಸದ-ಸಿದ್ಧರಸದ, ಸ್ಪ ಮಂ-ಸಂಪರ್ಕವನ್ನು, ಪಸಿಯಕಬ್ಬುನಂ-ಅಚ್ಚಲೋಹವು, ನೆರೆನಂಬಿ-ಚೆನ್ನಾಗಿನಂ ಕೂಡೆ-ಕೂಡಬೇಕೆಂದು, ಸಂಸ್ಮರಣೆಯುಂ-ನೆನಹನ್ನು, ಎಯ್ದಿತೇ-ಹೊಂದಿತೇನು ನೀಂ, ಕರುಣಿಸಿ-ದಯೆಗೈದು, ನೋಡದಿರ್ದೊಡೆ-ನಿರೀಕ್ಷಿಸದಿರ್ದೊಡೆ, ಬಯ ಬೋಧೆಯ-ವ್ಯರ್ಥವಾದಜ್ಞಾನದ, ಬಾಧೆಯದು-ಆ ಆಯಾಸವು, ಏಕೆ-ಏತಕ್ಕೆ ಉತ್ತರಪದಸಿದ್ಧಿಗೆ-ಮೋಕ್ಷಪದಸಿದ್ಧಿಗೆ, ಒಣನಂಬುಗೆಗಿಂಬುಗೆಯೆಂಬುದು-ಬರಿ ವಿಶ್ವಾಸವೆಂಬುದು, ಆವುದು-ಅದರಿಂದೇನು ಪ್ರಯೋಜನವು ? ||೪೧

ಟಿಪ್ಪಣಿ—ಎಲೆ ಜಗದೀಶನೆ, ಅಚ್ಚಕಬ್ಬುನವು ತಾನು ಚಿನ್ನವಾಗಬೇಕೆಂದು ತಾನಾಗಿ ಸಿದ್ಧ ರಸದ ಸಂಗವನ್ನು ಬಯಸಿ ನಂಬಿ ಅದನ್ನೇ ಧ್ಯಾನಿಸಿಕೊಂಡು ಕುಳಿತಿದ್ದಿತೆ ? ಇಲ್ಲ. ಅದರಂತೆ ನೀನು ದಯವಿಟ್ಟು ನೋಡದಿದ್ದರೆ ಬರಿಯ ಜ್ಞಾನಬೋಧೆಯ ಆಯಾಸವನ್ನುಪಡುತ್ತ ನಾನು ಕು ತಿದ್ದರೆ ಪ್ರಯೋಜನವೇನು ? ನಿನ್ನನುಗ್ರಹವಿಲ್ಲದ ಬಳಿಕ ಬರಿಯ ನಂಬುಗೆಗಿಂಬುಗೆಗಳಿಂದ ಏ ತಾನೇ ಆಗುವುದು ? ||೪೧

ಕರುಣಮೆ ಕಾರಣಂ ಬಯಲಮಾತಿನ ಮಾಲೆಯ ಗೋಳುಮಂಡೆಯಂ |
ತಿರ ಲರಿವೇತ ಕಾಚರಣೆಯೇತಕೆ ನಂಬುಗೆಯೇತಕಯ್ಯನಿ ||
ನ್ನುರುತರಮಪ್ಪ ಸತ್ಕೃಪೆಯೆ ಸತ್ಯ ಮಭೀಷ್ಟಪದಾರ್ಥಸಿದ್ಧಿಯಂ |
ಪರಿಪರಿದೆಯ್ದುವಂಗೆ ಪರಮಪ್ರಭುವೇ ಮಹದೈಪುರೀಶ್ವರಾ ||೪೨

ಟೀಕೆ—ಅಭೀಷ್ಟಪದಾರ್ಥಸಿದ್ಧಿಯಂ-ಅಭೀಷ್ಟ-ಇಷ್ಟವಾದ, ಪದಾರ್ಥ-ಮೋಕ್ಷದ, ಸಿದ್ಧಿಯಂ-ಸಿದ್ಧಿಯನ್ನು, ಪರಿಪರಿದು ಎಯ್ದುವಂಗೆ-ಶೀಘ್ರದಲ್ಲಿ ಎಯ್ದು ವಾತಂಗೆ, ಅರಿವು-ಜ್ಞಾನವು, ಏತಕೆ-ಏನುಪ್ರಯೋಜನವು ? ಆಚರಣೆ-ಸನ್ಮಾರ್ಗವು ಏತಕೆ-ಏನುಪ್ರಯೋಜನವು ? ನಂಬುಗೆ-ವಿಶ್ವಾಸವು, ಏಕೆ-ಏನುಪ್ರಯೋಜನವು ಬಯಲಮಾತಿನಮಾಲೆಯು-ವ್ಯರ್ಥವಾದ ವಾಗ್ಜಾಲದ, ಗೋಳುಮಂಡೆ-ತಲೆಯ ಬಡಿದುಕೊಂಬುದು, ಅಂತಿರಲಿ-ಹಾಂಗಿರಲಿ, ನಿನ್ನ-ಎಲೆಶಿವನೆ ನಿನ್ನ ಸಂಬಂಧವಾದ ಉರುತರಮಪ್ಪ-ಶ್ರೇಷ್ಠವಾದ, ಸತ್ಕೃಪೆ-ಒಳ್ಳೆಯ ದಯೆಯೇ, ಸತ್ಯಂ-ಯಥಾರ್ಥವು ಕರುಣಮೆ-ನಿನ್ನ ಕೃಪೆಯೇ, ಕಾರಣಂ-ನಿಮಿತ್ತವು. ||೪೨

ಟಿಪ್ಪಣಿ—ಎಲೆ ದೇವನೆ, ತನಗಿಷ್ಟವಾದ ಮೋಕ್ಷವನ್ನು ಬೇಗನೆ ಹೊಂದಬೇಕಾಗಿದ್ದ ಬರಿಯ ಜ್ಞಾನದಿಂದೇನು ಪ್ರಯೋಜನ ? ಬರಿಯ ಆಚರಣೆಯಿಂದೇನು ಫಲ ? ಬರಿಯ ನಂಬುಗೆ ಯಿಂದೇನುಸಾಧನ ? ಅವೆಲ್ಲಾ ಸಾಧನವಾಗುವುವೆಂದು ತಲೆ ಚಚ್ಚಿಕೊಂಡು ಹರಟುವ ವ್ಯರ್ಥ

ವಾದ ವಾಗ್ಜಾಲವು ಹಾಗಿರಲಿ, ಶ್ರೇಷ್ಠವಾದ ನಿನ್ನ ಕೃಪೆಯೊಂದೇ ಶಾಶ್ವತವಾದುದು. ಅದೇ ಮುಕ್ತಿಗೆ ಮುಖ್ಯಕಾರಣವು. ||೪೨||

ಅವತಾರಿಕೆ—ಜನನಮರಣಂಗಳನ್ನೂ ತನುತ್ರಯವಾಸನೆಯನ್ನೂ ನಾಶಮಾಡೆಂದು ಪ್ರಾರ್ಥಿಸುತ್ತಿರ್ದಪಂ.

ಪುರಮೆ ತನುತ್ರಯಸ್ಥಿತಿ ಮನೋಭವನೇ ಜನನಂ ಕೃತಾಂತನೇ |
ಮರಣ ಮಿದೇಂ ಸ್ಮರತ್ರಿಪುರಕಾಲವಿನಾಶಕ ನೆಂದು ನಿನ್ನನೆಂ ||
ಬರು ಜನನಸ್ಥಿತಿಪ್ರಳಯರೂಪಿನೊ ಳಿರ್ಪರ ನೇಕೆ ನೋಡ ರಾ |
ರ್ಯರುಮತಿವಂತರಾಗಿ ಪರಮಪ್ರಭುವೇ ಮಹದೈಪುರೀಶ್ವರಾ ||೪೩||

ಟೀಕೆ—ಆರ್ಯರು-ಹಿರಿಯರುಗಳು, ಮತಿವಂತರಾಗಿ-ಬುದ್ಧಿವಂತರಾಗಿ, ಜನನಸ್ಥಿತಿಪ್ರಳಯರೂಪಿನೊಳ್-ಉತ್ಪತ್ತಿಸ್ಥಿತಿಲಯರೂಪಿನಲ್ಲಿ, ಇರ್ಪರಂ-ಇರ್ಪವರನ್ನು, ನೋಡದೆ-ವಿಚಾರಿಸದೆ, ನಿನ್ನಂ-ನಿನ್ನನ್ನು, ಸ್ಮರತ್ರಿಪುರಕಾಲವಿನಾಶಕನೆಂದು-ಸ್ಮರ-ಮನ್ಮಥನನ್ನು, ತ್ರಿಪುರ-ಮುಪ್ಪುರವನ್ನು, ಕಾಲ-ಯಮನನ್ನು, ವಿನಾಶಕನೆಂದು-ಸಂಹರಿಸಿದವನೆಂದು, ಏಕೆಯೆಂಬರು-ಏಕೆಪೇಳ್ವರು ? ಇದೇಂ-ಇದೇನು ? ಪುರಮೆ-ಮುಪ್ಪುರವೇ, ತನುತ್ರಯಸ್ಥಿತಿ-ತನುಮೂರರ ಸ್ಥಿತಿಯು, ಮನೋಭವನೇ-ಮನ್ಮಥನೇ, ಜನನಂ-ಉತ್ಪತ್ತಿಯು, ಕೃತಾಂತನೇ-ಯಮನೇ, ಮರಣಂ-ಮೃತಿಯು. ಇವಂ ಸಂಹರಿಸಿದುದೇ ಕಾಲಕಾಮಪುರಂಗಳಂ ಸಂಹರಿಸಿದುದೆಂಬುದರ್ಥವು. ||೪೩||

ಟಿಪ್ಪಣಿ—ಲೋಕದಲ್ಲಿ ಸ್ಥೂಲಾದಿ ಶರೀರತ್ರಯವೇ ತ್ರಿಪುರವು, ಉತ್ಪತ್ತಿಯೇ ಕಾಮವು ಮರಣವೇ ಯಮನು, ಇವುಗಳ ಸಹ್ಮಾರವೇ ತ್ರಿಪುರಕಾಮಕಾಲರುಗಳ ಸಹ್ಮಾರವೆನಿಸಿಕೊಳ್ಳುವುದು ಹೀಗಿರುವಲ್ಲಿ ದೇಹವಂಪೊತ್ತು ಜನನಸ್ಥಿತಿ ಮರಣಗಳ ರೂಪಿನಲ್ಲಿರುತ್ತಿರುವ ಜೀವಕೋಟಿಗಳನ್ನು ನೋಡುತ್ತಿದ್ದರೂ ಹಿರಿಯರು ತಾವು ವಿವೇಕಿಗಳಾಗಿದ್ದುಕೊಂಡೂ ಅವರ ವಿಷಯವನ್ನು ವಿಚಾರ ಮಾಡದೆ, ಎಲೆ ಶಿವನೆ ನಿನ್ನನ್ನು ತ್ರಿಪುರಕಾಮಕಾಲ ವಿನಾಶಕನೆಂದು ಅದು ಹೇಗೆ ಹೇಳುವರು ? (ದೇಹತ್ರಯ ಜನನ ಮರಣಗಳೇ ತ್ರಿಪುರ ಕಾಮ ಕಾಲರಾಗಿರುವಾಗ, ಈಶ್ವರನು ಅವುಗಳನ್ನು ಸುಟ್ಟಿದ್ದರೆ ಲೋಕದ ಜನರಲ್ಲಿ ಜನನ ಮರಣಾದಿಗಳೇ ಇಲ್ಲದಿರಬೇಕಾಗಿದ್ದಿತೆಂದು ಭಾವ.) ||೪೩||

ಜನನಮೆ ತಾಂ ಸ್ಮರಂ ಸ್ಥಿತಿಯೆ ತಾಂ ತ್ರಿಪುರಂ ಮೃತಿ ತಾನೆ ಕಾಲನೀ |
ಜನನಮೃತಿಸ್ಥಿತಿತ್ರಯವಿನಾಶನಮೇ ಪುರಕಾಲಕಾಮಸಂ ||
ಹನನ ಮಿದೇ ದಿಟಂ ಪುಸಿ ಬಳಿಕ್ಕಿನ ಕಾಮಪುರಾಂತಕಾರಿ ಯೆಂ |
ದೆನಿಸುವ ನಿನ್ನ ಮಾಯೆ ಪರಮಪ್ರಭುವೇ ಮಹದೈಪುರೀಶ್ವರಾ ||೪೪||

ಟೀಕೆ—ಜನನಮೆತಾಂ-ಉತ್ಪತ್ತಿಯೆಂಬುದುತಾನೇ, ಸ್ಮರಂ-ಮನ್ಮಥನು, ಸ್ಥಿತಿಯೆತಾಂ-ಸ್ಥಿತಿ ತಾನೇ, ತ್ರಿಪುರಂ-ಮುಪ್ಪುರವು, ಮೃತಿತಾನೆ-ಮರಣ ತಾನೇ, ಕಾಲಂ-ಯಮನು, ಈಸ್ಥಿತಿತ್ರಯವಿನಾಶನಮೆ-ಈಉತ್ಪತ್ತಿಸ್ಥಿತಿಲಯಮೂರನ್ನು

ಸಂಹರಿಸಿದುದೇ, ಪುರಕಾಲಕಾಮಸಂಹನನಂ-ತ್ರಿಪುರಕಾಲಕಾಮಸಂಹಾರವು, ಇನ್ನೂ ನಿಶ್ಚಯ, ಬಳಿಕ್ಕಿನ-ಬೇರೆಯಾದ, ಕಾಮಪುರಾಂತಕಾರಿಯೆಂದೆನಿಸುವ, ಸ್ಮರತ್ರಿಪುರ ಕಾಲಾರಿಯೆಂದೆನಿಸುವ, ನಿನ್ನ ಮಾಯೆ-ಬಾಹ್ಯದಲ್ಲಿ ತೋರುವ ನಿನ್ನ ಕಪಟವು, ಪುಸಿ, ನಿಶ್ಚಯವಲ್ಲ. ||೮೬||

ಟಿಪ್ಪಣಿ—ಜನನವೇ ಕಾಮವು, ಶರೀರತ್ರಯಸ್ಥಿತಿಯೇ ತ್ರಿಪುರವು, ಮರಣವೇ ಕಾಲವು, ಈ ಮೂರರ ನಾಶವೇ ತ್ರಿಪುರ ಕಾಮ ಕಾಲ ನಾಶವು. ಇದೇ ದಿಟವಾದ ಮಾತು. ಉಳಿದ ತ್ರಿಪುರ ಕಾಮಕಾಲರುಗಳನ್ನು ಸುಟ್ಟವನೆಂದು ಹೇಳಿಸಿಕೊಳ್ಳುವ ನಿನ್ನ ಮಾಯೆಯೆಲ್ಲಾ ಸುಳ್ಳಾದುದು.

ಮನದೊಳೆ ಕಾಮನಂ ತನುವಿನೊಳ್ತ್ರಿಪುರಂಗಳ ನಕ್ಷಿಪಕ್ಷ್ಮವ |
ರ್ತನದೊಳೆ ಕಾಲನಂ ಮರಳಿ ಪುಟ್ಟಿಸಿದಂದಮ ನಾರುಬಲ್ಲ ರಂ ||
ದಿನ ಪುಸಿಮಾತುಗೀತುಗಳ ನಾಡುವರಲ್ಲದೆ ನಿನ್ನ ತಕ್ಕ ನಿಂ |
ದಿನೊಳರಿದಿರ್ಪ್ಪ ನಾನೆ ಪರಮಪ್ರಭುವೇ ಮಹದೈಪುರೀಶ್ವರಾ ||೮೭||

ಟೀಕೆ—ಅಂದಿನ-ಮುನ್ನಾದ, ಪುಸಿಮಾತುಗೀತುಗಳಂ-ತ್ರಿಪುರಸ್ಮರಕಾಲಾರಿಯೆಂಬ ಸಟೆಯ ಮಾತುಗಳನ್ನು, ಆಡುವರಲ್ಲದೆ-ಹೇಳುವರಲ್ಲದೆ, ಮನದೊಳೆ-ಮನದಲ್ಲಿಯೇ, ಕಾಮನಂ-ಮನ್ಮಥನನ್ನು, ತನುವಿನೊಳ್-ದೇಹದಲ್ಲಿ, ತ್ರಿಪುರಂಗಳಂ-ಮುಪ್ಪುರವನು, ಅಕ್ಷಿಪಕ್ಷ್ಮವರ್ತನದೊಳೆ-ಕಣ್ಣೆವೆಯ ಹಳಚುವುದರಲ್ಲಿಯೇ, ಕಾಲನಂ-ಯಮನನ್ನು, ಮರಳಿ-ಬಳಿಕ, ಪುಟ್ಟಿಸಿದಂದಮಂ-ಉಂಟುಮಾಡಿದ ಮಾರ್ಗವನ್ನು, ಆರುಬಲ್ಲರ್-ತಿಳಿವರಾರು ? ನಿನ್ನತಕ್ಕಂ-ನಿನ್ನ ಕಪಟವನ್ನು, ಆನೆ-ನಾನೊರ್ವನೇ, ಇಂದಿನೊಳ್-ಈಗ, ಅರಿದಿರ್ಪ್ಪೆಂ-ತಿಳಿದುಕೊಂಡಿರ್ಪೆನು. ||೮೭||

ಟಿಪ್ಪಣಿ—ಪೂರ್ವಕಾಲದಲ್ಲಿ ಶಿವನು ತ್ರಿಪುರ ಕಾಮ ಕಾಲರುಗಳನ್ನು ನಾಶಮಾಡಿದನೆಂಬ ಸುಳ್ಳುಮಾತುಗಳನ್ನು ಎಲ್ಲರೂ ಆಡಿಕೊಳ್ಳುತ್ತಿರುವರೇ ಹೊರತು, ಮನಸ್ಸಿನಲ್ಲಿ ಮನ್ಮಥನನ್ನು ಶರೀರತ್ರಯದಲ್ಲಿ ತ್ರಿಪುರವನ್ನೂ, ರೆಪ್ಪೆಮುಚ್ಚುವುದರಲ್ಲಿ ಕಾಲನನ್ನೂ ಮತ್ತೆ ನೀನು ಹುಟ್ಟಿಸಿದ ರೀತಿಯನ್ನು ಯಾರು ಬಲ್ಲರು ? ಆ ನಿನ್ನ ಮಾಯೆಯನ್ನೆಲ್ಲಾ ನಾನೊಬ್ಬನೇ ತಿಳಿದಿರುವವನು||೮೭||

ಮನದಮನೋರಥಂ ಲಯಮ ನೆಯ್ದಲು ಕಾಮಜಯಂ ತ್ರಿದೇಹವಾ |
ಸನೆ ಯಳಿಯ ಲ್ಪುರತ್ರಯಜಯಂ ಶಿವಲಿಂಗದೊಳಿಟ್ಟು ನಟ್ಟಕ ||
ಣ್ಣಿನ ಯೆವೆಯಾಟಮಿಲ್ಲದಿರ ಲಂತದು ಕಾಲಜಯಂ ತ್ವದೀಯಶ |
ಕ್ತಿನಿಜಪದೈಕ್ಯಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೮೮||

ಟೀಕೆ—ಮನದ-ಮನಸ್ಸಿನ, ಮನೋರಥಂ-ಬಯಕೆಯು, ಲಯಮನೈದಲು-ನಾಶವನ್ನೈದಲಾಗಿ, ಕಾಮಜಯಂ-ಕಾಮಸಂಹಾರವು, ತ್ರಿದೇಹವಾಸನೆ-ತನುತ್ರಯವಾಸನೆಯು, ಅಳಿಯಲ್-ನಷ್ಟವಾಗಲಾಗಿ, ಪುರತ್ರಯಜಯಂ-ತ್ರಿಪುರಸಂಹಾ

ರವು, ಶಿವಲಿಂಗದೊಳ್-ಶಿವಲಿಂಗದಲ್ಲಿ, ಇಟ್ಟು-ಮಡಗಿ, ನಟ್ಟ-ದೃಢವಾದ, ಕಣ್ಣಿನ-ನಯನದ, ಎವೆಯಾಟಂ-ಎವೆಹಳಚುವುದು, ಇಲ್ಲದಿರೆ-ಇಲ್ಲದಿರಲಾಗಿ, ಅಂತದು-ಅದುತಾನು, ಕಾಲಜಯಂ-ಯಮನ ಜಯಿಸಿದುದು, ತ್ವದೀಯಶಕ್ತಿ-ನಿನ್ನಿಸಂಬಂಧವಾದ ಸಾಮರ್ಥ್ಯವು, ನಿಜಪದೈಕ್ಯಭಕ್ತಿ-ನಿಜ-ಸಹಜವಾದ, ಪದ-ಮೋಕ್ಷದಲ್ಲಿ, ಐಕ್ಯ-ಸಾಮರಸ್ಯದಲ್ಲಿ, ಭಕ್ತಿ-ಭಕ್ತಿಯು. ||೪೭||

ಟಿಪ್ಪಣಿ—ಎಲೈ ಜಗದೀಶನೆ, ಮನಸ್ಸಿನ ಬಯಕೆಯು ಅಳಿದುಹೋದರೆ ಅದೇ ಕಾಮವಿಜಯವೆನಿಸಿಕೊಳ್ಳುವುದು. ತನುತ್ರಯಗಳ ವಾಸನೆಯು ಅಳಿದುಹೋದರೆ, ಅದೇ ತ್ರಿಪುರ ವಿಜಯವಾಗುವುದು. ಲಿಂಗದಲ್ಲಿಟ್ಟ ಕಣ್ಣು ರೆಪ್ಪೆಹಾಕದಂತೆ ನಿಶ್ಚಲವಾಗಿರಲು, ಅದೇ ಕಾಲವಿಜಯವೆನಿಸಿಕೊಳ್ಳುವುದು. ಎಲೈ ಸ್ವಾಮಿಯೆ, ನಿನ್ನ ಅವಿನಾಭೂತವಾದ ಶಕ್ತಿಯೇ ಲಿಂಗಾಂಗಸಾಮರಸ್ಯ ಸಿದ್ಧಿಯನ್ನುಂಟುಮಾಡಿಕೊಡುವ ಭಕ್ತಿಯಾಗಿರುವುದು. ಆ ಭಕ್ತಿಯೇ ಮೇಲೆ ಹೇಳಿದ ಜಯತ್ರಯಕ್ಕೆ ಕಾರಣವು. ||೪೭||

ಭವಭಯ ಮಾತ್ಮವಿದ್ಯೆಗೆ ತನುತ್ರಯವಾಸನೆ ಯಡ್ಡಬೀಳೆ ಕ |
ಣ್ಣೆವೆ ಮರೆಯಾಗೆ ಲಿಂಗದ ನಿರೀಕ್ಷೆಗೆ ಕಾಲಭಯಂ ಮನೋರಥಂ ||
ಕವಿಯೆ ಮನಕ್ಕೆ ಕಾಮಭಯ ಮಾಭಯಮಂ ನಿಜಭಕ್ತಿಯೋಗದಿಂ |
ದವೆ ಕಿಡಿಸಯ್ಯ ದೇವ ಪರಮಪ್ರಭುವೇ ಮಹದ್ಭೈಪುರೀಶ್ವರಾ ||೪೮||

ಟೀಕೆ—ದೇವ-ಎಲೆ ಶಿವನೆ, ಆತ್ಮವಿದ್ಯೆಗೆ-ಆತ್ಮಜ್ಞಾನಕ್ಕೆ, ತನುತ್ರಯವಾಸನೆ-ತನುಮೂರರ ವಾಸನೆಯು, ಅಡ್ಡಬೀಳೆ-ಅಡ್ಡಬೀಳಲಾಗಿ, ಭವಭಯಂ-ಸಂಸಾರಭಯವು ಲಿಂಗದನಿರೀಕ್ಷೆಗೆ-ಲಿಂಗವಂ ನೋಡುವುದಕ್ಕೆ, ಕಣ್ಣೆವೆ-ಕಣ್ಣುರೆಪ್ಪೆ, ಮರೆಯಾಗೆ-ಮರೆಯಾಗಲಾಗಿ, ಕಾಲಭಯಂ-ಯಮನಭಯವು, ಮನಕ್ಕೆ-ಮನಸ್ಸಿಗೆ, ಮನೋರಥಂ-ಕಾಂಕ್ಷೆಯು, ಕವಿಯೆ-ಆವರಿಸಲಾಗಿ, ಕಾಮಭಯಂ—ಮನ್ಮಥನ ಭಯವು, ಈ ಭಯಮಂ-ಈ ಭೀತಿಯನ್ನು, ನಿಜಭಕ್ತಿಯೋಗದಿಂದವೆ-ನಿನ್ನ ಭಕ್ತಿ ಸಂಬಂಧದಿಂದಲೇನೇ, ಕಿಡಿಸಯ್ಯ-ಸಂಹಾರವನ್ನುಮಾಡಯ್ಯ. ||೪೮||

ಟಿಪ್ಪಣಿ—ಎಲೆ ಸ್ವಾಮಿಯೆ, ಆತ್ಮಜ್ಞಾನಕ್ಕೆ ದೇಹತ್ರಯಗುಣಸಂಬಂಧವು ಅಡ್ಡಲಾಗಿಬಂದರೆ ಆಗಲೇ ಜನನ ಮರಣ ಸಂಸಾರಭೀತಿಯು ಸಿದ್ಧವಾಗಿರುವುದು. ಅಚಲವಾದ ನೋಟದಿಂದ ಲಿಂಗ ನಿರೀಕ್ಷಣೆಯನ್ನು ಮಾಡುವಾಗ ಕಣ್ಣಿನರೆಪ್ಪೆ ಮುಚ್ಚಿ ಮರೆಯಾದರೆ, ಆಗಲೇ ಯಮಭಯವು ಸಿದ್ಧವಾಗಿರುವುದು. ಮನಸ್ಸನ್ನು ಆಸೆಯು ಆವರಿಸಿದರೆ ಆಗಲೇ ಕಾಮಭೀತಿಯು ಸಿದ್ಧವಾಗಿರುವುದು. ಈ ಪೂರ್ವೋಕ್ತವಾದ ಮೂರು ತೆರದ ಭಯವನ್ನೂ ನಿನ್ನ ದೃಢಭಕ್ತಿಯ ಸಾಮರ್ಥ್ಯದಿಂದ ಪರಿಹರಗೊಳಿಸು ||೪೮||

ಅವತಾರಿಕೆ—ಇನ್ನು ಭಕ್ತಿಪ್ರಭಾವವಂ ಪೇಳುತ್ತಿರ್ದಪಂ—

ಕ್ಷುಧೆ ತೃಷೆ ನಿದ್ರೆ ಯೆಂಬಿವರ ಭಂಗ ಮಡಂಗಲು ಲಿಂಗದೊಳ್ ಸದಾ |
ನಿಧನದ ಬಾಧೆ ಹಿಂಗಿ ತನುಜೀವದ ಸಂದಳಿ ದಪ್ರಯಾಸದಿಂ ||

ವಿಧಿವಿಹಿತಪ್ರಯತ್ನಗತಿ ಹೊದ್ದದೆ ರಾಜಿಪುದಯ್ಯ ಚಿತ್ರಭಾ |
ನಿಧಿ ಭವದೀಯಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೪೮||

ಟೀಕೆ—ಲಿಂಗದೊಳ್-ಮಹಾಲಿಂಗದಲ್ಲಿ, ಸದಾ-ಆವಾಗಲೂ, ಕ್ಷುಧೆ-ಹಸಿವು, ತೃಷೆ-ನೀರಡಿಕೆ, ನಿದ್ರೆ-ನಿದ್ರೆಯು, ಎಂಬ-ಹೀಗೆಂಬ, ಇವರಭಂಗಂ-ಈ ಅಧಿಕವಾದ ಕೊರತೆಯು, ಅಡಂಗಲು-ಅಡಗಲಾಗಿ, ನಿಧನದ-ಮರಣದ, ಬಾಧೆ-ಹಿಂಸೆಯು, ಹಿಂಗಿ-ನಾಶವಾಗಿ, ತನುಜೀವದಸಂದು-ಈ ದೇಹವೆನ್ನದೆಂಬಭಿಮಾನವು, ಅಳಿದು-ನಾಶವಾಗಿ, ಅಪ್ರಯಾಸದಿಂ-ಕೋಟಲೆಯಿಲ್ಲದೆ, ವಿಧಿವಿಹಿತಪ್ರಯತ್ನಗತಿ-ವಿಧಿ-ಪ್ರಾರಬ್ಧಕರ್ಮದಿಂದ, ವಿಹಿತ-ಮಾಡಲ್ಪಟ್ಟ, ಪ್ರಯತ್ನಗತಿ-ಉದ್ಯೋಗದ ನಡತೆಯು, ಹೊದ್ದದೆ-ಸೋಂಕದೆ, ಚಿತ್ರಭಾನಿಧಿ-ಎಲೆ ಜ್ಞಾನಪ್ರಕಾಶಕ್ಕೆಸ್ಥಾನವಾದಾತನೆ, ಭವದೀಯಭಕ್ತಿ-ನಿನ್ನ ಸಂಬಂಧವಾದ ಭಕ್ತಿಯು, ರಾಜಿಪುದಯ್ಯ-ಒಪ್ಪುವುದಯ್ಯ ||೪೮||

ಟಿಪ್ಪಣಿ—ಜ್ಞಾನತೇಜಸ್ಸಿಗೆ ನಿಕ್ಷೇಪನಾದ ಎಲೆ ಸ್ವಾಮಿಯೆ, ದೇಹಗುಣವಾದ ಹಸಿವು ನೀರಡಿಕೆ ನಿದ್ರೆಯೆಂಬ ಗುಣಗಳ ಕೋಟಲೆಯು ಯಾವಾಗಲೂ ಲಿಂಗದಲ್ಲಿ ಅಡಗಿಹೋದರೆ, ಮರಣದ ಭೀತಿಯು ತಪ್ಪಿಹೋಗಿ, ದೇಹವೇ ನಾನೆಂಬ ಭ್ರಾಂತಿಯು ಬಿಟ್ಟುಹೋಗಿ, ಪ್ರಾರಬ್ಧಕರ್ಮ ಫಲಾನುಭವ ಸಂಬಂಧವು ತನ್ನಷ್ಟಿಗೆತಾನೇ ಕಳಚಿಹೋದರೆ ಆಗ ನಿನ್ನ ದೃಢಭಕ್ತಿಯು ತಾನೇತಾನಾಗಿ ಒಪ್ಪುತ್ತಿರುವುದು. ||೪೮||

ಭ್ರಮೆ ಯಳಿ ದಾತ್ಮ ಸಂಗಬಹಿರಂಗಸಮುಲ್ಲಸದಂತರಂಗವಿ |
ಶ್ರಮಣವಿವೇಕದಿಂ ಸಕಲಸಂಶಯಸೂತಕಜಾಡ್ಯಜಾಲ ಮ ||
ಸ್ತಮಿಸಿ ಶಿವಾತ್ಮಕಂ ನಿರವಸಾನನಿರರ್ಗಳ ಭಕ್ತಿಯೊ ಳ್ಗತಾ |
ಗಮನೆನಿಸಿರ್ಪ್ಪನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೪೯||

ಟೀಕೆ—ಶಿವಾತ್ಮಕಂ-ಶಿವಸ್ವರೂಪನಾದಶರಣನು, ಭ್ರಮೆಯಳಿದು-ಸಂಸಾರಭ್ರಾಂತಿನಷ್ಟವಾಗಿ, ಆತ್ಮ.........ವಿವೇಕದಿಂ—ಆತ್ಮಸಂಗ—ಜೀವಸಂಪರ್ಕದ, ಬಹಿರಂಗ-ಬಾಹ್ಯವ್ಯಾಪಾರದ, ಸಮುಲ್ಲಸತ್-ಒಪ್ಪುತ್ತಿರ್ದ, ಅಂತರಂಗ-ಮನೋವ್ಯಾಪಾರದ, ವಿಶ್ರಮಣ-ಅತ್ಯಂತಶಮನದ, ವಿವೇಕದಿಂ-ವಿಚಾರದಿಂದ, ಸಕಲಸಂಶಯಸೂತಕಜಾಡ್ಯಜಾಲಂ—ಸಕಲ—ಸಮಸ್ತವಾದ, ಸಂಶಯ—ಸಂಕಲ್ಪದ, ಸೂತಕ-ಮಲಿನಭಾವದ, ಜಾಡ್ಯ-ಜಡಭಾವದ, ಜಾಲಂ-ಸಮೂಹವು, ಅಸ್ತಮಿಸಿ-ನಷ್ಟವಾಗಿ, ನಿರವಸಾನನಿರರ್ಗಳಭಕ್ತಿಯೊಳ್-ನಿರವಸಾನ-ಅವಧಿಯಿಲ್ಲದ, ನಿರರ್ಗಳ-ತಡೆಯಿಲ್ಲದ, ಭಕ್ತಿಯೊಳ್-ಶಿವಭಕ್ತಿಯಲ್ಲಿ, ಗತಾಗಮಂ-ಎಡೆಯಾಡುತಿರ್ಪ್ಪನು, ಎನಿಸಿರ್ಪ್ಪನಯ್ಯ-ಎನಿಸಿಕೊಳ್ಳುವನಯ್ಯ. ||೪೯||

ಟಿಪ್ಪಣಿ—ಶಿವಸ್ವರೂಪನಾದ ಶರಣನು ಸಂಸಾರಕಾರಣವಾದ ಭ್ರಾಂತಿಯನ್ನುಳಿದು, ಸರ್ವಾಂಗಲಿಂಗಸಾಹಿತ್ಯಜ್ಞಾನದಿಂದ ಅಂತರ್ಬಹಿರರ್ಪಣ ಕ್ರಿಯೆಗಳನ್ನೆಲ್ಲಾ ಮಾಡುವ ವಿವೇಕವುಳ್ಳವನಾದ ಕಾರಣ, ಎಂದರೆ " ಬಹಿರಂಗಾರ್ಪಣೇರೂಪ ಮಂತರಂಗಾರ್ಪಣೇರುಚಿಃ | ಆತ್ಮಸಂಗಮಯಂಸಾಕ್ಷಾದಾನಂದಾರ್ಪಣಮುಚ್ಯತೆ " ಎಂಬ ಪ್ರಮಾಣದಂತೆ ರೂಪದ್ರವ್ಯವನ್ನು ಇಷ್ಟಲಿಂಗಕ್ಕೂ, ರುಚಿದ್ರವ್ಯವನ್ನು ಪ್ರಾಣಲಿಂಗಕ್ಕೂ, ಆನಂದದ್ರವ್ಯವನ್ನು ಭಾವಲಿಂಗಕ್ಕೂ ಅರ್ಪಿಸಿ, ತತ್ಪ್ರಸಾದ ಪರಿಣಾಮಿಯಾಗಿರುವುದರಿಂದ ಅಂತಪ್ಪ ಸದ್ಭಾವಜ್ಞಾನಿಯಾದ ಶರಣನಿಗೆ ಮನೋವಿಕಲ್ಪವೂ, ದೇಹಸೂತಕವೂ, ಜಡಭಾವವೂ ಅಳಿದು ಹೋಗಿರಲಾಗಿ, ಎಲ್ಲಕ್ಕೂ ಮೇಲಾದ ತನಗೊಂದು ತಡೆಯಿಲ್ಲದ ಶಿವಭಕ್ತಿಯಲ್ಲಿ ಆತನು ವಿಹರಿಸುತ್ತಿರುವನು. ||೪೯||

ಮಾನಸ ಮರ್ಚನಂ ವಿಮಳವಾಚಕ ಮರ್ಚನ ಮರ್ಚನಂ ಸಮಾ |
ಧಾನಸಮೇತಕಾಯಕ ಮೆನಲ್ಕೆವ ನೀನೆ ಮನೋವಚೋವಪು ||
ಸ್ಸ್ಥಾನವಿಶಿಷ್ಟನಾಗಿ ಕರಣತ್ರಯಪೂಜಿತನಾಗಿ ತೋರ ಲಿ |
ನ್ನೇನೆರಡುಂಟೆ ದೇವ ಪರಮಪ್ರಭುವೇ ಮಹದೈಪುರೀಶ್ವರಾ ||೫೦||

ಅವತಾರಿಕೆ ತನುಕರಣ ವ್ಯಾಪಾರಂಗಳೆಲ್ಲವೂ ಲಿಂಗಸಂಬಂಧದಿಂದೆ ಲಿಂಗಪೂಜೆಗಳಾಗಿರ್ಪವೆಂದು ಪೇಳುತ್ತಿರ್ದಪಂ :—

ಟೀಕೆ—ಮಾನಸಂ-ಮನೋವ್ಯಾಪಾರವೆಲ್ಲವೂ, ಅರ್ಚನಂ-ಪೂಜೆಯು, ವಿಮಳವಾಚಕಂ-ನಿರ್ಮಳವಾದ ವಾಗ್ವ್ಯಾಪಾರವೆಲ್ಲವೂ, ಅರ್ಚನಂ-ಪೂಜೆಯು,ಸಮಾಧಾನಸಮೇತಕಾಯಕಂ-ಮನಸ್ಸಮಾಧಾನದೊಡನೆಕೂಡಿದಶರೀರವ್ಯಾಪಾರವೆಲ್ಲವೂ ಅರ್ಚನಮೆನಲ್-ಪೂಜೆಯೆನಲಾಗಿ, ಮನೋವಚೋವಪುಸ್ಥಾನವಿಶಿಷ್ಟನಾಗಿ, ಮನಃ-ಮನಸ್ಸು, ವಚಃ-ವಾಕ್ಕು, ವಪುಃ-ಶರೀರವೆಂಬ, ಸ್ಥಾನ-ಸ್ಥಾನಂಗಳಲ್ಲಿ,ವಿಶಿಷ್ಟನಾಗಿ-ಕೂಡಿದಾತನಾಗಿ, ಶಿವ-ಎಲೆಶಿವನೆ, ನೀನೆ-ನೀನುತಾನೆ, ಕರಣತ್ರಯಪೂಜಿತನಾಗಿ-ತ್ರಿಕರಣದಲ್ಲಿಯೂ ಪೂಜಿಸಲ್ಪಟ್ಟಾತನಾಗಿ, ತೋರಲ್-ಕಾಣಿಸಲು, ಭೋದೇವ-ಎಲೈ ಮಹಾದೇವನೆ, ಇನ್ನೇಂ-ಇನ್ನಾವುದು ? ಎರಡುಂಟೆ-ಭೇದವುಂಟೆ ? ಇಲ್ಲ.

ಟಿಪ್ಪಣಿ—"ಪ್ರಣಷ್ಟೇಷ್ವೇಷುಸರ್ವೇಷು ಸ್ವೇಚ್ಛಾಚಾರೇಣಯತ್ಕೃತಂ | ತಚ್ಛಿವಾರ್ಚನಮೇವಸ್ಯಾದ್ಯದ್ಭುಕ್ತಂತಚ್ಛಿವಾರ್ಪಿತಂ || ಶಿವರೂಪತಯಾಸರ್ವಂ ಯಸ್ಯಭಾತಿಸ್ವರೂಪತಃ | ಸ್ವೇಚ್ಛಾಚಾರಸಮಾಚಾರಸ್ತಸ್ಯಚಾರ್ಹಾಹಿಶೂಲಿನಃ || " ಎಂಬ ವಚನದಂತೆ ದೇಹಕರಣವಾಸನೆಗಳೆಲ್ಲಾ ನಷ್ಟವಾಗಿ, ಸರ್ವವನ್ನೂ ಶಿವರೂಪವಾಗಿ ತಿಳಿದು ತನ್ನ ತನುಕರಣಾದಿಗಳಲ್ಲೆಲ್ಲಾ ಶಿವಾತ್ಮನೇ ಆಗಿರುವ ಶರಣನು ತನ್ನ ತ್ರಿಕರಣದಲ್ಲಿ ಯಾವ ವ್ಯಾಪಾರವನ್ನು ಮಾಡಿದರೂ ಅವೆಲ್ಲವೂ ಶಿವಾರ್ಚನೆಯೇ ಆಗಿರುವ ಕಾರಣ, ಎಲೆ ಸ್ವಾಮಿಯೆ, ಅವನಿಗೆ ಇನ್ನು ಬಹಿರ್ವ್ಯಾಪಾರವಾವುದಿರುವುದು ? ಅವನ ಲೀಲಾಥಿಂತವಾದ ಆಚಾರಗಳೆಲವೂ ನಿನ್ನ ಪೂಜೆಯೇ ಆಗಿರುವುದೆಂದು ಭಾವ. ||೫೦||

ಸ್ಥೂಲಶರೀರ ಸೂಕ್ಷ್ಮತನು ಕಾರಣದೇಹಮೆನಿಪ್ಪ ಮೂರರೊಳ್ |
ಮೇಲೆ ಗುರೂಪದಿಷ್ಟ ಶಿವಲಿಂಗ ಸುಖಂ ...ನಿಕ್ಕ ಚಿತ್ರ ... ||

ಶಾಲಯಮಾಗಿ ತೋರಲು ತನುತ್ರಯದೊಳ್ ತೆರಹಿಲ್ಲದಿರ್ಪ್ಪತ |
ಲ್ಲೀಲೆಯೆ ಶುದ್ಧಪೂಜೆ ಪರಮಪ್ರಭುವೇ ಮಹದೈಪುರೀಶ್ವರಾ ||೫೧||

ಟೀಕೆ—ಗುರೂಪದಿಷ್ಟಶಿವಲಿಂಗಂ-ಗುರು-ಶ್ರೀಗುರುವಿನಿಂದ, ಉಪದಿಷ್ಟ-ಉಪದೇಶಿಸಲ್ಪಟ್ಟ, ಶಿವಲಿಂಗಂ-ಶಿವಲಿಂಗವು, ಸ್ಥೂಲಶರೀರಸೂಕ್ಷ್ಮತನುಕಾರಣದೇಹಮೆನಿಪ್ಪ-ಸ್ಥೂಲಸೂಕ್ಷ್ಮಕಾರಣದೇಹಗಳೆಂಬ, ಮೂರರೊಳ್-ಮೂರರಲ್ಲಿ, ಅಖಂಡಿತನಿತ್ಯಚಿತ್ಪ್ರಕಾಶಾಲಯಮಾಗಿ-ಅಖಂಡಿತ-ಪರಿಪೂರ್ಣವಾಗಿ, ನಿತ್ಯ-ಕೇಡಿಲ್ಲದುದಾಗಿ, ಚಿತ್ಪ್ರಕಾಶಾಲಯಮಾಗಿ-ಜ್ಞಾನಪ್ರಕಾಶಕ್ಕೆ ಸ್ಥಾನವಾಗಿ, ತೋರಲು-ಕಾಣಿಸಲು, ಮೇಲೆ-ಅಷ್ಟರಮೇಲೆ, ತನುತ್ರಯದೊಳ್-ತನುಮೂರರಲ್ಲಿ, ತೆರಹಿಲ್ಲದಿರ್ಪ್ಪ-ಸಂದಿಲ್ಲದಿರ್ಪ, ತಲ್ಲೀಲೆಯೆ-ಆಶಿವಲಿಂಗದವಿಲಾಸವೇ, ಶುದ್ಧಪೂಜೆ-ನಿರ್ಮಳವಾದ ಪೂಜೆಯು. ||೫೧||

ಟಿಪ್ಪಣಿ—ಶ್ರೀಗುರುವಿನಿಂದ ಕೊಡಲ್ಪಟ್ಟ ಇಷ್ಟಪ್ರಾಣಭಾವಾತ್ಮಕವಾದ ಲಿಂಗವು ಸ್ಥೂಲ ಸೂಕ್ಷ್ಮಕಾರಣವೆಂಬ ಶರೀರತ್ರಯದಲ್ಲೂ ನೆಲಸಿ ಅಖಂಡವಾಗಿಯೂ ಶಾಶ್ವತವಾಗಿಯೂ ಜ್ಞಾನ ತೇಜೋನಿಧಿಯಾಗಿಯೂ ತೋರಲಾಗಿ, ಬಳಿಕ ಆ ಮೂರು ಶರೀರಗಳಲ್ಲೂ ಅಖಂಡವಾಗಿ ತೋರುವ ಲೀಲಾವ್ಯಾಪಾರವೆಲ್ಲವೂ ಶುದ್ಧವಾದ ಲಿಂಗಪೂಜೆಯೇ ಆಗಿರುವುದು. ||೫೧||

ಲಿಂಗದೊಳಿಟ್ಟ ದೃಷ್ಟಿ ನಿಜದೃಷ್ಟಿಯೊಳಿರ್ದ್ದ ಮನಂ ಮನಸ್ಸಿನೊ |
ಳ್ಪಿಂಗದೆ ನಿಂದ ಭಾವ ಮದರೊ ಳ್ನೆಲೆಗೊಂಡ ಶಿವಾತ್ಮಲಿಂಗ ವಾ ||
ಲಿಂಗದೊ ಳಿದ್ದುನಿತ್ಯಸುಖಿಯಾಗಿ ವಿರಾಜಿಸುವಂಗೆ ಬಾಹ್ಯಕ |
ರ್ಮ್ಮಂಗ ಳವೇತಕಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೫೨||

ಟೀಕೆ—ಲಿಂಗದೊಳ್-ಶಿವಲಿಂಗದಲ್ಲಿ, ಇಟ್ಟ-ಇರಿಸಿದ, ದೃಷ್ಟಿ-ದೃಷ್ಟಿಯು, ನಿಜದೃಷ್ಟಿಯೊಳ್-ಸಹಜವಾದ ದೃಷ್ಟಿಯಲ್ಲಿ, ಇದ್ದು-ನೆಲಸಿದ, ಮನಂ-ಮನವು, ಮನಸ್ಸಿನೊಳ್-ಮನಸ್ಸಿನಲ್ಲಿ, ಪಿಂಗದೆ-ತೊಲಗದೆ, ನಿಂದ-ಸ್ಥಿರವಾದ, ಭಾವಂ-ಭಾವವು. ಅದರೊಳ್-ಆ ಭಾವದಲ್ಲಿ, ನೆಲೆಗೊಂಡ-ಸ್ಥಿರಗೊಂಡ, ಶಿವಾತ್ಮಲಿಂಗಂ-ಪರಮಾತ್ಮಲಿಂಗವು, ಆ ಲಿಂಗದೊಳ್-ಆ ಪರಮಾತ್ಮಲಿಂಗದಲ್ಲಿ, ಇದ್ದು-ಸಾಮರಸ್ಯವನೆಯ್ದಿ, ನಿತ್ಯಸುಖಿಯಾಗಿ-ಸದಾಸುಖಿಯಾಗಿ, ವಿರಾಜಿಸುವಂಗೆ-ಒಪ್ಪುವಾತಂಗೆ, ಬಾಹ್ಯಕರ್ಮ್ಮಂಗಳ್-ಜಡವ್ಯಾಪಾರಗಳು, ಅವು-ಅವುತಾನು, ಏತಕಯ್ಯ-ಏನುಪ್ರಯೋಜನವಯ್ಯ ? ||೫೨||

ಟಿಪ್ಪಣಿ—ಶಿವಲಿಂಗದಲ್ಲಿ ನೋಟವು ನಟ್ಟಿರಲು, ಆ ನೋಟದಲ್ಲಿ ಮನಸ್ಸು ಎಡೆಬಿಡದೆ ತಗುಲಿಕೊಂಡಿರಲು, ಆ ಮನಸ್ಸಿನಲ್ಲಿ ಭಾವವು ಅಗಲದೆ ನಿಂತಿರಲು, ಆ ಭಾವದಲ್ಲಿ ಅಚಲವಾಗಿ ಪರಮಾತ್ಮಲಿಂಗವು ನಿಂತಿರಲು, ಆ ಮಹಾಲಿಂಗದಲ್ಲಿ ಬೆರೆದು ಚಿರಪರಿಣಾಮಿಯಾಗಿರುವ ಶರಣನಿಗೆ ಇನ್ನು ಬಹಿರ್ವ್ಯಾಪಾರಗಳೆಲ್ಲಿರುವುವು ? ಅವುಗಳಿಂದವನಿಗೇನು ಪ್ರಯೋಜನವು ? ||೫೨||

ಅಂಗದ ಲಿಂಗಮಂ ಮನದ ಲಿಂಗಮ ನುತ್ತರಭಾವಲಿಂಗಮಂ |
ಸಂಗಿಸಿ ಪೂಜೆಗೆಯ್ದು ಮುಕುರಪ್ರತಿಬಿಂಬದವೊಲ್ಬಹಿಃಕ್ರಿಯಾ ||
ಸಂಗದೊಳಿರ್ದುಮಿಲ್ಲದಿಹ ತನ್ನಿಜಮೇ ನಿಜಮಾಗಿ ತೋರ್ಪ ಭ |
ಕ್ತಂ ಗೆಣೆಯುಂಟೆ ದೇವ ಪರಮಪ್ರಭುವೇ ಮಹದೈಪುರೀಶ್ವರಾ ||೫೩||

ಟೀಕೆ—ದೇವ-ಎಲೆ ಚಿತ್ಪ್ರಕಾಶರೂಪನೇ, ಅಂಗದಲಿಂಗಮಂ-ಇಷ್ಟಲಿಂಗವನ್ನು, ಮನದಲಿಂಗಮಂ-ಪ್ರಾಣಲಿಂಗವನ್ನು, ಉತ್ತರಭಾವಲಿಂಗಮಂ-ಸರ್ವೋತ್ಕೃಷ್ಟವಾದ ಭಾವಲಿಂಗವನ್ನು, ಸಂಗಿಸಿ-ಸಂಬಂಧಿಸಿಕೊಂಡು, ಪೂಜೆಗೆಯ್ದು, ಅರ್ಚನೆಯಮಾಡಿ, ಮುಕುರಪ್ರತಿಬಿಂಬದವೊಲ್-ಕನ್ನಡಿಯಲ್ಲಿ ತೋರ್ಪ ಪ್ರತಿಬಿಂಬದಹಾಗೆ; ಬಹಿಃಕ್ರಿಯಾಸಂಗದೊಳ್-ಬಾಹ್ಯಕ್ರಿಯಾಸಂಬಂಧದಲ್ಲಿ, ಇರ್ದುಂ-ಕೂಡಿದ್ದೂ, ಇಲ್ಲದಿಹ-ಇಲ್ಲದಿರ್ಪ, ತನ್ನಿಜಮೇ-ಆಲಿಂಗಸ್ವರೂಪವೇ, ನಿಜಮಾಗಿ-ತಾನೆಯಾಗಿ, ತೋರ್ಪ-ತೋರುವ ಭಕ್ತಂಗೆ-ಶಿವಶರಣಂಗೆ, ಎಣೆಯುಂಟೆ-ಸದೃಶವುಂಟೆ ? ||೫೩||

ಟಿಪ್ಪಣಿ—ಸ್ಥೂಲ ಸೂಕ್ಷ್ಮ ಕಾರಣ ದೇಹತ್ರಯದಲ್ಲೂ ಇರುವ ಇಷ್ಟಪ್ರಾಣಭಾವವೆಂಬ ಲಿಂಗತ್ರಯವನ್ನೂ ಒಂದಾಗಿಯೇಕಂಡು ಪೂಜಿಸಿ, ಆಲಿಂಗದಲ್ಲೇ ತಾದಾತ್ಮ್ಯವನ್ನು ಹೊಂದಿ, ತಾನು ಬಹಿರ್ವ್ಯಾಪಾರಿಯಂತೆ ತೋರುತ್ತಿದ್ದರೂ, ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದ ವ್ಯಾಪಾರವು ತೋರಿಕೆಗೆ ಮಾತ್ರವಾಗಿರುತ್ತ ನಿಜವಾಗಿ ಹೇಗಿರುವುದಿಲ್ಲವೋ ಹಾಗೆ ಬಹಿರ್ವ್ಯಾಪಾರಸಂಬಂಧವಿಲ್ಲದಿರುವ-ಲಿಂಗವೇ ತಾನಾದ-ಶಿವಶರಣನಿಗೆ ಸದೃಶರಾದವರು ಯಾರಿರುವರು ? ||೫೩||

ಅಂಗಮ ನಂಗದಿಂ ಕಳೆಯ ನಾಕಳೆಯಿಂ ಸುಖಮಂ ಸುಖೋಕ್ತಿಯಿಂ |
ಸಂಗಮ ನಾಪ್ರಸಂಗರತಿಯಿಂ ಲಯಮಂ ಲಯದಿಂ ನಿರಂತರಂ ||
ಸಂಗಿಸಿ ತತ್ಪ್ರಪಂಚವಿಷಯೈಕಬಹಿಷ್ಕೃತನಾಗಿ ರಾಜಿಪಂ |
ಲಿಂಗನಿಜೈಕ್ಯನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೫೪||

ಟೀಕೆ—ಲಿಂಗನಿಜೈಕ್ಯಂ-ಶಿವಲಿಂಗೈಕ್ಯನು, ಅಂಗಮಂ-ತನ್ನಂಗವನು, ಅಂಗದಿಂ-ಲಿಂಗದಂಗದೊಡನೆ, ಕಳೆಯಂ-ತನ್ನ ಕರಣಂಗಳನು, ಆಕಳೆಯಿಂ-ಆಲಿಂಗದ ಕರಣಂಗಳೊಡನೆ, ಸುಖಮಂ-ತನ್ನ ವಿಷಯಂಗಳನು, ಸುಖೋಕ್ತಿಯಿಂ-ಆಲಿಂಗದ ವಿಷಯವೆಂದುಪೇಳುವುದರೊಡನೆ, ಸಂಗಮಂ-ತನ್ನ ಇಂದ್ರಿಯಂಗಳನು, ಆಪ್ರಸಂಗರತಿಯಿಂ-ಆಲಿಂಗದ ವಿಶೇಷವಾದ ಇಂದ್ರಿಯಂಗಳರತಿಯೊಡನೆ, ಲಯಮಂ-ತನ್ನ ಚಿತ್ತಸಮಾಧಿಯನು, ಲಯದಿಂ-ಆಲಿಂಗದ ಚಿತ್ತಸಮಾಧಿಯೊಡನೆ, ನಿರಂತರಂ-ಎಡೆಎಡದೆ, ಸಂಗಿಸಿ-ಸಂಬಂಧಿಸಿ, ತತ್ಪ್ರಪಂಚವಿಷಯೈಕಬಹಿಷ್ಕೃತನಾಗಿ, ತತ್-ಆ,

ಪ್ರಪಂಚವಿಷಯ-ಅನಿತ್ಯವಾದವಿಷಯಂಗಳಿಗೆ, ಏಕ-ಮುಖ್ಯವಾಗಿ, ಬಹಿಷ್ಕೃತನಾಗಿ-ಬೇರಾದಾತನಾಗಿ, ರಾಜಿಪನಯ್ಯ-ಒಪ್ಪುತ್ತಿರ್ಪನಯ್ಯ. ||೫೪||

ಟಿಪ್ಪಣಿ—ಲಿಂಗದಲ್ಲಿ ಸಾಮರಸ್ಯವನ್ನೈದಿದ ಶರಣನು ತನ್ನ ದೇಹವನ್ನು ಲಿಂಗದ ದೇಹದೊಡನೆಯೂ, ತನ್ನ ಇಂದ್ರಿಯಗಳನ್ನು ಲಿಂಗೇಂದ್ರಿಯಗಳೊಡನೆಯೂ, ತನ್ನ ವಿಷಯವನ್ನು ಲಿಂಗೇಂದ್ರಿಯವಿಷಯದೊಡನೆಯೂ, ತನ್ನಿಂದ್ರಿಯಸಂಗವನ್ನು ಲಿಂಗೇಂದ್ರಿಯಸಂಗದೊಡನೆಯೂ, ತನ್ನ ಮನೋಲಯವನ್ನು ಲಿಂಗಮನೋಲಯದಲ್ಲೂ ಯಾವಾಗಲೂ ಎಡೆವಿಡದೆ ಕೂಡಿಸಿ, ಲಿಂಗವೇ ತಾನಾಗಿ, ಪ್ರಪಂಚವ್ಯಾಪಾರಕ್ಕೆ ದೂರನಾಗಿ ಒಪ್ಪುತ್ತಿರುವನು. ||೫೪||

ಅಂಗ ಮದಾರದೋ ಕರಣ ಮಾರದೊ ಪೂಜೆ ಯದಾರದೋ ಮಹಾ |
ಲಿಂಗ ಮದಾರದೋ ನೆರಪಿದಾತ ನದಾ ರಿವ ನೆಲ್ಲಮಂ ಮನೋ ||
ಮಂಗಳರೂಪನಾಗಿ ಬಯಲಂ ಬಯಲಿಂದಮೆ ಬಣ್ಣವಿಟ್ಟನಿ |
ಸ್ಸಂಗ ನಿರಂಗ ನೀನೆ ಪರಮಪ್ರಭುವೇ ಮಹದ್ಮೈಪುರೀಶ್ವರಾ ||೫೫||

ಟೀಕೆ—ಅಂಗಂ-ಅಂಗಸ್ವರೂಪವು, ಅದಾರದೋ—ಅದುತಾನಾರದೊ, ಕರಣಂ-ಕರಣಂಗಳು, ಆರದೊ-ಅದುತಾನಾರದೊ, ಪೂಜೆ-ಅರ್ಚನೆಯು, ಅದಾರದೋ-ಅದು ತಾನಾರದೊ, ಮಹಾಲಿಂಗಂ-ಘನಲಿಂಗವು, ಅದಾರದೋ-ಅದುತಾನಾರದೊ, ಇವನೆಲ್ಲಮಂ-ಇವನೆಲ್ಲವನೂ, ನೆರಪಿದಾತಂ-ಒಟ್ಟುಕೂಡಿಸಿದಾತನು, ಅದಾರ್-ಅದುಯಾರು ? ಮನೋಮಂಗಳರೂಪನಾಗಿ-ಮನಸ್ಸಿಗೆ ಮಾಂಗಲ್ಯಸ್ವರೂಪನಾಗಿ, ಬಯಲಂ-ನಿರಾಕಾರಲಿಂಗವನು, ಬಯಲಿಂದಮೆ-ಮಹಾಜ್ಞಾನದಿಂದಲೇ, ಬಣ್ಣವಿಟ್ಟ-ಒಪ್ಪವಿಟ್ಟಂಥ, ನಿಸ್ಸಂಗ-ಸಂಗರಹಿತನಾದ, ನಿರಂಗ-ಜೀವಭಾವವಳಿದ ಶರಣನು,ನೀನೆ-ನೀನೆಯಲಾ ||೫೫||

ಟಿಪ್ಪಣಿ—ಎಲೈ ಸ್ವಾಮಿಯೆ, ಈ ದೇಹವು ಯಾರದು ? ಇಂದ್ರಿಯಗಳು ಯಾರವು ? ಈ ಅರ್ಚನೆಯು ಯಾರದು ? ಪೂಜಿಸಿಕೊಳ್ಳತಕ್ಕ ಆ ಮಹಾಲಿಂಗವು ಯಾರದು ? ಇವೆಲ್ಲವನ್ನೂ ಒಟ್ಟಿಗೆ ಕೂಡಿಸಿದವನಾರು ? ಮನಸ್ಸಿಗೆ ಮಂಗಳವನ್ನುಂಟುಮಾಡುವ ಸ್ವರೂಪವುಳ್ಳವನಾಗಿ, ನಿರಾಕಾರವಾಗಿದ್ದ ಮಹಾಲಿಂಗವನ್ನು ಜ್ಞಾನಾನುಗ್ರಹದಿಂದ ಗೋಚರವಾಗುವಂತೆ ಮಾಡಿದ ಆ ಶರಣನು ನಿರಾಕಾರನೂ ನಿಸ್ಸಂಗನೂ ಆದ ನೀನೆಯಲ್ಲವೆ ? ||೫೫||

ಲಿಂಗದೊ ಳಿರ್ದ್ದು ಲಿಂಗಮನೆ ತಾಳ್ದು ನಿರಂತರಲಿಂಗಪೂಜೆಯಂ |
ಲಿಂಗದಿ ನೊಲ್ದು ವಿಸ್ತರಿಸಿ ಲಿಂಗಕೆ ಲಿಂಗಮ ನರ್ಪಿಸುತ್ತು ಮಾ ||
ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ |
ಲಿಂಗನಿಜೈಕ್ಯನಯ್ಯ ಪರಮಪ್ರಭುವೇ ಮಹದ್ಮೈಪುರೀಶ್ವರಾ ||೫೬||

ಟೀಕೆ—ಲಿಂಗನಿಜೈಕ್ಯಂ-ಸಹಜವಾದಲಿಂಗೈಕ್ಯನು, ಲಿಂಗದೊಳ್-ಮಹಾಲಿಂಗದಲ್ಲಿ, ಇರ್ದ್ದು-ಕೂಡಿದ್ದು, ಲಿಂಗಮನೆ-ಆ ಮಹಾಲಿಂಗವನೇ, ತಾಳ್ದು-ಧರಿಸಿ

ನಿರಂತರಲಿಂಗಪೂಜೆಯಂ-ಎಡೆಬಿಡದಿರ್ದ ಶಿವಲಿಂಗಪೂಜೆಯನು, ಲಿಂಗದಿಂ-ಆ ಶಿವ ಲಿಂಗದಿಂದ, ಒಲ್ದು-ಸಂತೋಷಿಸಿ, ವಿಸ್ತರಿಸಿ-ವಿಶಾಲಮಂಮಾಡಿ, ಲಿಂಗಕೆ-ಆ ಶಿವ ಲಿಂಗಕ್ಕೆ, ಲಿಂಗಮಂ-ಆ ಶಿವಲಿಂಗವನು, ಅರ್ಪಿಸುತ್ತುಂ-ಸಮರ್ಪಣೆಮಾಡುತ್ತಲೂ, ಆ ಲಿಂಗಪದಾರ್ಥಮಂ-ಆ ಶಿವಲಿಂಗಸ್ವರೂಪವಾದ ಪದಾರ್ಥವನು, ಸವಿದು-ಆಸ್ವಾದಿಸಿ, ಲಿಂಗಸುಖಾಸ್ಪದನಾಗಿ, ಆ ಮಹಾಲಿಂಗಸುಖಕ್ಕೆ ಸ್ಥಾನವಾದಾತನಾಗಿ, ರಾಜಿಪನಯ್ಯ-ಒಪ್ಪುತ್ತಿರ್ಪನು, (ಈ ಅರ್ಥದಲ್ಲಿ—" ಬ್ರಹ್ಮಹವಿರ್ಬ್ರಹ್ಮಾರ್ಪಣಂ ಬ್ರಹ್ಮಗೌಬ್ರ್ರಹ್ಮಣಾಹುತಂ |ಬ್ರಹ್ಮೈವತೆನಗಂತವ್ಯಂ ಬ್ರಹ್ಮಕರ್ಮಸಮಾಧಿನಾ " ಎಂದು ಯಾಜ್ಞವಲ್ಕ್ಯೋಪನಿಷತ್ತುಂಟಾಗಿ.) ||೫೬||

ಟಿಪ್ಪಣಿ—" ಲಿಂಗದೇಹೀಶಿವಾತ್ಮಾಯಂಲಿಂಗಾಚಾರೋನಲೌಕಿಕಃ | ಸರ್ವಂಲಿಂಗಮಯಂ ರೂಪಂ ಲಿಂಗೇನಸಮಮಶ್ನುತೆ || ಸರ್ವಾಂಗಲಿಂಗಮೇವಸ್ಯಾದನ್ನಪಾನಾದ್ಯಮರ್ಪಿತಂ ಪ್ರಸಾದಸ್ತ್ವಿತಿರೇವಸ್ಯಾತ್ಸರ್ವಂಲಿಂಗಮಯತ್ವತಃ || ಎಂಬ ಪ್ರಮಾಣದಂತೆ ಲಿಂಗೈಕ್ಯನಾಗಿ, ಸರ್ವವನ್ನೂ ಲಿಂಗವನ್ನಾಗಿಯೇ ತಿಳಿದಿರುವ ಶರಣನು ತಾನು ಲಿಂಗದಲ್ಲಿಯೇ ಇದ್ದು, ಆ ಲಿಂಗವನ್ನೇ ಧರಿಸಿಕೊಂಡು, ಆ ಲಿಂಗರೂಪವಾದ ವಸ್ತುಗಳಿಂದ ಆ ಲಿಂಗಪೂಜೆಯನ್ನು ಮಾಡಿ, ಲಿಂಗಕ್ಕೆ ಲಿಂಗರೂಪವಾದ ಅನ್ನಪಾನಾದಿಗಳನ್ನರ್ಪಿಸಿ, ಆ ಲಿಂಗರೂಪವಾದ ಪ್ರಸಾದವನ್ನು ಸೇವಿಸಿ, ಲಿಂಗಸೌಖ್ಯವನ್ನು ಅನುಭವಿಸಿ, ವಿರಾಜಿಸುತ್ತಿರುವನು. ||೫೬||

ಶೂನ್ಯವೆ ಗಟ್ಟಿಗೊಂಡು ಬಹಿರಂತರಖಂಡಿತಲಿಂಗಮಾಗಿ ನಿ |
ಶ್ಶೂನ್ಯಗುರೂಪದೇಶಮುಖದಿಂ ಮುಖತೃಪ್ತಿಯ ನೆಯ್ದೆ ತನ್ಮಖಾ ||
ನ್ಯೋನ್ಯಸಮರ್ಪಿತಾಖಿಳಪದಾರ್ಥಸುಖಪ್ರತಿಪತ್ತಿ ವೀರಶೈ |
ವಾನ್ಯರಿಗೆತ್ತಲುಂಟು ಪರಮಪ್ರಭುವೇ ಮಹದೈಪುರೀಶ್ವರಾ ||೫೭||

ಟೀಕೆ—ನಿಶ್ಶೂನ್ಯಗುರೂಪದೇಶಮುಖದಿಂ--ನಿಶ್ಶೂನ್ಯಗುರು—ನಿಷ್ಕಳರೂಪನಾದ ಶ್ರೀಗುರುವಿನ, ಉಪದೇಶಮುಖದಿಂ-ದೀಕ್ಷಾತ್ರಯದಮುಖದಿಂ, ಶೂನ್ಯವೆ-ನಿರಾಕಾರವಾದಲಿಂಗವೇ, ಗಟ್ಟಿಗೊಂಡು-ಸಾಕಾರವಾಗಿ, ಬಹಿರಂತರಖಂಡಿತಲಿಂಗಮಾಗಿ-ಒಳಗೂಹೊರಗೂಬೇರ್ಪಡಿಸಲ್ಪಟ್ಟಲಿಂಗವಾಗಿ, ಮುಖತೃಪ್ತಿಯಂ-ಶರಣನ ಷಡಿಂದ್ರಿಯಗಳೆಂಬ ಮುಖದಿಂ ತುಷ್ಟಿಯನ್ನು, ಎಯ್ದೆ-ಹೊಂದಲು, ತನ್ಮಖಾನ್ಯೋನ್ಯಸಮರ್ಪಿತಾಖಿಳಪದಾರ್ಥಸುಖಪ್ರತಿಪತ್ತಿ—ತನ್ಮಖ—ಆಲಿಂಗಮುಖದಿಂದ, ಅನ್ಯೋನ್ಯ-ತಮ್ಮೊಳ್ತಮ್ಮಲ್ಲಿ, ಸಮರ್ಪಿತ-ಅರ್ಪಿಸಲ್ಪಟ್ಟ, ಅಖಿಳ-ಸಮಸ್ತವಾದ, ಪದಾರ್ಥ-ವಸ್ತುಗಳಿಂದಲಾದ, ಸುಖ-ಆನಂದದ, ಪ್ರತಿಪತ್ತಿ-ಗ್ರಹಿಸುವುದು, ವೀರಶೈವಾನ್ಯರಿಗೆ-ವೀರಶೈವರಲ್ಲದವರಿಗೆ, ಎತ್ತಲುಂಟು-ಎಲ್ಲಿಯದು? ||೫೭||

ಟಿಪ್ಪಣಿ—ನಿಷ್ಕಳರೂಪನಾದ ಶ್ರೀಗುರುವು ನಿರಾಕಾರವಾಗಿದ್ದ ಮಹಾಲಿಂಗವನ್ನು ಸಾಕಾರವನ್ನಾಗಿಮಾಡಿ, ವೇಧಾ, ಮನು ಕ್ರಿಯೆಯೆಂಬ ದೀಕ್ಷಾತ್ರಯದಿಂದ ಶರಣನ ಅಂತರ್ಬಹಿರಂಗದಲ್ಲೆಲ್ಲಾ ಆ ಸಾಕಾರ ಲಿಂಗಗಳನ್ನು ಪ್ರತಿಷ್ಠಿಸಲಾಗಿ, ಅವುಗಳಲ್ಲಿ ಆಚಾರಲಿಂಗವು ಭಕ್ತನ ನಾಸಿಕಾಮುಖದಿಂದ ಗಂಧಪದಾರ್ಥವನ್ನೂ, ಗುರುಲಿಂಗವು ಜಿಹ್ವಾಮುಖದಿಂದ ರಸಪದಾರ್ಥವನ್ನೂ, ಶಿವಲಿಂಗವು ನೇತ್ರಮುಖದಿಂದ ರೂಪಪದಾರ್ಥವನ್ನೂ, ಜಂಗಮಲಿಂಗವು ತ್ವಙ್ಮುಖದಿಂದ ಮೃದುಕಠೋರಾದಿ ಪದಾರ್ಥಗಳನ್ನೂ, ಪ್ರಸಾದಲಿಂಗವು ಶ್ರೋತ್ರಮುಖದಿಂದ ಶಬ್ದಪದಾರ್ಥವನ್ನೂ, ಮಹಾಲಿಂಗವು ಹೃದಯಮುಖದಿಂದ ಪರಿಣಾಮಪದಾರ್ಥವನ್ನೂ, ಸ್ವೀಕರಿಸಿ ಸಂತುಷ್ಟವಾಗಲಾಗಿ, ಹಾಗೆ ಲಿಂಗಮುಖಾರ್ಪಿತವಾಗಿ ಬಂದ ಆಯಾ ಪ್ರಸಾದವನ್ನು ಆಯಾ ಇಂದ್ರಿಯಮುಖದಿಂದಲೇ ಸ್ವೀಕರಿಸಿ ಸುಖಿಸುವ ಯೋಗವು ಗುರುಮುಖದಿಂದ ದೀಕ್ಷಿತರಾದ ವೀರಶೈವರಿಗಲ್ಲದೆ ಮತ್ತಾರಿಗೆ ಲಭಿಸುವುದು ? ॥೫೭॥

ನಿನ್ನ ಪದಾಂಬುವೇ ನಿನಗೆ ಮಜ್ಜನವಾರಿ ತವಪ್ರಸಾದದಿ |
ವ್ಯಾನ್ನಮೆ ಭೋಜನಾನ್ನ ಮಿದು ತಥ್ಯ ಮದಲ್ಲದೆ ಬೇರೆ ಮೀಸಲಾ ||
ದನ್ನಮು ಮಂಬುವುಂ ಜಗದೊ ಳುಂಟೆ ಯಥೋಚಿತಭಕ್ತಿಭಾವಸಂ |
ಪನ್ನಮನಃಪ್ರಸನ್ನ ಪರಮಪ್ರಭುವೇ ಮಹದೈವುರೀಶ್ವರಾ ||೫೮||

ಟೀಕೆ—ಯಥೋಚಿತಭಕ್ತಿಭಾವಸಂಪನ್ನಮನಃಪ್ರಸನ್ನ—ಯಥೋಚಿತ-ಹೀಂಗೆದೊರಕಿದುದಾದ, ಭಕ್ತಿಭಾವ-ಭಕ್ತಿಭಾವದಿಂ, ಸಂಪನ್ನ-ಕೂಡಿದಶರಣನ ಮನಃ-ಮನದಲ್ಲಿ, ಪ್ರಸನ್ನ-ಸಾಕ್ಷಾತ್ಕರಿಸಿದಪರಮಪ್ರಭುವೆ, ನಿನ್ನ ಪದಾಂಬುವೆ-ನಿನ್ನ ಪಾದತೀರ್ಥವೇ, ನಿನಗೆ ಮಜ್ಜನವಾರಿ-ನಿನಗೆ ಅಭಿಷೇಕೋದಕವು, ತವಪ್ರಸಾದದಿವ್ಯಾನ್ನಮೆ-ತವ-ನಿನ್ನ ಪ್ರಸಾದ-ಪ್ರಸಾದವೆಂಬ, ದಿವ್ಯಾನ್ನಮೆ-ಶ್ರೇಷ್ಠವಾದ ಬೋನವೇ, ಭೋಜನಾನ್ನಂ-ನೈವೇದ್ಯವು, ಇದು-ಇಂತಪ್ಪುದು, ತಥ್ಯಂ-ನಿಶ್ಚಯ, ಅದಲ್ಲದೆ-ಅದಂಬಿಟ್ಟು, ಬೇರೆ-ಪೃಥಕ್ಕಾಗಿ. ಮೀಸಲಾದ-ಕೈದುಡುಕದ, ಅನ್ನಮುಂ-ಅನ್ನವೂ, ಅಂಬುವುಂ-ಉದಕವೂ, ಜಗದೊಳ್-ಲೋಕದಲ್ಲಿ, ಉಂಟೆ ? ಇಲ್ಲ. ಜಗತ್ತಿನಲ್ಲಿರ್ಪ ಉದಕಂಗಳೆಲ್ಲವೂ ಓಷಧಿಗಳೆಲ್ಲವೂ ಶಿವನಪಾದೋದಕಪ್ರಸಾದಗಳೆಂಬುದರ್ಥ. ||೫೮||

ಟಿಪ್ಪಣಿ—ಶಾಸ್ತ್ರವಿಹಿತವಾದ ನಿಷ್ಕಾಮಭಕ್ತಿಯಿಂದ ಕೂಡಿದ ಶರಣನ ಮನಸ್ಸಿನಲ್ಲಿ ಪ್ರತ್ಯಕ್ಷನಾಗುವ ಎಲೈ ಪರಮೇಶ್ವರನೆ, ನಿನ್ನ ಪಾದತೀರ್ಥವೇ ನಿನಗೆ ಅಭಿಷೇಕಜಲವಾಗಿರುವುದು. ನಿನ್ನ ಪ್ರಸಾದಾನ್ನವೇ ನಿನಗೆ ನೈವೇದ್ಯವಾಗಿರುವುದು. ಇದು ಸತ್ಯವಾದ ಮಾತು. ಹೇಗೆಂದರೆ:— " ತದ್ವಿಶ್ವರೂಪಿಣಶ್ಶಂಭೋಸ್ಸಂಭೂತಾಷ್ಷಡ್ರಸಾನ್ವಿತಾಃ| ಸಮಸ್ತಾಷ್ಷಡ್ವಿಧಾಹಾರಾಜಲಪುಷ್ಪಾದಯಸ್ತಥಾ ॥ ಈಶಪ್ರಸಾದಸಂಲಬ್ಧಾಭವೇಯುರ್ನಾತ್ರಸಂಶಯಃ ॥ ಅಪಾರಮೇಶ್ವರಂತಸ್ಮಾದಿಹಕಿಂಚಿನ್ನವಿದ್ಯತೆ " ಎಂಬ ವಚನಪ್ರಮಾಣದಂತೆ ಅನ್ನ ಜಲಾದಿ ಸಕಲ ಪದಾರ್ಥಗಳೂ ವಿಶ್ವಸ್ವರೂಪನಾದ ಈಶ್ವರನಿಂದಲೇ ಸಂಭೂತಗಳಾದ ಕಾರಣ, ಎಲ್ಲವೂ ಶಿವಪ್ರಸಾದ ತೀರ್ಥಗಳೇ ಆಗಿರುವುವು. ಅದು

ಹೊರತು ಲೋಕದಲ್ಲಿ ಶಿವಸಂಬಂಧವಿಲ್ಲದ ಅನ್ನ ಪಾನೀಯಗಳಾವುದಾದರೂ ಇರುವುದುಂಟೆ? ಇಲ್ಲವೆಂದುಭಾವ. ||೫೮||

ಅವತಾರಿಕೆ—ಸಹಜಲಿಂಗೈಕ್ಯತ್ವಮಂ ಮುಂದೆ ಪೇಳುತ್ತಿರ್ದಪಂ :—

ಛಾಯಮೆ ರೂಪಮಾಗಿ ವರರೂಪಮೆ ನೋೞ್ಪೊಡೆ ಯಲ್ಲಿ ನಿರ್ಮಳ |
ಚ್ಛಾಯ ಮದಾಗಿ ಜೀವಮೆ ನಿರಂಶಕದಿಂ ಸಲೆ ಕಾಯಮಾಗಿ ತ ||
ತ್ಕಾಯಮೆ ಜೀವಮಾಗಿ ನಿರುಪಾಧಿಕಲಿಂಗನಿಜಾಂಗಸಂಗನಿ |
ರ್ಮಾಯತೆಯಿೞಗ ಭಕ್ತಿಪರಮಪ್ರಭುವೇ ಮಹದೈಪುರೀಶ್ವರಾ ||೫೯||

ಟೀಕೆ—ಛಾಯಮೆ-ಪ್ರತಿಬಿಂಬವೇ, ರೂಪಮಾಗಿ-ಬಿಂಬವಾಗಿ, ವರರೂಪಮೆ-ಆ ಶ್ರೇಷ್ಠವಾದ ಬಿಂಬವೇ, ನೋೞ್ಪೊಡೆ-ವಿಚಾರಿಸಿದೊಡೆ, ಅಲ್ಲಿ-ಆ ಸ್ಥಳದಲ್ಲಿ, ಅದು-ಅದುತಾನು, ನಿರ್ಮಳಚ್ಛಾಯಮಾಗಿ-ಸ್ವಚ್ಛವಾದ ಪ್ರತಿಬಿಂಬವಾಗಿ, (ಇಹುದೆಂತಂತೆ) ಜೀವಮೆ-ಜೀವನೇ, ನಿರಂಶಕದಿಂ-ನಿರವಯವತ್ವದಿಂದ, ಸಲೆ-ಚೆನ್ನಾಗಿ, ಕಾಯಮಾಗಿ-ಶರೀರಮಾಗಿ, ತತ್ಕಾಯಮೆ-ಆ ದೇಹವೇ, ಜೀವಮಾಗಿ-ಜೀವಸ್ವರೂಪವಾಗಿ, (ಇಹುದು) ನಿರುಪಾಧಿಕಲಿಂಗನಿಜಾಂಗಸಂಗನಿರ್ಮಾಯತೆಯಿೞಗ-ನಿರುಪಾಧಿಕ-ಇದು ಜೀವ ಎದು ಕಾಯವೆಂಬ ಉಪಾಧಿಯಿಲ್ಲದ, ಲಿಂಗನಿಜಾಂಗಸಂಗ-ಸಹಜವಾದಂಗಲಿಂಗಸಂಬಂಧದಲ್ಲಿ, ನಿರ್ಮಾಯತೆಯಿೞಗ—ಮಾಯೆಯಿಲ್ಲದಿಹುದೀಗವೇ, ಭಕ್ತಿ-ಭಕ್ತಿಯು, (ಈ ಅರ್ಥದಲ್ಲಿ—"ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಸ್ಯಾಂತೇ ವಿಶ್ವಮಾಯಾನಿವೃತ್ತಿಃ" ಎಂದು ಶ್ವೇತಾಶ್ವತರೋಪನಿಷತ್ತುಂಟಾಗಿ). ||೫೯||

ಟಿಪ್ಪಣಿ—ಬಿಂಬವು ಮತ್ತೊಂದರಲ್ಲಿ ತೋರಿದಾಗ ಪ್ರತಿಬಿಂಬವಾಗಿಯೂ, ವಿಚಾರಮಾಡಿ ನೋಡಿದರೆ ಆ ಪ್ರತಿಬಿಂಬವೇ ಬಿಂಬವಾಗಿಯೂ ತೋರುವಂತೆ, ಶಿವನ ಅಂಶವಾದ ಜೀವವೇ ಆ ಶಿವನ ಕಾಯ (ಅಂಗ) ವಾಗಿಯೂ, ಆ ಶಿವನ ಕಾಯವೇ ಜೀವವಾಗಿಯೂ ಇರುತ್ತಿರುವವು. (ಜೀವವೆಂಬುದು ಶಿವಾಂಶವಾಗಿರುವುದು. ಶಿವನಿಂದ ಅಧಿಷ್ಠಾನರೂಪವಾಗಿ ಅಂಗೀಕರಿಸಲ್ಪಡುವ ನಿಮಿತ್ತದಿಂದ ಶಿವಾಂಗವೆಂಬುದಾಗಿ ಹೇಳಿಸಿಕೊಳ್ಳುವುದು. ಸರ್ವಜ್ಞತ್ವ ಸರ್ವತೃಪ್ತತ್ವಾದಿ ಷಡ್ಗುಣಗಳಿಂದ ಕೂಡಿದ ಆ ಅಂಗಸ್ಥಲವೇ ಶಿವಸ್ವರೂಪವಾಗಿರುವುದು. ಈ ಅರ್ಥದಲ್ಲಿ—"ಆತ್ಮಾಽಯಂಕೇವಲಶ್ಶುದ್ಧಶ್ಶಿವಸ್ಯಾಂಶಸ್ಸದಾಽಮಲಃ । ನಿತ್ಯೋನಿರಂಜನಶ್ಶಾಂತಸ್ತಸ್ಮಾದಾತ್ಮಾಸ್ವಯಂಶಿವಃ ॥ ಸೋಯಮಾತ್ಮಾಶಿವಾಂಗಂಸ್ಯಾಚ್ಛಿವೇನಾಂಗೀಕೃತತ್ವತಃ । ಸರ್ವಜ್ಞತ್ವಾದಿಭೇದೈಶ್ಚ ಶಿವಾಂಗಮಿದಮಿಷ್ಯತೆ ॥ ಸರ್ವಜ್ಞತ್ವಂಚತೃಪ್ತತ್ವಂತಥಾಽನಾದಿಪ್ರಬೋಧತಾ । ಸ್ವತಂತ್ರತಾಪಿಚಾಲುಪ್ತಶಕ್ತಿತಾಽನಂತಶಕ್ತಿತಾ ॥ ಇತ್ಯೇತೈರ್ಲಕ್ಷಣೈಷ್ಷಡ್ಭಿಶ್ಶಿವಾಂಗಮಿತಿಲಕ್ಷ್ಯತೆ । ತಸ್ಮಾದಂಗಸ್ಥಲಂ ಸಾಕ್ಷಾದಾತ್ಮೈವಹಿನಸಂಶಯಃ" ಎಂದು ಪ್ರಮಾಣವುಂಟು). ಇದು ಜೀವ-ಇದು ದೇಹವೆಂಬ ಉಪಾಧಿಗಳನ್ನೆಲ್ಲಾ ಅಳಿದು ಸಹಜವಾದ ಲಿಂಗದಲ್ಲಿ ಬೆರೆದು ನಿರ್ಮಾಯಕವಾಗಿರುವುದೇ ಸಹಜಭಕ್ತಿಯೆನಿಸುವುದು. ||

ರುದ್ರಪದಂ ಗಣೇಶ್ವರಪದಂ ಮೊದಲಾದ ಸಮಸ್ತಸಂಪದಂ |
ಕ್ಷುದ್ರತರಂ ಶಿವಾಂಗಶಿವಲಿಂಗನಿಜೈಕ್ಯಸುಖಾಸ್ಪದಂಗೆ ಸಂ ||
ವಿದ್ರುಚಿರಾತ್ಮಕಂಗೆ ಸಮಖಂಡಿತಖಂಡಿತ ಕಾಯಜೀವದಿಂ |
ಮುದ್ರಿತನಾದವಂಗೆ ಪರಮಪ್ರಭುವೇ ಮಹದೈಪುರೀಶ್ವರಾ ||೬೦||

ಟೀಕೆ—ಶಿವಾಂಗಶಿವಲಿಂಗ ನಿಜೈಕ್ಯಸುಖಾಸ್ಪದಂಗೆ-ಶಿವಾಂಗ-ಶಿವಸ್ವರೂಪವಾದಂಗದ, ಶಿವಲಿಂಗ-ಮಹಾಲಿಂಗದ, ನಿಜ-ಸಹಜವಾದ, ಐಕ್ಯಸುಖ-ಸಾಮರಸ್ಯದಪರಿಣಾಮಕ್ಕೆ, ಅಸ್ಪದಂಗೆ-ಸ್ಥಾನವಾದಾತನಾದ, ಸಂವಿದ್ರುಚಿರಾತ್ಮಕಂಗೆ-ಸಂವಿತ್-ಜ್ಞಾನದಿಂ, ರುಚಿರ-ಒಪ್ಪುತ್ತಿರ್ಪ, ಆತ್ಮಕಂಗೆ-ಸ್ವರೂಪವುಳ್ಳಾತನಾದ, ಸಮಖಂಡಿತಖಂಡಿತಕಾಯಜೀವದಿಂ-ಸಮ್-ಸಮ್ಯಕ್ಕಾದ, ಅಖಂಡಿತ-ಮಹಾಲಿಂಗವೆಂಬ, ಖಂಡಿತ-ಇಷ್ಟಲಿಂಗವೆಂಬ, ಕಾಯಜೀವದಿಂ-ಪ್ರಾಣದೇಹಗಳಿಂದ, ಮುದ್ರಿತನಾದವಂಗೆ-ಕಟ್ಟುವಡೆಯಲ್ಪಟ್ಟ ಶರಣಂಗೆ, ರುದ್ರಪದಂ-ರುದ್ರಪದವು, ಗಣೇಶ್ವರಪದಂ-ಪ್ರಮಥಗಣಪದವು, ಮೊದಲಾದ-ಆದಿಯಾದ, ಸಮಸ್ತಸಂಪದಂ-ಬಹಳವಾದ ಸಂಪದಂಗಳು, ಕ್ಷುದ್ರತರಂ-ಅತ್ಯಂತನಿಕೃಷ್ಟವು. ||೬೦||

ಟಿಪ್ಪಣಿ—ಲಿಂಗಾಂಗಸಾಮರಸ್ಯ ಸುಖಾಶ್ರಯನಾಗಿಯೂ, ಶಿವಜ್ಞಾನಸ್ವರೂಪನಾಗಿಯೂ, ಮಹಾಲಿಂಗ-ಇಷ್ಟಲಿಂಗಗಳ ರೂಪವಾದ ಪ್ರಾಣದೇಹಗಳಿಂದ ಕೂಡಿದವನಾಗಿಯೂ ಇರುವ ಶಿವಶರಣನಿಗೆ ರುದ್ರಪದವಿ ಪ್ರಮಥಪದವಿ ಮೊದಲಾದ ಸಕಲ ಪದವಿಗಳೂ ಅತ್ಯಂತ ಕ್ಷುಲ್ಲಕವಾಗಿರುತ್ತುವೆ. ||೬೦||

ಆದಿಯನಾದಿ ಮಧ್ಯಮವಸಾನ ಮೆನಿಪ್ಪವ ನೊಂದುಗೂಡಿ ಸಾ |
ಕ್ಷಾದಮೃತಪ್ರಸಾದಪರಿಪೂರ್ಣಭವತ್ಕರುಣಾಲಸತ್ಕಟಾ ||
ಕ್ಷೋದಯ ಮಾರಿ ಗಾದಪು ದವ ರ್ಗರಿದೇ ಶಿವಯೋಗಸಿದ್ಧಿ ನಿ |
ರ್ಭೇದಸುಖಾಭಿವೃದ್ಧಿ ಪರಮಪ್ರಭುವೇ ಮಹದೈಪುರೀಶ್ವರಾ ||೬೧||

ಟೀಕೆ—ಆದಿ-ದೇಹವು, ಅನಾದಿ-ಆತ್ಮನು, ಮಧ್ಯಂ-ಕರಣಾದಿಗಳು, ಅವಸಾನಮೆನಿಪ್ಪವಂ-ಕಡೆಯಾಗಿರ್ಪವನೆಲ್ಲವಂ, ಒಂದುಗೂಡಿ—ಲಿಂಗದಲ್ಲಿ ಸಮರಸಂಮಾಡಿ, ಸಾಕ್ಷಾತ್......ದಯಂ-ಸಾಕ್ಷಾತ್-ಪ್ರತ್ಯಕ್ಷವಾದ, ಅಮೃತ-ಅಮೃತಸ್ವರೂಪವಾದ, ಪ್ರಸಾದ-ಅನುಗ್ರಹದಿಂ, ಪರಿಪೂರ್ಣ-ತುಂಬಲ್ಪಟ್ಟ, ಭವತ್-ನಿನ್ನ, ಕರುಣಾ-ಕೃಪೆಯಿಂದ, ಲಸತ್-ಒಪ್ಪುತ್ತಿರ್ಪ, ಕಟಾಕ್ಷ-ಕಡೆಗಣ್ಣಿನ ನೋಟದ, ಉದಯಂ-ಅಂಕುರವು, ಆರಿಗೆ-ಆವಾತಂಗೆ, ಆದಪುದು-ಆಹುದು, ಅವರ್ಗೆ-ಅವರುಗಳಿಗೆ, ಶಿವಯೋಗಸಿದ್ಧಿನಿರ್ಭೇದಸುಖಾಭಿವೃದ್ಧಿ-ಶಿವಯೋಗಸಿದ್ಧಿ-ಶಿವಸಾಮ

ರಸ್ಯದ ಸಿದ್ಧಿಯಲ್ಲಿಯು, ನಿರ್ಭೇದ-ಭೇದವಿಲ್ಲದ, ಸುಖ-ಆನಂದದ, ಅಭಿವೃದ್ಧಿ-ಪೆಚ್ಚುಗೆ, ಅರಿದೆ-ಅಸಾಧ್ಯವೆ ? ಅಲ್ಲ. ||೬೧||

ಟಿಪ್ಪಣಿ—ಎಲೆ ಸ್ವಾಮಿಯೆ ! ಯಾರು ತಮ್ಮ ದೇಹಾತ್ಮಕರಣ ಮೊದಲಾದುವುಗಳನ್ನೆಲ್ಲಾ ನಿನ್ನ ಸ್ವರೂಪವಾದ ಶಿವಲಿಂಗದಲ್ಲಿ ಲಯಗೊಳಿಸಿ, ಪ್ರತ್ಯಕ್ಷಾಮೃತ ಸ್ವರೂಪವಾದ ಅನುಗ್ರಹದಿಂದ ತುಂಬಿರುವ ನಿನ್ನ ಕರುಣಾಕಟಾಕ್ಷಕ್ಕೆ ಪಾತ್ರರಾಗುವರೋ, ಅಂಥವರಿಗೆ ಲಿಂಗಾಂಗಸಾಮರಸ್ಯ ಪ್ರಾಪ್ತಿಯಿಂದ ಲಭಿಸುವ ಅಖಂಡಾನಂದ ಸಮೃದ್ಧಿಯು ದೊರೆವುದು ಅಸಾಧ್ಯವೆ ? ||೬೧||

ಎಲ್ಲಿಯ ಮುಕ್ತಿ ಯೆಲ್ಲಿಯ ಪರಾಗತಿ ಯೆಲ್ಲಿಯ ಪಾರಲೌಕಿಕಂ |
ನಿಲ್ಲು ಷಡಂಗಲಿಂಗಮುಖಖಂಡಿತಜೀವಶರೀರಯೋಗದಿಂ ||
ಪಲ್ಲಟಮಾಗಿ ಪೂರ್ವತನು ಪೋಗಿ ನಿಜೈಕ್ಯವಿಶೇಷದಲ್ಲಿ ತಾಂ |
ನಿಲ್ಲದೆ ನಿಂದವಂಗೆ ಪರಮಪ್ರಭುವೇ ಮಹದೈಪುರೀಶ್ವರಾ ||೬೨||

ಟೀಕೆ—ಷಡಂಗ......ಯೋಗದಿಂ-ಷಡಂಗ—ಭಕ್ತಾದ್ಯಂಗವಾರರ, ಲಿಂಗ-ಆಚಾರಾದಿ ಲಿಂಗವಾರರ, ಮುಖ-ಮುಖದಿಂದೆ, ಖಂಡಿತ-ಬೇರ್ಪಡಿಸಲ್ಪಟ್ಟ, ಜೀವಶರೀರಯೋಗದಿಂ—ತನುಜೀವಸಂಬಂಧದಿಂದ, ಪಲ್ಲಟಮಾಗಿ—ವ್ಯತ್ಯಸ್ತವಾಗಿ, ಪೂರ್ವತನು-ಮೊದಲಕಾಯವು, ಪೋಗಿ-ಅಳಿದು, ನಿಜೈಕ್ಯವಿಶೇಷದಲ್ಲಿ-ನಿಜಲಿಂಗೈಕ್ಯವೆಂಬ ವಿಶೇಷದಲ್ಲಿ, ತಾಂ-ತಾನು, ನಿಲ್ಲದೆ ನಿಂದವಂಗೆ-ತಳುವಿಲ್ಲದೆ ನಿಂದ ಶರಣಂಗೆ, ಎಲ್ಲಿಯಮುಕ್ತಿ-ಮೋಕ್ಷವೆಲ್ಲಿಯದು ? ಎಲ್ಲಿಯಪರಾಗತಿ-ಎಲ್ಲಿಯ ಉತ್ಕೃಷ್ಟವಾದ ಗತಿ ? ಎಲ್ಲಿಯಪಾರಲೌಕಿಕಂ—ಪರಲೌಕಿಕವ್ಯಾಪಾರವೆಲ್ಲಿಯದು ? ನಿಲ್ಲು-ಸಾಕು. (ಈ ಅರ್ಥದಲ್ಲಿ '' ನನಿರೋಧೋನಚೋತ್ಪತ್ತಿರ್ನಬದ್ಧೋನಚಸಾಧಕಃ || ನಮುಮುಕ್ಷುರ್ನವಾಮುಕ್ತ ಇತ್ಯೇಷಾಪರಮಾರ್ಥತಾ '' ಎಂದು ಅಮೃತಬಿಂದೂಪನಿಷತ್ತುಂಟಾಗಿ. ||೬೨||

ಟಿಪ್ಪಣಿ—ಎಲೆ ಪ್ರಭುವೆ, ತನ್ನ ದೇಹಾತ್ಮಗಳು ಭಕ್ತಾದಿ ಆರು ಅಂಗಸ್ಥಳಗಳ ಆಚಾರಾದಿ ೬ ಲಿಂಗಸ್ಥಲಗಳ ರೂಪದಿಂದ ಭೇದಗೊಂಡು, ವಿಸ್ತರಿಸಲಾಗಿ, ತನ್ನ ಪೂರ್ವದೇಹ ಧರ್ಮವಳಿದು ಲಿಂಗಾಂಗಸಾಮರಸ್ಯ ಸ್ಥಲದಲ್ಲಿ ನಿಂತ ಶರಣನಿಗೆ ಮೋಕ್ಷ-ಉತ್ತಮಗತಿ-ಪರಲೋಕಗತಿ-ಯೆಂಬಿವುಗಳೆಲ್ಲಾ ಯಾವ ಮಹಾಪದವಿಗಳು ! (" ಧರ್ಮಾದಿಪುರುಷಾರ್ಥಾನಾಂ ಚತುರ್ಣಾಂಪರತಃಪರಾ | ಪಂಚಮಃ ಪುರುಷಾರ್ಥೋಽಹಿಭಕ್ತಿಶ್ಶೈವೀಸನಾತನೀ " ಎಂಬ ಅನುಭವಸೂತ್ರ ವಚನದಂತೆ ಸಮರಸಭಕ್ತಿಯು ಚತುರ್ವಿಧ ಪುರುಷಾರ್ಥಗಳನ್ನೂ ಮೀರಿರುವುದಾದಕಾರಣ, ಅಂಥ ಭಕ್ತಿಯಿಂದ ಸಂಪನ್ನನಾದವನಿಗೆ ಮೋಕ್ಷ ಮೊದಲಾದ ಪರಗತಿಗಳು ಸಹ ತೃಣಪ್ರಾಯಗಳಾಗಿರುವುವೆಂದು ಭಾವ). ||೬೨||

ಉಸುರೆಡೆಯಾಟಮೇ ಕರಗಸಂ ಕೊರೆವಲ್ಲಿ ಶರೀರಜೀವದಾ |
ಬೆಸುಗೆಯ ನೆಯ್ದೆ ಬಿಚ್ಚಿ ಬಿಸು ಟಂತದ ರೈಕ್ಯಮ ನಾರು ಬಲ್ಲ ರಾ ||

ಉಸುರುಮ ನಾಶರೀರಮುಮ ನಾಘನಜೀವಮ ನೊಂದುಗೂಡಿರಾ |
ಜಿಸುವುದೆ ನಿನ್ನಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೬೩||

ಟೀಕೆ—ಶರೀರಜೀವದ-ಕಾಯಜೀವಂಗಳ, ಆ ಬೆಸುಗೆಯಂ-ಆ ಪೊರ್ದುಗೆಯನು, ಎಯ್ದೆ-ಚೆನ್ನಾಗಿ, ಬಿಚ್ಚಿಬಿಸುಟಂತೆ-ಬೇರ್ಪಡಿಸಿ ಕಡೆಗೆಬಿಸುಟಂತೆ, ಕೊರೆವಲ್ಲಿ-ಕೊಯ್ವಲ್ಲಿ, ಉಸುರೆಡೆಯಾಟವೆ-ಪ್ರಾಣವಾಯುವಿನ ಸಂಚಾರವೇ, ಕರಗಸಂಕ್ರಕಚವು, ಅದರೈಕ್ಯಮಂ-ಆ ಕಾಯಜೀವಪ್ರಾಣಕೂಟವನು, ಆರುಬಲ್ಲರು-ಬಲ್ಲವರಾರು ? ಆ ಉಸುರುಮಂ—ಆ ಪ್ರಾಣವಾಯುವನೂ, ಆ ಶರೀರಮುಮಂ—ಆ ಕಾಯವನೂ, ಆ ಘನಜೀವಮಂ-ಆ ದೊಡ್ಡಿತ್ತಾದ ಜೀವವನೂ, ಒಂದುಗೂಡಿ-ಲಿಂಗದಲ್ಲಿ ಸೇರಿಸಿ, ರಾಜಿಸುವುದೆ-ಒಪ್ಪುತ್ತಿರ್ಪುದೇ, ನಿನ್ನಭಕ್ತಿ-ಎಲೆಶಿವನೇ ನಿನ್ನ ಭಕ್ತಿಯು. ||೬೩||

ಟಿಪ್ಪಣಿ—ದೇಹದಲ್ಲಿ ನಡೆಯುತ್ತಿರುವ ಶ್ವಾಸೋಚ್ಛ್ವಾಸಕರ್ಮವು ದೇಹಕ್ಕೂ, ಜೀವಕ್ಕೂ ಇರುವ ಬೆಸುಗೆಯನ್ನು ಬಿಚ್ಚಿ ಹಾಕಿಸಿ ಬೇರ್ಪಡಿಸುವುದಕ್ಕೆ ಸಾಧಕವಾಗಿ ಗರಗಸದಂತ ಕೊರೆಯುತ್ತಿರುವುದು. ಅಂಥ ಪ್ರಾಣವೂ, ದೇಹವೂ, ಜೀವವೂ ಅಗಲದೆ ಕೂಟಗೊಂಡಿರುವಂತ ಮಾಡುವ ರೀತಿಯನ್ನು ಶರಣನ ಹೊರತು ಮತ್ತಾರು ತಿಳಿದಿರುವರು ? ಆ ಪ್ರಾಣ ದೇಹ ಜೀವವೆಲ್ಲವನ್ನೂ ಶಿವಲಿಂಗದಲ್ಲಿ ಲೀನಗೊಳಿಸಿ ಒಪ್ಪುತ್ತಿರುವಿಕೆಯೇ ನಿನ್ನ ಸಮರಸಭಕ್ತಿಯಾಗಿರುವುದು. ಅದೇ ಶರಣನಲ್ಲಿರುವ ಆರೀತಿಯು ||೬೩||

ಕಡೆ ದಿಳುಹಿಟ್ಟ ಕಪ್ಪುರದ ಪುತ್ತಳಿಯಂ ತೆಸೆ ವಂಗಸಂಗದೊ |
ಳ್ಗಡಣಿಸಿ ತೋರ್ಪ ತತ್ಪರಿಮಳಾಕೃತಿಯಂದದೆ ಲಿಂಗಸಂಗ ಮೊ ||
ಗ್ಗೊಡೆಯದೆ ರಮ್ಯವಾಗಿ ಶಿವಲಿಂಗನಿಜಾಂಗದ ಸಂಗಸೌಖ್ಯಮಂ |
ಪಡೆದಿಹು ದೀಗ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೬೪||

ಟೀಕೆ—ಕಡೆದು—ಶುದ್ಧಮಂತದಿಂ ಕಡೆದು, ಇಳುಹಿಟ್ಟ-ಕಡೆಗೆ ಇರಿಸಿದ, ಕಪ್ಪುರದ-ಕರ್ಪೂರದ, ಪುತ್ತಳಿಯಂತೆ-ಬೊಂಬೆಯಂತೆ, ಎಸೆವ-ಒಪ್ಪುತ್ತಿರ್ಪ, ಅಂಗಸಂಗದೊಳ್-ಶರೀರಸಂಬಂಧದಲ್ಲಿ, ಗಡಣಿಸಿ-ವ್ಯಾಪಿಸಿಕೊಂಡು, ತೋರ್ಪ-ತೋರುವಂಥ, ತತ್ಪರಿಮಳಾಕೃತಿಯಂದದೆ-ಆ ಪರಿಮಳದ ಆಕಾರದಂತೆ, ಲಿಂಗಸಂಗಂ-ಲಿಂಗಾಂಗಸಂಬಂಧವು, ಒಗ್ಗೊಡೆಯದೆ-ಬೇರಾಗದೆ, ರಮ್ಯಮಾಗಿ-ಮನೋಹರಮಾಗಿ, ಶಿವಲಿಂಗನಿಜಾಂಗದ-ಲಿಂಗಾಂಗಗಳ, ಸಂಗ-ಸಂಬಂಧದಲ್ಲಿಯ, ಸೌಖ್ಯಮಂ-ಪರಿಣಾಮವನು, ಪಡೆದಿಹುದೀಗ-ಪಡೆದಿರ್ಪುದೀಗ, ಭಕ್ತಿ-ಶಿವಭಕ್ತಿಯು. ||೬೪||

ಟಿಪ್ಪಣಿ—ಕರ್ಪೂರವನ್ನು ಕಡೆದು ಮಾಡಿಟ್ಟ ಬೊಂಬೆಯಲ್ಲಿ ಉಪಾಧಿಮಾತ್ರವಾಗಿ ಆಕಾರವು ಹೇಗಿರುವುದೋ ಹಾಗೆ ತನ್ನ ದೇಹವು ಲೀಲಾಮಾತ್ರವಾಗಿ ತೋರಿಕೆಗೆ ಇದ್ದು, ಆ ಕರ್ಪೂರದ ಬೊಂಬೆಯು ದೇಹವಾದ್ಯಂತದಲ್ಲೂ ಸುಗಂಧವು ಬೇರ್ಪಡದೆ ಹೇಗೆ ವ್ಯಾಪಿಸಿಕೊಂಡಿರುವುದೋ ಅದ

ತನ್ನ ದೇಹವಾದ್ಯಂತದಲ್ಲೂ ಎಡೆವಿಡದೆ ಲಿಂಗಗುಣವು ವ್ಯಾಪಿಸಿಕೊಂಡಿರಲು, ಹಾಗೆ ಒಂದ ನ್ನೊಂದೆಡೆವಿಡದಿರುವ ಲಿಂಗ-ಅಂಗಗಳ ಸಾಮರಸ್ಯದಿಂದುಂಟಾಗುವ ಸೌಖ್ಯವನ್ನು ಅನುಭವಿಸುತ್ತ ಲಿರುವುದೇ ಭಕ್ತಿಯೆನಿಸಿಕೊಳ್ಳುವುದು. ||೬೪||

ಸ್ಫಟಿಕಘಟಪ್ರದೀಪದವೊ ಲಂಗದ ಲಿಂಗದ ಸಂಗದೈಕ್ಯಸಂ |
ಘಟಿತವಿಭೇದವರ್ಜವಿಮಳಾಕೃತಿವೆತ್ತ ವಿಲಾಸ ದೇಳ್ಗೆಯಿಂ ||
ನಟಿಯಿಸಿ ತೋರ್ಪ ಮೂರ್ತಿವಿಡಿದೊಪ್ಪುವ ಶಾಂಭವಯೋಗಸಿದ್ಧಿ ತಾಂ |
ದಿಟ ಮಹುದೀಗ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೬೫||

ಟೀಕೆ—ಸ್ಫಟಿಕಘಟಪ್ರದೀಪದವೊಲ್-ಸ್ಫಟಿಕಘಟ-ಪಳುಕಿನಕೊಡದಲ್ಲಿಯ, ಪ್ರದೀಪದವೊಲ್-ಪ್ರಕಾಶಿಸುವದೀಪದಹಾಂಗೆ, ಅಂಗದ-ತನ್ನಂಗದ, ಲಿಂಗದ-ಶಿವ ಲಿಂಗದ, ಸಂಗದ-ಸಂಬಂಧದ, ಐಕ್ಯಸಂಘಟಿತವಿಭೇದವರ್ಜವಿಮಳಾಕೃತಿವೆತ್ತ- ಐಕ್ಯ-ಸಮರಸದಲ್ಲಿ, ಸಂಘಟಿತ-ಕೂಡಿಸಲ್ಪಟ್ಟ, ವಿಭೇದ-ಭೇದವು, ವರ್ಜ-ಇಲ್ಲದ, ವಿಮಲ-ನಿರ್ಮಳವಾದ, ಆಕೃತಿವೆತ್ತ-ಆಕಾರವತಳೆದ, ವಿಲಾಸದ-ಲೀಲೆಯ, ಏಳ್ಗೆ ಯಿಂ-ಪೆರ್ಚುಗೆಯಿಂದೆ, ನಟಿಯಿಸಿ-ನರ್ತಿಸಿ, ತೋರ್ಪ-ಕಾಣಿಸುವ, ಮೂರ್ತಿವಿಡಿ ದು-ಆಕಾರವಿಡಿದು, ಒಪ್ಪುವ-ರಂಜಿಸುವ, ಶಾಂಭವಯೋಗಸಿದ್ಧಿ-ಶಿವಸಾಮರಸ್ಯದ ಸಿದ್ಧಿಯು, ತಾನೀಗ-ಅದು ತಾನೀಗಳೇ, ಭಕ್ತಿ-ಭಕ್ತಿಯು, ದಿಟಮಹುದು-ಇದು ನಿಶ್ಚಯವಪ್ಪುದು. ||೬೫||

ಟಿಪ್ಪಣಿ—ಸ್ಫಟಿಕದ ಕೊಡದ ಮಧ್ಯದಲ್ಲಿರುವ ದೀಪದಂತೆ ತನ್ನ ಶರೀರದಲ್ಲಿ ಶಿವಲಿಂಗ ಮೂರ್ತಿಯ ಸಂಬಂಧವಿರುತ್ತಿರಲು, ಆ ದೀಪದ ಕಾಂತಿಯು ಒಳಗೂ ಹೊರಗೂ ಭೇದವಿಲ್ಲದೆ ಒಂದೇಸಮನಾಗಿ ಪ್ರಸರಿಸಿಕೊಂಡಿರುವಂತೆ, ದೇಹವಾದ್ಯಂತದಲ್ಲೂ ಒಳಗೂ ಹೊರಗೂ ಭೇದ ವಿಲ್ಲದೆ ಲಿಂಗಗುಣವು ವ್ಯಾಪಿಸಿಕೊಂಡಿರಲಾಗಿ, ತಾನು ಲೀಲಾಮಾತ್ರವಾದ ದೇಹವಂ ಪೊತ್ತು ಲಿಂಗಾಂಗಸಾಮರಸ್ಯದ ಪರಿಣಾಮಿಯಾಗುವುದೇ ಭಕ್ತಿಯೆನಿಸಿಕೊಳ್ಳುವುದು. ||೬೫||

ಗಗನದೊ ಳಿಂದ್ರಚಾಪ ಮತುಳಾನಿಲನೊ ಳ್ಸುಳಿ ದೀಪ್ತವಹ್ನಿಯೊ |
ಳ್ಸೊಗಯಿಪ ತತ್ಕಣಂ ಸಲಿಲದೊ ಳ್ಕರಕಂ ಮಹಿಯೊ ಳ್ಮಹಿಸ್ಮಪಾಂ ||
ಸು ಗತವಹಂತೆ ಲಿಂಗದೊ ಳಭಿನ್ನತೆಯಿಂ ಗತಮಪ್ಪ ನಿರ್ಮಲಾಂ |
ಗಗುಣ ಮದೀಗ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೬೬||

ಟೀಕೆ—ಗಗನದೊಳ್-ಆಕಾಶದಲ್ಲಿ, ಇಂದ್ರಚಾಪಂ—ಇಂದ್ರಧನುವಿನಂತೆ, ಅತುಳಾನಿಲನೊಳ್—ಘನವಾದಗಾಳಿಯಲ್ಲಿ, ಸುಳಿ—ಸುಳಿಗಾಳಿಯಂತೆ, ದೀಪ್ತವಹ್ನಿ ಯೊಳ್-ದೀಪ್ತ-ಪ್ರಕಾಶಿಸುವ, ವಹ್ನಿಯೊಳ್-ಅಗ್ನಿಯಲ್ಲಿ, ಸೊಗಯಿಪ—ರಂಜಿಸು ವಂಥ, ತತ್ಕಣಂ-ಆ ಅಗ್ನಿಯ ಕಿಡಿಯಂತೆ, ಸಲಿಲದೊಳ್-ಉದಕದಲ್ಲಿ, ಕರಕಂ-

ವಾರಿಶಿಲೆಯಂತೆ, ಮಹಿಯೊಳ್-ಭೂಮಿಯಲ್ಲಿ, ಮಹಿಷ್ಠ-ಬಹುವಾಗಿರುವ, ಪಾಂಸು-ಧೂಳಿಯು, ಗತವಹಂತೆ-ಅಡಗುವಂತೆ-ಲಿಂಗದೊಳ್-ಮಹಾಲಿಂಗದಲ್ಲಿ, ಅಭಿನ್ನತೆಯಿಂ-ಬೇರಿಲ್ಲದಿರ್ಪುದರಿಂದೆ, ಗತಮಪ್ಪ-ಅಡಗುವಂಥ, ನಿರ್ಮಲಾಂಗಗುಣಂ-ನಿರ್ಮಲವಾದದೇಹಗುಣವು, ಅದೀಗ-ಅದು ತಾನೀಗ, ಭಕ್ತಿ-ಶಿವಭಕ್ತಿಯು (ಈ ಅರ್ಥದಲ್ಲಿ :—" ಮೃತ್ಪಿಂಡಮೇಘೋಪಲವಿಸ್ಫುಲಿಂಗವರ್ತೀಂದ್ರಚಾಪಸ್ಥವಪುಃಕ್ರಮೇಣ | ಸ್ಯುಃಪಾರ್ಥಿವಾಪ್ಯಾಮಳತೇಜಸೌಖ್ಯವಾಯವ್ಯಸದ್ವ್ಯೋಮವಿಭೇದಭಿನ್ನಾಃ" ಎಂದುಂಟಾಗಿ). ||೬೬||

ಟಿಪ್ಪಣಿ—ಆಕಾಶದಲ್ಲಿ ಇಂದ್ರಧನುಸ್ಸೂ ಗಾಳಿಯಲ್ಲಿ ಸುಳಿಯೂ, ಉರಿಯುವ ಬೆಂಕಿಯಲ್ಲಿ ಕಿಡಿಯೂ, ನೀರಿನಲ್ಲಿ ಆಲಿಕಲ್ಲೂ, ಭೂಮಿಯಲ್ಲಿ ಧೂಳಿಯೂ ಹುಟ್ಟಿ, ಬೇರಾದಂತೆ ತೋರುತ್ತಿದ್ದರೂ, ಕಡೆಗೆ ಅಭಿನ್ನವಾಗಿ ಹೇಗೆ ಅವವುಗಳಲ್ಲೇ ಅಡಗಿ ಹೋಗುವುವೊ, ಹಾಗೆ ಭಿನ್ನವಾಗಿ ತೋರುತ್ತಿದ್ದ ದೇಹದ ಗುಣವು ಕಡೆಗೆ ಮಹಾಲಿಂಗದಲ್ಲಿ ಲಯಿಸಿ ಹೋಗುವುದೇ ಭಕ್ತಿಯೆನಿಸಿಕೊಳ್ಳುವುದು. ||೬೬||

ಮನ ಮದು ವಾಕ್ಕಿನೊ ಳ್ವಿಮಲವಾ ಕ್ಕದು ತಾಂ ಮನದೊ ಳ್ಮನೋವಚೋ |
ಘನತರಯೋಗ ಮಾತನುವಿನೊ ಳ್ತನುವಾಸ ವಚೋಮನಸ್ಸಿನೊ ||
ಳ್ಸಿನೆ ತೆರ ಹಿಲ್ಲದಂತೆ ನೆರೆ ಕೂಡಿ ಪರಸ್ಪರಲೀನಮಾದವಾ |
ಸನೆ ಯದು ತಾನೆ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೬೭||

ಟೀಕೆ—ಮನಮದು-ಮನತಾನದು, ವಾಕ್ಕಿನೊಳ್-ವಾಕ್ಕಿನಲ್ಲಿ, ವಿಮಲವಾಕ್ಕದು ನಿರ್ಮಲವಾಕ್ಕೆಂಬುದುತಾನು, ಮನದೊಳ್-ಮನದಲ್ಲಿ, ಮನೋವಚೋಘನತರಯೋಗಂ-ಮನ—ಮನಸ್ಸಿನ, ವಚಃ-ವಾಕ್ಯದ, ಘನತರ—ದೊಡ್ಡಿತ್ತಾದ, ಯೋಗಂ-ಕೂಟವು. ಆತನುವಿನೊಳ್-ಆ ದೇಹದಲ್ಲಿ, ತನುವಾಸ-ತನುವಿನನಿಲುಗಡೆಯು, ವಚೋಮನಸ್ಸಿನೊಳ್-ವಾಕ್ಕಿನಲ್ಲಿಯೂ ಮನಸ್ಸಿನಲ್ಲಿಯೂ, ಸಿನೆತೆರಹಿಲ್ಲದಂತೆ-ಕಿಂಚಿತ್ತೂತೆರಹಿಲ್ಲದಹಾಂಗೆ, ನೆರೆಕೂಡಿ-ಚೆನ್ನಾಗಿಕೂಡಿ. ಪರಸ್ಪರಲೀನಮಾದ-ಅನ್ಯೋನ್ಯಮಾಗಿ ಅಡಗಿದ, ವಾಸನೆ-ಸಂಸ್ಕಾರವು, ಅದುತಾನೆ-ತಾನದೀಗ, ಭಕ್ತಿ-ಶಿವಕ್ತಿಯು. ||೬೭||

ಟಿಪ್ಪಣಿ—ಮನಸ್ಸು ವಾಕ್ಕಿನಲ್ಲೂ, ವಾಕ್ಕು ಮನಸ್ಸಿನಲ್ಲೂ, ಆ ಮನೋವಾಕ್ಕುಗಳೆರಡೂ ದೇಹದಲ್ಲೂ, ಆ ದೇಹವು ಮನೋವಾಕ್ಕುಗಳೆರಡರಲ್ಲೂ ಎಡೆವಿಡದಂತೆ ಕೂಡಿ ಓಂದರಲ್ಲೊಂದು ಲೀನವಾಗಿರುವ ಸಂಸ್ಕಾರವೇ (ಅಂದರೆ—ವಾಙ್ಮನಃಕಾಯಪ್ರವೃತ್ತಿಗಳೆಲ್ಲಾ ಒಂದಾಗಿರುವುದೇ) ಭಕ್ತಿಯೆನಿಸಿಕೊಳ್ಳುವುದು. ||೬೭||

ಮನದೊಳೆ ತೋರಿದರ್ಥ ಮದು ವಾಕ್ಕಿನೊ ಳೆಂತರಿವಂತೆ ತೋರಿತಾಂ |
ಮನದೊಳೆ ವಾಕ್ಕಿನೊ ಳ್ಕರತಳಾಮಳಕಾಕೃತಿಯಾಗಿ ಸತ್ಯಚಿ ||

ದ್ಘನಪರಮಾರ್ಥ ಮುಜ್ಜ್ವಳಿಸಿ ತೋರುತಿಹಂತೆ ಮದೀಯಕಾಯದೊ |
ಳ್ತನಿಮೊನೆದೋರಿಸಯ್ಯ ಪರಮಪ್ರಭುವೇಮಹದ್ಯೈಪುರೀಶ್ವರಾ ||೬೮||

ಟೀಕೆ—ಮನದೊಳೆ-ಮನಸ್ಸಿನಲ್ಲಿ, ತೋರಿದ-ಕಾಣಿಸಿದ, ಅರ್ಥಂ-ಅರ್ಥವು, ಅದು-ಅದುತಾನು, ವಾಕ್ಕಿನೊಳ್-ವಾಕ್ಕಿನಲ್ಲಿ, ಎಂತು-ಹೇಗೆ; ಅರಿವಂತೆತೋರಿ-ತಿಳಿವಂತೆಕಾಣಿಸಿ, ತಾಂ-ಅದುತಾನು, ಮನದೊಳೆ-ಮನಸ್ಸಿನಲ್ಲಿಯೂ, ವಾಕ್ಕಿನೊಳ್-ವಾಕ್ಕಿನಲ್ಲಿಯೂ, ಕರತಳಾಮಳಕಾಕೃತಿಯಾಗಿ-ಅಂಗೈಯೊಳಗಣ ನೆಲ್ಲಿಯಕಾಯಾಕಾರದಹಾಂಗೆ-ಮದೀಯಕಾಯದೊಳ್-ಎನ್ನ ಸಂಬಂಧವಾದ ಶರೀರದಲ್ಲಿ, ಸತ್ಯಚಿದ್ಘನಪರಮಾರ್ಥಂ-ಸತ್ಯಜ್ಞಾನಾನಂದಗಳಿಂದ ಸಾಂದ್ರಮಪ್ಪ ಪರಮಾರ್ಥವು, ಉಜ್ಜ್ವಳಿಸಿ-ಹೊರಹೊರಟು, ತೋರುತಿಹಂತೆ-ಕಾಣಿಸುವಹಾಂಗೆ, ತನಿಮೊನೆದೋರಿಸಯ್ಯ-ಚೆನ್ನಾಗಿತಲೆದೋರಿಸಯ್ಯ (ಈ ಅರ್ಥದಲ್ಲಿ—'' ಯದ್ಧಿಮನಸಾಧ್ಯಾಯತಿ ತದ್ವಾಚಾವದತಿ ತತ್ಕರ್ಮಣಾಕರೋತಿ '' ಎಂದು ಯಜುರ್ವೇದಮುಂಟಾಗಿ).

ಟಿಪ್ಪಣಿ—ಎಲೆ ಪ್ರಭುವೆ, ಮನಸ್ಸಿನಲ್ಲಿ ತೋರಿದ ಪರಮಾರ್ಥವೇ ವಾಕ್ಕಿನಲ್ಲಿ ತೋರುವಂತೆಯೂ, ಆ ಮನೋವಾಕ್ಕುಗಳೆರಡರಲ್ಲೂ ಅಂಗೈಯೊಳಗಣ ನಲ್ಲಿಯು ಕಾಯಂತೆ ಸ್ಪಷ್ಟವಾಗಿ ತೋರುವ ಪರಮಾರ್ಥವೇ ನನ್ನ ದೇಹವ್ಯಾಪಾರದಲ್ಲೂ ಸ್ಪಷ್ಟವಾಗಿ ಕಾಣುವಂತೆ ಅನುಗ್ರಹಿಸು (ಅಂದರೆ-ತ್ರಿಕರಣವೂ ಒಂದಾಗಿ ನಿನ್ನಲ್ಲೈಕ್ಯವಾಗುವಂತೆ ಮಾಡು, ಎಂದು ಭಾವವು). ||೬೮||

ಗಗನದೊಳುಲ್ಕೆ ಬೀಳ್ವವೊಲು ನೋಡಲು ನೋಡ ಅಡಂಗಿ ಪೋಪ ಸೋ |
ಜಿಗದ ಚಮತ್ಕೃತಿ ಪ್ರಕೃತಿಸಿದ್ಧಗುಣಾಧಿಕದೇಹಪಾತಮು ||
ರ್ವಿಗೆ ಪೊಸತಾಗಿ ಲಿಂಗದೊಳಡಂಗುವ ನಿತ್ಯಸುಖಾವಗಾಹಸಿ |
ದ್ಧಿಗೆ ಸರಿ ನಿನ್ನಭಕ್ತಿ ಪರಮಪ್ರಭುವೇ ಮಹದ್ಯೈಪುರೀಶ್ವರಾ ||೬೯||

ಟೀಕೆ—ಗಗನದೊಳ್-ಆಕಾಶದಲ್ಲಿ, ಉಲ್ಕೆಬೀಳ್ವವೊಲು-ನಕ್ಷತ್ರವು ಬೀಳ್ವಹಾಂಗೆ, ನೋಡಲು ನೋಡಲ್-ಕಾಣುತ ಕಾಣಿಸುತ್ತಿರ್ದಂತೆ, ಅಡಂಗಿಪೋಪ-ಅಡಗಿಹೋಗುವ, ಸೋಜಿಗದ-ಚೋದ್ಯದ, ಚಮತ್ಕೃತಿಪ್ರಕೃತಿಸಿದ್ಧಗುಣಾಧಿಕದೇಹಪಾತಂ-ಚಮತ್ಕೃತಿ-ಚಮತ್ಕಾರದ, ಪ್ರಕೃತಿಸಿದ್ಧ-ಸ್ವಭಾವಸಿದ್ಧವಾದ, ಗುಣ-ಗುಣದಿಂದೆ, ಅಧಿಕ-ಅಧಿಕವಾದ, ದೇಹಪಾತಂ-ಶರೀರನಾಶವು, ಉರ್ವಿಗೆ-ಭೂಮಿಗೆ, ಪೊಸತಾಗಿ-ನೂತನವಾಗಿ, ಲಿಂಗದೊಳ್-ಶಿವಲಿಂಗದಲ್ಲಿ, ಅಡಂಗುವ-ಲೀನಮಪ್ಪ, ನಿತ್ಯಸುಖಾವಗಾಹಸಿದ್ಧಿಗೆ-ನಿತ್ಯಸುಖ-ನಿತ್ಯಾನಂದದಲ್ಲಿಯ, ಅವಗಾಹ-ಮುಳುಂಗುವುದರ, ಸಿದ್ಧಿಗೆ-ಪ್ರಾಪ್ತಿಗೆ, ನಿನ್ನಭಕ್ತಿ-ಎಲೆಶಿವನೆ ನಿನ್ನಭಕ್ತಿಯು, ಸರಿ-ಸಮವು.

ಟಿಪ್ಪಣಿ—ಎಲೆ ಶಿವನೆ, ಆಕಾಶದಲ್ಲಿ ಬೀಳುವ ನಕ್ಷತ್ರವು ನೋಡು ನೋಡುತ್ತಿದ್ದಂತೆಯೇ ಕಣ್ಣಿಗೆ ಕಾಣದೆ ಅಡಗಿ ಹೋಗುವಹಾಗೆ ದೇಹವುಕೂಡ ತೋರು ತೋರುತ್ತಿದ್ದಂತೆಯೇ ಅಳಿದು

ಹೋಗುವುದು ಸ್ವಭಾವಸಿದ್ಧವಾದ ಅದರ ಚಮತ್ಕಾರಿಕಗುಣವು. ನಿಸರ್ಗಸಿದ್ಧವಾದ ಅಂತಹ ದೇಹ ಪಾತವು ಜಗತ್ತಿಗೆ ಹೊಸದಾಗಿರುವಂತೆ ಲಿಂಗದಲ್ಲಿ ಸಮನಿಸಿ, ಅಡಗಿಹೋಗುವಂತೆ ಮಾಡಿ, ನಿಜಾನಂದವನ್ನುಂಟುಮಾಡುವ ಶಕ್ತಿಯು, ನಿನ್ನ ಭಕ್ತಿಯಲ್ಲಿರುವುದು (ಅಂದರೆ ಹುಟ್ಟಿದ ದೇಹಕ್ಕೆ ಅಳಿವು ಸಿದ್ಧವಾದುದು. ಅಂತಪ್ಪ ದೇಹವನ್ನಾಂತವರೆಲ್ಲಾ ಮುಕ್ತರಾಗಲಾರರು. ದೇಹಕರಣಾದಿ ವ್ಯಾಪಾರಗಳನ್ನೆಲ್ಲಾ ಮಹಾಲಿಂಗದಲ್ಲೈಕ್ಯಗೊಳಿಸುವ ಭಕ್ತಿಮಾರ್ಗವನ್ನನುಸರಿಸಿದ ಶರಣರೇ ನಿತ್ಯಮುಕ್ತರಪ್ಪರೆಂದು ಭಾವವು). ||೮೯||

ಅವತಾರಿಕೆ—ಇನ್ನು ಶಿವಾನುಗ್ರಹಮಂ ಪ್ರಾರ್ಥಿಸುತ್ತಿರ್ದಪಂ.—

ಭವಹರ ನಿನ್ನ ಕಣ್ಣೆವೆಗಳಾಟದಿ ನಬ್ಜಭವಾದಿಗಳ್ಗೆ ಸಂ |
ಭವಿಸುವು ದುದ್ಭವಂ ಮರಣ ಮೆಂದೆನ ಲಿನ್ನು ಮನುಷ್ಯಕೀಟಜ ||
ನ್ಮವ ನಿರದೆಯ್ದಿ ಬಾಳುವರ ನಿತ್ಯತೆಯೇ ನಿದರೊಳ್ಕೃಪಾಪ್ರಸಾ |
ದವ ನಿರದಿತ್ತು ಕಾಯಿ ಪರಮಪ್ರಭುವೇ ಮಹದೈಪುರೀಶ್ವರಾ ||೭೦||

ಟೀಕೆ—ಭೋಭವಹರ-ಎಲೆಸಂಸಾರಭೇದಕನೆ, ನಿನ್ನ, ಕಣ್ಣೆವೆಗಳಾಟದಿಂ-ಕಣ್ಣೆವೆಯಹಳಚುವಷ್ಟರೊಳಗೆ, ಅಬ್ಜಭವಾದಿಗಳ್ಗೆ-ಬ್ರಹ್ಮವಿಷ್ಣು ಮೊದಲಾದವರ್ಗೆ, ಉದ್ಭವಂ-ಉತ್ಪತ್ತಿಯು, ಮರಣಂ-ಮರಣವು, ಸಂಭವಿಸುವುದು-ಉಂಟಾಗುವುದು, ಎಂದೆನಲ್-ಹೀಗೆಂದೆನಲಾಗಿ, ಇನ್ನು-ಇಷ್ಟರಮೇಲೆ, ಮನುಷ್ಯಕೀಟಜನ್ಮವಂ-ಮಾನವಜನ್ಮವೆಂಬ ಹುಳುವಿನ ಜನ್ಮವನು, ಇರದೆ-ಬಿಡದೆ, ಎಯ್ದಿ-ಪೊರ್ದಿ, ಬಾಳುವರ-ಬದುಕುವರ, ನಿತ್ಯತೆ-ಸ್ಥಿರತ್ವವು, ಇದರೊಳ್-ಇದರಲ್ಲಿ, ಏಂ-ಏನುಂಟು ? ಕೃಪಾಪ್ರಸಾದವಂ-ನಿನ್ನ ಕಾರುಣ್ಯಪ್ರಸಾದವನು, ಇರದೆ-ಬಿಡದೆ, ಇತ್ತು-ಕೊಟ್ಟು, ಕಾಯಿ-ರಕ್ಷಿಸು. ||೭೦||

ಟಿಪ್ಪಣಿ—ಎಲೈ ಸ್ವಾಮಿಯೆ, ನೀನು ಕಣ್ಣರೆಪ್ಪೆಯನ್ನು ಮುಚ್ಚುವಷ್ಟರೊಳಗಾಗಿ ಬ್ರಹ್ಮವಿಷ್ಣು ಮೊದಲಾದ ದೇವತೆಗಳಿಗೆ ಜನನ ಮರಣಗಳು ಸಂಭವಿಸಿ ಹೋಗುವುವೆಂದು ಹೇಳಲ್ಪಡುತ್ತಿರಲಾಗಿ, ಇನ್ನು ಮಾನವಜನ್ಮವೆಂಬ ಸಣ್ಣ ಹುಳುವಿನ ಜನ್ಮವನ್ನು ಹೊಂದಿ ಬಾಳುತ್ತಿರುವವರ ಸ್ಥಿರತೆಯನ್ನು ಹೇಳುವುದೇನು ? ಅದುಕಾರಣ ಬೇಗನೆ ನಿನ್ನ ಕರುಣಾಪ್ರಸಾದವನ್ನಿತ್ತು ರಕ್ಷಿಸು. ||೭೦||

ಪವನಸಮುದ್ಧತಾಂಬುರುಹಪತ್ರಪಯಃಕಣದಂತೆ ಚಂಚಲ |
ತ್ವವ ನಿರದೆಯ್ದಿಜೀವಿಸುವ ಜೀವನದಲ್ಲಿ ಭವತ್ಪ್ರಸಾದಮು ||
ಳ್ಳವನೆಕೃತಾರ್ಥ ನೇವೆನೆನ ಗಿಲ್ಲೆನಲೇಂ ದಯೆಗೆಯ್ವ ಬುದ್ಧಿ ಶಂ |
ಭುವೆ ನಿನಗುಂಟೆಯಿಲ್ಲಪರಮಪ್ರಭುವೇ ಮಹದೈಪುರೀಶ್ವರಾ ||೭೧||

ಟೀಕೆ—ಪವನಸಮುದ್ಧತಾಂಬುರುಹಪತ್ರಪಯಃಕಣದಂತೆ-ಪವನ-ವಾಯುವಿನಿಂದ, ಸಮುದ್ಧತ-ಹೊಡೆಯಲ್ಪಟ್ಟ, ಅಂಬುರುಹಪತ್ರ-ತಾವರೆಯೆಲೆಯಲ್ಲಿಯ, ಪಯಃಕಣದಂತೆ-ಉದಕದ ಹನಿಯಂತೆ, ಚಂಚಲತ್ವವಂ-ಚಲನೆಯನು, ಇರದೆ

ಬಿಡದೆ, ಎಯ್ದಿ-ಪೊರ್ದಿ, ಜೀವಿಸುವ-ಬದುಕುವ, ಜೀವನದಲ್ಲಿ-ಬಾಳುವುದರಲ್ಲಿ, ಭವ ತ್ಪ್ರಸಾದಂ-ನಿನ್ನನುಗ್ರಹವು, ಉಳ್ಳವನೆ-ಉಂಟಾದಾತನೇ, ಕೃತಾರ್ಥಂ-ಸುಕೃತಿಯು, ಎನಗಿಲ್ಲ-ಎನಗೆದೊರಕದು, ಎನಲ್-ಹೀಂಗೆನಲಾಗಿ, ದಯೆಗೆಯ್ವ-ಕರುಣಿಸುವ, ಬುದ್ಧಿ-ಮತಿಯು, ಶಂಭುವೆ-ಆನಂದಕನೆ, ನಿನಗುಂಟೇಂ-ನಿನಗೆಲ್ಲಿಯದು ? ಇಲ್ಲ-ಇಲ್ಲವೇ, ಏವೆಂ-ಹೇಗೆಮಾಡಲಿ ? ||೭೧||

ಟಿಪ್ಪಣಿ—ಮಹಾಸ್ವಾಮಿಯಾದ ಎಲೈ ಶಂಭುವೆ ! ಗಾಳಿಯಿಂದ ಅಡಿದಾಡಲ್ಪಡುತ್ತಿರುವ ತಾವರೆಯೆಲೆಯಮೇಲಿರುವ ನೀರಿನ ಹನಿಯಂತೆ ಅತ್ಯಂತಕ್ಷಣಿಕವಾಗಿರುವ ಬಾಳ್ವಿಕೆಯಲ್ಲಿ ಯಾವನಿಗೆ ನಿನ್ನನುಗ್ರಹವು ದೊರಕೊಂಡಿರುವುದೋ ಅತನೇ ಧನ್ಯನು. ಎಲೈ ಶಿವನೆ, ಅಂತಹ ಧನ್ಯತೆಯು ನನಗಿಲ್ಲ. ದಯೆಯಿಟ್ಟು ನನ್ನನ್ನನುಗ್ರಹಿಸಬೇಕೆಂಬ ಬುದ್ಧಿಯು ನಿನಗಾದರೂ ಉಂಟೆ ? ಅದೂ ಇಲ್ಲ. ಏನುಮಾಡಲಿ ? ||೭೧||

ಸುಖವೆ ಸುಖಾಭಿವೃದ್ಧಿಯೆ ಸುಖೋನ್ನತಿಯೇ ಸುಖಸಾರಸಿದ್ಧಿಯೇ |<br>
ಸುಖಪರಿಪೂರ್ತಿಯೇ ಸುಖಕಳಾಕೃತಿಯೇ ಸುಖಚಕ್ರವರ್ತಿಯೇ ||<br>
ಸುಖಮುಖಬಂಧುವೇ ಸುಖರಸಾಮೃತಸಿಂಧುವೆ ನಿನ್ನವರ್ಗೆ ನೀಂ ||<br>
ಸುಖಮನೆ ಮಾಳ್ಪುದಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೭೨||

ಟೀಕೆ—ಸುಖವೆ-ಎಲೈ ಆನಂದವೇ, ಸುಖಾಭಿವೃದ್ಧಿಯೆ-ಎಲೆ ಆನಂದದ ಪೆರ್ಚುಗೆಯೆ, ಸುಖೋನ್ನತಿಯೇ-ಎಲೆ ಆನಂದದೌನ್ನತ್ಯವೆ, ಸುಖಸಾರಸಿದ್ಧಿಯೇ-ನಿರತಿಶಯಾನಂದಸಿದ್ಧಿಯೆ, ಸುಖಪರಿಪೂರ್ತಿಯೇ-ಆನಂದದವಿಸ್ತಾರವೆ, ಸುಖಕಳಾಕೃತಿಯೇ-ಆನಂದಸೌಂದರ್ಯದಾಕಾರವೆ, ಸುಖಚಕ್ರವರ್ತಿಯೇ-ಆನಂದಸಾರ್ವಭೌಮನೆ, ಸುಖಮುಖಬಂಧುವೇ-ಆನಂದಕ್ಕೆ ಮುಖ್ಯವಾದ ಮಿತ್ರನೆ, ಸುಖರಸಾಮೃತಸಿಂಧುವೆ-ಆನಂದರಸಸುಧಾಸಮುದ್ರನೆ, ನಿನ್ನವರ್ಗೆ-ನಿನ್ನಶರಣರ್ಗೆ, ನೀಂ-ನೀನು, ಸುಖವನೆ-ಆನಂದವನೇ, ಮಾಳ್ಪುದಯ್ಯ-ಮಾಡುವುದಯ್ಯ ("ಆನಂದಂಬ್ರಹ್ಮೇತಿವ್ಯಜಾನಾತ್" ಎಂದು ತೈತ್ತಿರೀಯೋಪನಿಷತ್ತುಂಟು). ||೭೨||

ಟಿಪ್ಪಣಿ—ಎಲೈ ಆನಂದಸ್ವರೂಪನೆ, ಆನಂದದ ಏಳ್ಗೆಯಾದವನೆ, ಆನಂದದ ಶ್ರೇಷ್ಠವಾದ ಸಿದ್ಧಿಸ್ವರೂಪನೆ, ಆನಂದಪರಿಪೂರ್ಣನೆ, ಆನಂದಾಕಾರನೆ, ಆನಂದಸಾಮ್ರಾಜ್ಯಕ್ಕಧೀಶ್ವರನೆ, ಆನಂದಕ್ಕೆ ಪರಮಮಿತ್ರನೆ, ಆನಂದರಸಸಮುದ್ರವನ್ನು ಅಭಿವೃದ್ಧಿಗೊಳಿಸುವುದರಲ್ಲಿ ಚಂದ್ರಪ್ರಾಯನಾದವನೆ, ನೀನು ಪರಮಾನಂದಮಯನಾಗಿರುವ ಕಾರಣ, ನಿನ್ನನ್ನು ಮರೆಹೊಕ್ಕ ನಿನ್ನ ಶರಣರಿಗೂ ಅಂತಹ ಆನಂದವನ್ನೇ ಉಂಟುಮಾಡು.

ಅವತಾರಿಕೆ—ಶರಣಂಗಂಗವಾಗಿಪ್ಪ ಪಂಚಭೂತಂಗಳು ಲಿಂಗಸ್ವರೂಪವಾಗಿರ್ಪುವೆಂದು ಪೇಳುತ್ತಿರ್ದಪಂ.—

ಧರಣಿಯೊಳಾದ ದೇಹದವೊ ಲಲ್ಲ ಜಲಾಗ್ನಿಮರುನ್ನಭಃಕಳೀ |
ವರದೊಳೊದಂಗಿದ ಪ್ರಕೃತಿಯಂತಹು ದಲ್ಲಿವರಂಗಮಂ ಸಮು ||
ದ್ಧರಿಸಿ ಶಿವಾತ್ಮಲಿಂಗತನು ಬಿಂತಿವರೊಳ್ಮಣಿಸೂತ್ರದಂತೆ ತಾ |
ನಿರುತಿಹು ದೈಕ್ಯಮಾಗಿ ಪರಮಪ್ರಭುವೇ ಮಹದೈಪುರೀಶ್ವರಾ ||೭೩||

ಟೀಕೆ—ಧರಣಿಯೊಳಾದ-ಪೃಥ್ವೀತತ್ವದೊಳಾದ, ದೇಹದವೊಲಲ್ಲ-ಶರೀರದ ಹಾಂಗಲ್ಲ, ಜಲಾಗ್ನಿಮರುನ್ನಭಃಕಳೀವರದೊಳ್-ಅಪ್ತೇಜೋವಾಯ್ವಾಕಾಶತತ್ವಗಳಲ್ಲಿ, ಒದಂಗಿದ-ಸೇರಿದ, ಪ್ರಕೃತಿಯಂತಹುದು-ಪ್ರಕೃತಿತತ್ವದಹಾಗಿರುವುದು, ಅಲ್ಲ, ಇವರ-ಈ ಪಂಚಭೂತಂಗಳ, ಅಂಗಮಂ-ಮೂರ್ತಿಗಳನ್ನು, ಉದ್ಧರಿಸಿ-ಪವಿತ್ರವ ಮಾಡಿ, ಶಿವಾತ್ಮಲಿಂಗತನು-ಪರಮಮಂಗಲಸ್ವರೂಪವಾದ ಮಹಾಲಿಂಗದ ವಿಗ್ರಹವು, ಇಂತಿವರೊಳ್-ಈಪವಿತ್ರವಾದ ಪಂಚಭೂತಂಗಳಲ್ಲಿ, ಮಣಿಸೂತ್ರದಂತೆ-ಮಣಿಗಳಿಂಪೋಣಿಸಲ್ಪಟ್ಟ ಸೂತ್ರದಂತೆ, ಐಕ್ಯಮಾಗಿ-ಸಮರಸಮಾಗಿ, ತಾಂ-ಆ ಲಿಂಗವಿಗ್ರಹವು, ಇರುತಿಹುವುದು-ಇರ್ಪುದು (ಈ ಅರ್ಥದಲ್ಲಿ ''ಯೇನಸರ್ವಮಿದಂ ಪ್ರೋತಂಸೂತ್ರೇಮಣಿಗಣಾಇವ'' ಇಂತೆಂದು ಬ್ರಹ್ಮೋಪನಿಷತ್ತುಂಟಾಗಿ) ||೭೩||

ಟಿಪ್ಪಣಿ—ಈ ಶರಣರ ದೇಹವು ಪ್ರಾಕೃತರ ದೇಹದಂತೆ ಕೇವಲ ಪೃಥಿವಿ ಅಪ್ಪು ತೇಜಸ್ಸು ವಾಯು ಆಕಾಶವೆಂಬ ಪಂಚಭೂತಗಳ ಮಯವಾದುದಲ್ಲ. ಇವರ ಅಂಗೇಂದ್ರಿಯಗಳಲ್ಲೆಲ್ಲಾ ಪರಶಿವನು ವ್ಯಾಪಿಸಿರುವನು (ಈ ಅರ್ಥದಲ್ಲಿ—"ಪವಿತ್ರಂತೇವಿತತಂಬ್ರಹ್ಮಣಸ್ಪತೇಪ್ರಭುರ್ಗಾತ್ರಾಣಿಪರ್ಯೇಷಿವಿಶ್ವತಃ ||" ಎಂಬ ಋಗ್ವೇದವಚನವೂ, "ಇಷ್ಟಲಿಂಗಂತುಬಾಹ್ಯಾಂಗೇಪ್ರಾಣಲಿಂಗಂತಥಾಂತರೇ | ಭಾವಲಿಂಗಂತಥೈವಾಸ್ತಿ ಆತ್ಮಾಂಗೇಸುಪ್ರತಿಷ್ಠಿತಂ || ಹೃದಯಾಂಗೇಮಹಾಲಿಂಗಂ ಶ್ರೋತ್ರಾಂಗೇತುಪ್ರಸಾದಕಂ | ತ್ವಗಂಗೇಚರಲಿಂಗಂಚದೃಗಂಗೇಶಿವಲಿಂಗಕಂ || ಜಿಹ್ವಾಂಗೇಗುರುಲಿಂಗಂಸ್ಯಾನ್ನಾಸಿಕಾಂಗೇತಥೈವಚ | ಆಚಾರಲಿಂಗಮಶ್ರಾಂತಂಸುಪ್ರತಿಷ್ಠಿತಮೇವಹಿ || ಯಥಾಜ್ಞಾನೇಂದ್ರಿಯಾಂಗೇಷುಕ್ರಮಾಲ್ಲಿಂಗಂಪ್ರತಿಷ್ಠಿತಂ | ತಥಾಕರ್ಮೇಂದ್ರಿಯಾಂಗೇಷುಕ್ರಮಾಲ್ಲಿಂಗಂಪ್ರತಿಷ್ಠಿತಂ" ಎಂಬ ವಾತುಲಾಗಮವಚನವೂ ಪ್ರಮಾಣವಾಗಿರುವುವು). ಆದುಕಾರಣ, ಪವಿತ್ರವಾದ ಆ ಶಿವಶರಣರ ದೇಹದಲ್ಲಿ ಮಣಿಗಳಿಂದ ಪೋಣಿಸಲ್ಪಟ್ಟ ದಾರದಂತೆ ಮಂಗಲಸ್ವರೂಪನಾದ ಮಹಾಲಿಂಗವು ಸಮರಸವಾಗಿರುವುದು. ||೭೩||

ಧರಣಿಯೆ ಪೀಠ ಮಂಬರಮೆ ಲಿಂಗ ಮಿವಿಂತಿರ ದೊಂದ ನೊಂದುಬಿ |
ಟ್ಟಿರದಿಹಕಾರಣಂ ಸಕಲಜೀವರಿ ಗಾಲಯಮಾಯ್ತು ತಮ್ಮೊಳೊಂ ||
ದಿರ ದಿರಲೊಂದೆಯಾಯ್ತು ಸರಿನೋಡೆ ವಿಶೇಷ ಮದೇನುಮಿರ್ದ್ದಿದಿ |
ಲ್ಲಿರಡರ ಮಧ್ಯದಲ್ಲಿ ಪರಮಪ್ರಭುವೇ ಮಹದೈಪುರೀಶ್ವರಾ ||೭೪||

ಟೀಕೆ—ಧರಣಿಯೆ-ಭೂಮಿಯೇ, ಪೀಠಂ-ಪೀಠವು, ಅಂಬರಮೆ-ಆಕಾಶವೇ, ಲಿಂಗಂ-ಲಿಂಗವು, ಇವಿಂತು-ಇವುಹೀಂಗೆ, ಇರದೆ-ಬಿಡದೆ, ಒಂದನೊಂದು ಬಿಟ್ಟಿರದಿ

ಹಕಾರಣಂ-ಒಂದನೊಂದು ವಿಸರ್ಜಿಸದೆಕೂಡಿರ್ಪುದರಿಂದೆ, ಸಕಲಜೀವರಿಗೆ-ಸಮಸ್ತ ಪ್ರಾಣಿಗಳಿಗೆ, ಆಲಯಮಾಯ್ತೊ-ಆಶ್ರಯವಾದುದೊ, ತಮ್ಮೊಳ್-ತಮ್ಮಲ್ಲಿ, ಒಂದಿ ಇರದೆಇರಲ್-ಒಂದನೊಂದು ಕೂಡದೆ ಇರಲಾಗಿ, ಒಂದೆಯಾಯ್ತೊ-ಒಂದೆಯಾ ದುದೊ, ಸರಿನೋಡೆ-ಸಮವಾಗಿನೋಡಲಾಗಿ, ಎರಡರಮಧ್ಯದಲ್ಲಿ-ಉಭಯದನಡುವೆ, ವಿಶೇಷಮದೇನುಂ-ವಿಶೇಷವಾದುದೇನೂ, ಇದ್ದುರ್ದಿಲ್ಲ-ಇರುವುದಿಲ್ಲ (ಈ ಅರ್ಥ ದಲ್ಲಿ :—" ಆಕಾಶಂಲಿಂಗಮಿತ್ಯಾಹುಃಪೃಥಿವೀತಸ್ಯಪೀಠಿಕಾ ! ಆಲಯಸ್ಸರ್ವಭೂ ತಾನಾಂಲಯನಾಲ್ಲಿಂಗಮುಚ್ಯತೆ " ಎಂದು ಉಂಟಾಗಿ). ||೭೪||

ಟಿಪ್ಪಣಿ—ಭೂಮಿಯೇ ಪೀಠವಾಗಿಯೂ, ಆಕಾಶವೇ ಲಿಂಗವಾಗಿಯೂ, ಇವು ಒಂದ ನ್ನೊಂದು ಎಡೆಬಿಡದೆ ಸೇರಿಕೊಂಡಿರುವುದರಿಂದಲೇ, ಮಹಾಲಿಂಗರೂಪವಾದ ಭೂಮ್ಯಾಕಾಶಗಳು ಸಕಲ ಜಗತ್ತಿಗೂ ಆಧಾರಸ್ಥಾನವಾಗಿರುವುದೇ ಹೊರತು, ಅವು ಒಂದನ್ನೊಂದು ಕೂಡಿರದೆ ಇದ್ದರೆ ಸರ್ವಾಧಾರಸ್ಥಾನವಾಗುತ್ತಿರಲಿಲ್ಲ. ವಿಚಾರಮಾಡಿ ನೋಡಿದರೆ ಭೂಮ್ಯಾಕಾಶಗಳೆರಡರಲ್ಲೂ ಸಮಾನ ಧರ್ಮವಿರುವುದೇ ಹೊರತು ಹೆಚ್ಚು ಕುಂದೇನೂ ಇಲ್ಲ (ಈ ಅರ್ಥವು ಮುಂದಣ ಪದ್ಯದಲ್ಲಿ ವಿವರಿ ಸಲ್ಪಟ್ಟಿರುವುದು).

ಧಾರುಣಿ ಸರ್ವಭೂತಪರಿಣಾಮದ ಸಂಗತಿ ಗೆಯ್ದಿ ತಾನೆ ಯಾ |
ಧಾರ ಮವಕ್ಕೆ ತಾನೆ ಯವಕಾಶ ಮನೂನವಿಯತ್ತಳಂ ತದಾ ||
ಧಾರಪದಾವಕಾಶಪದಭಾವ ಮಿವಿಂತೆರಡಕ್ಕೆ ನೋಡೆ ಸಾ |
ಧಾರಣಧರ್ಮವರ್ತಿ ಪ್ರರಮಪ್ರಭುವೇ ಮಹದ್ಪೈಪುರೀಶ್ವರಾ ||೭೫||

ಟೀಕೆ—ಧಾರುಣಿ-ಭೂಮಿಯು, ಸರ್ವಭೂತಪರಿಣಾಮದ-ಸರ್ವ-ಸಮಸ್ತ ವಾದ, ಭೂತ-ಮಹಾಭೂತಂಗಳ, ಪರಿಣಾಮದ-ವಿಕಾರದ, ಸಂಗತಿಗೆ-ಸಂಬಂಧಕ್ಕೆ, ಎಯ್ದಿ-ಪೊರ್ದಿ, ತಾನೆ-ಆ ಭೂಮಿತಾನೇ, ಆಧಾರಂ-ಅಧಿಕರಣವು, ಅವಕ್ಕೆ-ಆ ಭೂತಂಗಳಿಗೆ, ಅನೂನವಿತ್ತಳಂತಾನೆ-ಅನೂನ-ಕೊರತೆಯಿಲ್ಲದ, ವಿಯತ್ತಳಂತಾನೆ-ಆಕಾಶವುತಾನೇ, ಅವಕಾಶಂ-ತೆರಪುಗೊಡುವುದು, ನೋಡೆ-ವಿಚಾರಿಸಲಾಗಿ, ಸಾಧಾ ರಣಧರ್ಮವರ್ತಿ-ಸದೃಶವಾದ ಧರ್ಮದಲ್ಲಿರುತಿರ್ಪ ಮಹಾಲಿಂಗವು, ಇವಿಂತೆರಡಕ್ಕೆ-ಈ ಭೂಮ್ಯಾಕಾಶವೆರಡಕ್ಕೂ, ತದಾಧಾರಪದಾವಕಾಶಪದಭಾವಂ-ತದಾಧಾರ-ಅವೆರಡಕ್ಕೂ ಆಧಾರವಾದ, ಪದ-ಸ್ಥಾನಂಗಳಿಗೆ, ಅವಕಾಶಪದಭಾವಂ-ತೆರಪುಗೊ ಡುವಲ್ಲಿಸ್ವಭಾವವನುಳ್ಳುದು. ಎಲ್ಲಕ್ಕೂ ಮಹಾಲಿಂಗವೇ ಆಧಾರವೆಂಬುದರ್ಥಂ.

ಟಿಪ್ಪಣಿ—ಭೂಮಿಯು ಸಕಲ ಭೂತವಿಕಾರವಾದ ಪ್ರಾಣಿಕೋಟಿಯ ಉತ್ಪತ್ತಿಗೂ ಆಧಾರ ವಾಗಿರುವುದು (ಈ ಅರ್ಥದಲ್ಲಿ—" ಊರ್ಧ್ವಮೇನಪ್ರಜಾಭೂತಾಃ " ಎಂದು ಋಗ್ವೇದವಚನಪ್ರಮಾ ಣವುಂಟು). ಆಕಾಶವು ಸಹ ಸರ್ವವ್ಯಾಪಿಯಾಗಿ ಸರ್ವವನ್ನೂ ತನ್ನೊಳಗುಮಾಡಿಕೊಳ್ಳುವುದರಿಂದ

ಅದು ಸರ್ವಾಧಾರವಾಗಿರುವುದು. ಆ ಭೂವ್ಯೋಮಾಕಾಶಗಳೆರಡಕ್ಕೂ ಪ್ರಕೃತಿಪುರುಷಾತ್ಮಕವಾದ ಲಿಂಗಪೀಠಗಳಿಂದ ಕೂಡಿದ-ಜಗದುತ್ಪತ್ತಿಲಯಗಳಿಗೆ ಸ್ಥಾನವಾದ-ಮಹಾಲಿಂಗವೇ ಆಧಾರವಾಗಿರುವುದು. ||೭೫||

ಅಂಬರ ದಂಗಮಾಗ ಲನಿಲಾಕೃತಿ ಯಾಗಲಿ ವಹ್ನಿರೂಪಿ ನಾ |
ಡಂಬರಮಾಗ ಲಂಬುವಿನ ತದ್ಗುಣ ಮಾಗಲಿ ಪೃಥ್ವಿಯ ಪ್ರಕಾ ||
ರಂಬಿಡ ದಾಗ ಲಾವ ಪರಿಯಾದೊ ಡದೇಂ ನಿಜಲಿಂಗಕಾಯ ಮಿ |
ರ್ಪಿಂಬದು ಲಿಂಗ ದಿಂಬು ಪರಮಪ್ರಭುವೇ ಮಹದೈಪುರೀಶ್ವರಾ ||೭೬||

ಟೀಕೆ—ಅಂಬರದ-ಆಕಾಶದ, ಅಂಗಮಾಗಲಿ-ಶರೀರಮಾಗಲಿ, ಅನಿಲಾಕೃತಿಯಾಗಲಿ-ಗಾಳಿಯಾಕಾರವಾಗಲಿ, ವಹ್ನಿರೂಪಿನ-ಅಗ್ನಿರೂಪಿನ, ಆಡಂಬರಮಾಗಲಿ-ಸಂಭ್ರಮವಾದ ಶರೀರಮಾಗಲಿ, ಅಂಬುವಿನ-ಉದಕದ, ತದ್ಗುಣಮಾಗಲಿ-ಆ ಉದಕಗುಣದ ಶರೀರಮಾಗಲಿ, ಪೃಥ್ವಿಯ-ಭೂಮಿಯ, ಪ್ರಕಾರಂ-ಬಗೆಯು, ಬಿಡದಾಗಲಿ-ವಿಸರ್ಜಿಸದೆ ಉಂಟಾಗಲಿ, ಆವಪರಿಯಾದೊಡೆ-ಆವಬಗೆಯಾದರೂ, ಅದೇಂ-ಅದೇನು ? ಅದು. ಆ ಶರೀರವು, ನಿಜಲಿಂಗಕಾಯಂ-ಸಹಜವಾದಲಿಂಗವಿಗ್ರಹವು, ಇರ್ಪ-ಇರುವಂಥ, ಇಂಬು-ಸ್ಥಾನವು, ಲಿಂಗದಿಂಬು-ಅದೇ ಲಿಂಗಕ್ಕಾಶ್ರಯವು.

ಟಿಪ್ಪಣಿ—ಪಂಚಭೂತಾತ್ಮಕದೇಹಗಳಲ್ಲಿ ಆಕಾಶವಿಕಾರದೇಹವೇ ಆಗಲಿ, ವಾಯುಮಯ ಶರೀರವೇ ಆಗಲಿ, ಅಗ್ನಿರೂಪಾಂಗವೇ ಆಗಲಿ, ಜಲಾತ್ಮತನುವೇ ಆಗಲಿ, ಪೃಥಿವೀಕಾಯವೇ ಆಗಲಿ, ಈ ಪೂರ್ವೋಕ್ತವಾದ ಯಾವಬಗೆಯಾದ ಶರೀರವಾದರೂ ಅದು ಲಿಂಗಸಮೇತತ್ವದಿಂದ ಲಿಂಗಸ್ಥಾನವಾಗಿಯೇ ಇರುವುದು. ||೭೬||

ಧರಣಿಶರೀರಮೇ ವಿಮಲಭಕ್ತಪದಂ ದ್ರವದೇಹಮೇ ಮಹೇ |
ಶ್ವರಪದ ಮುಷ್ಣ ಕಾಯಮೆ ತೃತೀಯಪದಂ ಚಲಭಾವಸತ್ಕಳೇ ||
ವರಮೆ ಚತುರ್ಥಮಾದ ಪದ ಮಂಬರದೇಹಮೆ ಪಂಚಮಸ್ಥಳಂ |
ನಿರುಪಮ ಮೈಕ್ಯಮಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೭೭||

ಟೀಕೆ—ಧರಣಿಶರೀರಮೇ-ಭೂಮಿಮಯವಾದ ದೇಹವೇ, ವಿಮಲಭಕ್ತಪದಂ-ನಿರ್ಮಲವಾದಭಕ್ತಸ್ಥಳವು, ದ್ರವದೇಹಮೇ-ಉದಕಮಯವಾದತನುವೇ, ಮಹೇಶ್ವರಪದಂ-ಮಾಹೇಶ್ವರಸ್ಥಳವು, ಉಷ್ಣಕಾಯಮೆ-ಅಗ್ನಿಮಯಶರೀರವೇ, ತೃತೀಯಪದಂ-ಮೂರನೆಯದಾದಪ್ರಸಾದಿಸ್ಥಲವು, ಚಲಭಾವಸತ್ಕಳೇವರಮೆ-ಸಂಚಲಸ್ವಭಾವವನುಳ್ಳ ಒಳ್ಳಿತಾದವಾಯುಶರೀರವೇ, ಚತುರ್ಥಪದಂ-ನಾಲ್ಕನೆಯದಾದ ಪ್ರಾಣಲಿಂಗಿಸ್ಥಲವು, ಅಂಬರದೇಹಮೆ-ಆಕಾಶಶರೀರವೇ, ಪಂಚಮಸ್ಥಳಂ-ಐದನೆಯದಾದ ಶರಣಸ್ಥಳವು, ನಿರುಪಮಂ-ಎಣೆಯಿಲ್ಲದಿರ್ಪಆತ್ಮನೇ, ಐಕ್ಯಮಯ್ಯ-ಶಿವಲಿಂಗೈಕ್ಯಸ್ಥಳವಯ್ಯ. ||೭೭||

ಟಿಪ್ಪಣಿ—ಭಕ್ತಾದಿಷಟ್ಸ್ಥಲಗಳಲ್ಲಿ ಭೂಮಿಮಯವಾದ ಶರೀರವುಳ್ಳದು ಭಕ್ತಸ್ಥಲವು, ಜಲಮಯವಾದ ಶರೀರವುಳ್ಳದು ಮಾಹೇಶ್ವರಸ್ಥಲವು. ಅಗ್ನಿಮಯವಾದ ಶರೀರವುಳ್ಳದು ಪ್ರಸಾದಿಸ್ಥಲವು. ವಾಯುಮಯವಾದ ದೇಹವುಳ್ಳದು ಪ್ರಾಣಲಿಂಗಿಸ್ಥಲವು. ಆಕಾಶಮಯವಾದ ದೇಹವುಳ್ಳದು ಶರಣಸ್ಥಲವು. ಆತ್ಮಮಯವಾದ ದೇಹವುಳ್ಳದು ಐಕ್ಯಸ್ಥಲವು. ||೭೭||

ಸ್ವಪನದ ದೇಹಕೆಲ್ಲ ರುಧಿರಾದಿಷಡಂಗಕ ಮಿಲ್ಲದಿರ್ದೊಡೇಂ |
ವ್ಯಪಗತಜನ್ಮಮೃತ್ಯುಭಯ ಮಪ್ಪ ನಿರಂಶಕ ನಿತ್ಯದೇಹಮಾ ||
ದಪುದೆ ನಿಜಾಂಗಲಿಂಗಕೃತಸಂಗಶಿವಾತ್ಮಕದಿವ್ಯದೇಹಮಾ |
ವಪರಿಯೊಳಾದೊಡೇನು ಪರಮಪ್ರಭುವೇ ಮಹದೈಪುರೀಶ್ವರಾ ||೭೮||

ಟೀಕೆ—ಸ್ವಪನದದೇಹಕೆ-ಸೂಕ್ಷ್ಮಶರೀರಕ್ಕೆ, ರುಧಿರಾದಿಷಡಂಗಕಮೆಲ್ಲ-ರಕ್ತಮೊದಲಾದಷಡ್ಧಾತುಗಳೆಲ್ಲವೂ, ಇಲ್ಲದಿರ್ದೊಡೇಂ-ಇಲ್ಲದಿರ್ದೊಡೇನಾಯಿತು ? ವ್ಯಪಗತಜನ್ಮಮೃತ್ಯುಭಯಮಪ್ಪ—ವ್ಯಪಗತ—ಹೋದಂಥ, ಜನ್ಮಮೃತ್ಯು—ಜನನ ಮರಣಗಳ, ಭಯಮಪ್ಪ-ಭಯವುಳ್ಳ. ನಿರಂಶಕನಿತ್ಯದೇಹಂ—ಅವಯವಂಗಳಿಲ್ಲದ ಕೇಡಿಲ್ಲದದೇಹವು, ಆದಪುದೆ-ಆದೀತೆ ? ಆಗದು, ನಿಜಾಂಗಲಿಂಗಕೃತಸಂಗಶಿವಾತ್ಮಕ ದಿವ್ಯದೇಹಂ-ನಿಜಾಂಗಲಿಂಗ-ಸಹಜವಾದ ಅಂಗಲಿಂಗಗಳ, ಕೃತ—ಮಾಡಲ್ಪಟ್ಟ, ಸಂಗ-ಸಂಬಂಧವನುಳ್ಳ, ಶಿವಾತ್ಮಕದಿವ್ಯದೇಹಂ-ಶಿವಸ್ವರೂಪವಾದ ದಿವ್ಯವಿಗ್ರಹವು, ಆವಪರಿಯೊಳ್-ಆವತೆರದಲ್ಲಿ, ಆದೊಡೇನು-ಉಂಟಾದೊಡೇನು ? ||೭೮||

ಟಿಪ್ಪಣಿ—ತ್ವಕ್ ಮಾಂಸ ರಕ್ತಾದಿಧಾತುಮಯವಾದ ದೇಹವು ಶರಣನಿಗಿದ್ದರೂ ಅದು ಆತನ ಜೀವನ್ಮುಕ್ತತೆಗೆ ತೊಡಕಾದುದಲ್ಲ. ಏಕೆಂದರೆ—ರಕ್ತಮಾಂಸಾದಿ ಮಯವಲ್ಲದ ದೇಹ ವಿದ್ದಮಾತ್ರಕ್ಕೇ ಅದು ಜನನ ಮರಣಗಳನ್ನು ಗೆಲ್ಲುವುದಕ್ಕೆ ಸಮರ್ಥವಾಗುವುದಿಲ್ಲ. ಹೇಗೆಂದರೆ—ಸೂಕ್ಷ್ಮಶರೀರವು ರಕ್ತಮಾಂಸಾದಿಮಯವಲ್ಲದೆ ಇದ್ದ ಮಾತ್ರದಿಂದಲೇ ಅದು ಜನ್ಮಮೃತ್ಯುಗಳನ್ನು ಗೆದ್ದುದಾದೀತೆ ? ಅಂಗಲಿಂಗ ಸಾಮರಸ್ಯಗೊಂಡ ಶಿವಶರಣನೇ ಆ ಜನ್ಮಮೃತ್ಯುಗಳನ್ನು ಗೆದ್ದವನು. ಅದುಕಾರಣ ಅಂತಪ್ಪ ಶರಣನ ದೇಹವು ಹೇಗಿದ್ದರೇನು ? ||೭೮||

ಭೂತಪಿಶಾಚರಾಕ್ಷಸನಿಶಾಚರ ರೇನಿರರೇ ತ್ವಗಾದಿಷ |
ಡ್ಧಾತುವಿಹೀನಮಾಗಿ ನೆಳಲಂತಿರೆ ತೋರ್ಪ ಶರೀರಗೊಂಡು ಸಾ ||
ಕೇತರಮಾತು ಲಿಂಗತನುಗೊಂಡ ಶಿವಾತ್ಮರ ವೃತ್ತಿ ಬೇರೆ ತಾ |
ನೇತೆರನಾದೊ ಡಕ್ಕು ಪರಮಪ್ರಭುವೇ ಮಹದೈಪುರೀಶ್ವರಾ ||೭೯||

ಟೀಕೆ—ತ್ವಗಾದಿಷಡ್ಧಾತುವಿಹೀನಮಾಗಿ-ಚರ್ಮ ಮೊದಲಾದಾರುಧಾತುಗಳಿಂದ ವಿಲಕ್ಷಣಮಾಗಿ, ನೆಳಲಂತಿರೆತೋರ್ಪ-ನೆಳಲಹಾಂಗೆಕಾಣಿಸುವ, ಶರೀರಗೊಂಡು-ದೇಹವತಾಳ್ದು, ಭೂತಪಿಶಾಚರಾಕ್ಷಸನಿಶಾಚರರ್-ಭೂತ-ಭೂತಂಗಳು, ಪಿಶಾಚ-ಪಿಶಾಚರು, ರಾಕ್ಷಸ-ರಾಕ್ಷಸರು, ನಿಶಾಚರರ್-ಕತ್ತಲೆಯಲ್ಲಿ ಚಲಿಸುವ

ವರುಗಳು, ಏನಿರರೇ-ಇರರಯೇನು ? ಏತರಮಾತು-ಏತರನುಡಿ ? ಸಾಕು-ಅದು ಸಾಕು; ಲಿಂಗತನುಗೊಂಡ-ಶಿವಲಿಂಗಶರೀರವತಾಳ್ದ, ಶಿವಾತ್ಮರ-ಶಿವಸ್ವರೂಪರಾದ ಶರಣರ, ವೃತ್ತಿ-ವರ್ತನೆ, ಬೇರೆ-ವಿಲಕ್ಷಣವು, ತಾಂ-ಅದುತಾನು, ಏತೆರನಾದೊಡಂ-ಆವಪ್ರಕಾರವಾದೊಡೆಯೂ, ಅಕ್ಕು-ಅಪ್ಪುದು. ||೭೯||

ಟಿಪ್ಪಣಿ—ಮತ್ತೂ ರಕ್ತಮಾಂಸ ಚರ್ಮಗಳ ಮಯವಾಗಿಲ್ಲದೆ ಛಾಯಾಮಾತ್ರವಾಗಿ ತೋರುತ್ತಿರುವ ದೇಹವು ಭೂತಪಿಶಾಚಾದಿಗಳಿಗೆ ಇರುತ್ತಿರುವುದು. ಹಾಗೆ ಷಡ್ಧಾತುವಿಕಾರವಲ್ಲದ ದೇಹವನ್ನು ಧರಿಸಿರುವ ಆ ಪಿಶಾಚಾದಿಗಳು ತಾವನ್ಮಾತ್ರದಿಂದಲೇ ಜನ್ಮಮರಣಾದಿಗಳನ್ನು ದಾಂಟಿರುವುವೆ ? ಇಲ್ಲ. ಆದುಕಾರಣ, ಭೂತಮಯವಾದ ದೇಹವಿಲ್ಲದಿರುವುದೇ ಘನವೆಂದು ಹೇಳುವ ಮಾತು ನಿಷ್ಪ್ರಯೋಜಕವಾದುದು. ಅದು ಹಾಗಿರಲಿ, ಲಿಂಗದೇಹವಾಗಿರುವ ಶಿವಶರಣನ ದೇಹವು ಧಾತುಮಯವಾಗಿ ತೋರುತ್ತಿದ್ದರೂ ಇರಲಿ, ಆತನ ರೀತಿಯು ಜಗದ್ವಿಲಕ್ಷಣವಾದುದು. ||೭೯||

ಧರೆ ಸಲಿಲಾಗ್ನಿ ವಾಯುು ನಭ ಮೆಂಬಿವು ತಮ್ಮೊಳೆ ಹೀನಮಧ್ಯಮೋ |
ತ್ತರತಮ ಮೆಲ್ಲವ ಕ್ಕವರ ಭಾವ ಮದೇ ಕಡೆಯಾಗಿ ಸರ್ವಮುಂ ||
ಸರಿ ಜಗದುದ್ಭವಸ್ಥಿತಿವಿನಾಶಮ ನೊಂದಿರ ದೊಂದು ಮಾಳ್ಪ ಶ |
ಕ್ತಿರಹಿತಮಪ್ಪುವಾಗಿ ಪರಮಪ್ರಭುವೇ ಮಹದೈಪುರೀಶ್ವರಾ ||೮೦||

ಟೀಕೆ—ಧರೆಸಲಿಲಾಗ್ನಿವಾಯುುನಭಮೆಂಬಿವು—ಪೃಥ್ವಿ ಅಪ್ಪು ತೇಜಸ್ಸು ವಾಯುು ಆಕಾಶವೆಂಬಿವು, ತಮ್ಮೊಳೆ-ತಮ್ಮಲ್ಲಿಯೇ, ಹೀನಮಧ್ಯಮೋತ್ತರತಮಂ-ಹೀನಮಧ್ಯಮೋತ್ತಮವೆಂಬತಾರತಮ್ಯಗಳುಳ್ಳುವು, ಎಲ್ಲವಕ್ಕೆ—ಆ ಭೂತಂಗಳೆಲ್ಲವಕ್ಕೆಯೂ, ಅವರಭಾವಂ-ಆ ಭೂತಂಗಳ ಐದು ನಾಲ್ಕು ಮೂರು ಎರಡು ಒಂದು ಎಂಬ ಗುಣಂಗಳು, ಅದೇಕಡೆಯಾಗಿ-ತಾನೆಕಡೆಯಾಗಿ, ಜಗದುದ್ಭವಸ್ಥಿತಿವಿನಾಶಮಂ-ಜಗತ್ತಿನಸೃಷ್ಟಿಸ್ಥಿತಿಲಯಂಗಳನ್ನು, ಒಂದಿರದೆ-ಒಂದುಭೂತವಿರದೆ, ಒಂದು ಮಾಳ್ಪ-ಒಂದು ಭೂತಮಾಡುವ, ಶಕ್ತಿರಹಿತಮಪ್ಪುವಾಗಿ-ಸಾಮರ್ಥ್ಯದಿಂದ ಹೀನಮಾಗಿ, ಸರ್ವಮುಂ-ಎಲ್ಲವೂ, ಸರಿ-ಸಮವು. ||೮೦||

ಟಿಪ್ಪಣಿ—ಪೃಥ್ವಿ, ಅಪ್ಪು, ತೇಜಸ್ಸು, ವಾಯುು, ಆಕಾಶ-ಎಂಬ ಈ ಪಂಚಭೂತಗಳಲ್ಲಿ ಪೃಥ್ವಿಯುು-ಗಂಧ ರೂಪ ರಸ ಸ್ಪರ್ಶ ಶಬ್ದವೆಂಬ ೫ ಗುಣಗಳುಳ್ಳುದು, ಅಪ್ಪು-ರಸ ರೂಪ ಸ್ಪರ್ಶ ಶಬ್ದವೆಂಬ ೪ ಗುಣಗಳುಳ್ಳುದು, ಅಗ್ನಿಯುು-ರೂಪ ಸ್ಪರ್ಶ ಶಬ್ದಗಳೆಂಬ ೩ ಗುಣಗಳುಳ್ಳುದು, ವಾಯುವು-ಸ್ಪರ್ಶ ಶಬ್ದವೆಂಬ ೨ ಗುಣಗಳುಳ್ಳುದು, ಆಕಾಶವು-ಶಬ್ದವೆಂಬ ೧ ಗುಣವುಳ್ಳುದು. ಹೀಗೆ ಆ ಭೂತಗಳು ಒಂದಕ್ಕಿಂತ ಒಂದು ಹೆಚ್ಚು ಕಡಿಮೆಯಾದ ಗುಣಗಳುಳ್ಳುವಾದ ಕಾರಣದಿಂದ ಸಾಮ್ಯಾವಸ್ಥೆಯಿಂದಿರದೆ ತಾರತಮ್ಯವುಳ್ಳವಾಗಿರುವುವಾದರೂ ಜಗತ್ತಿನ ಉತ್ಪತ್ತಿಸ್ಥಿತಿನಾಶಗಳನ್ನು ಒಂದನ್ನು ಬಿಟ್ಟು ಮತ್ತೊಂದು ಮಾಡಲಾರವಾದಕಾರಣ, ಆ ವಿಷಯದಲ್ಲಿ ಎಲ್ಲವೂ ಸಮನಾಗಿರುವುವು. ||೮೦||

ರಸರುಧಿರಾದಿಧಾತುಮಯ ಮಪ್ಪ ಶರೀರ ಮದಲ್ಲ ಲಿಂಗಭ |
ಕ್ತಸಮಿತಿ ಗೆಂಬ ಮಾತದು ದುರಾಗ್ರಹದುಕ್ತಿ ಶಿವೈಕ್ಯಭಕ್ತಿಯೋ ||
ಗಸುಖದೊ ಳಾಂತು ಧಾತುಕ ಮಧಾತುಕ ಮೆಂಬುಭಯಾಂಗವೊಂದಿ ಯಿಂ |
ತೆಸೆದಿಹುದೈಕ್ಯಮಾಗಿ ಪರಮಪ್ರಭುವೇ ಮಹದ್ಯೈಪುರೀಶ್ವರಾ ||೮೧||

ಟೀಕೆ—ಲಿಂಗಭಕ್ತಸಮಿತಿಗೆ-ಶಿವಭಕ್ತ ಸಮೂಹಕ್ಕೆ, ರಸರುಧಿರಾದಿಧಾತುಮಯುಮಪ್ಪ-ರಸ ರಕ್ತ ಮೊದಲಾದ ಷಡ್‌ಧಾತುವಿಕಾರಮಾದ, ಶರೀರಂ-ದೇಹವು, ಅದಲ್ಲ-ಅದುತಾನಲ್ಲ, ಎಂಬ-ಹೀಗೆಂಬ, ಮಾತದು-ಆನುಡಿ, ದುರಾಗ್ರಹದುಕ್ತಿ-ವ್ಯರ್ಥವಾದದ್ವೇಷದ ನುಡಿ, ಶಿವೈಕ್ಯಭಕ್ತಿಯೋಗ ಸುಖದೊಳ್-ಶಿವೈಕ್ಯ-ಶಿವಲಿಂಗೈಕ್ಯದಲ್ಲಿಯ, ಭಕ್ತಿ-ಭಕ್ತಿಯಲ್ಲಿಯ, ಯೋಗ-ಸಂಬಂಧದಿಂದಾದ, ಸುಖದೊಳ್-ಆನಂದದಲ್ಲಿ, ಆಂತು-ಧರಿಸಿ, ಧಾತುಕಂ-ಷಡ್‌ಧಾತುಮಯ, ಅಧಾತುಕಂ-ಇದು ಷಡ್‌ಧಾತುಕಮಲ್ಲ, ಎಂಬ-ಹೀಗೆಂಬ, ಉಭಯಾಂಗವೊಂದಿ-ಎರಡುತೆರದ ದೇಹಮಂತಾಳ್ದು, ಐಕ್ಯಮಾಗಿ-ಸಮರಸಮಾಗಿ, ಇಂತು-ಈಪ್ರಕಾರದಿಂದೆ, ಎಸೆದಿಹುದು-ಒಪ್ಪುತ್ತಿರ್ಪುದು ||೮೧||

ಟಿಪ್ಪಣಿ—ಲಿಂಗಭಕ್ತನಾದ ಶರಣನ ದೇಹವು ರಕ್ತಮಾಂಸಾದಿ ಧಾತು ವಿಕಾರವಾಗಿಲ್ಲವೆಂದು ಹೇಳುವ ಅಭಿಮಾನದಮಾತು ನಿಷ್ಪ್ರಯೋಜಕವಾದುದು. (ಏಕೆಂದರೆ—ದೇಹವು ಧಾತುವಿಕಾರವಲ್ಲದ ಮಾತ್ರದಿಂದಲೇ ಘನತೆಯೇನೂ ಇಲ್ಲ.) ಶರಣನು ಲಿಂಗಾಂಗ ಸಮರಸಭಕ್ತಿಯಿಂದುಂಟಾದ ಮಹಾನಂದದಲ್ಲಿ ಮುಳುಗಿರುವನಾದಕಾರಣ, ಅವನ ದೇಹವು ಧಾತುವಿಕಾರವಾಗಿದ್ದರೂ ತದ್ಗುಣಲೇಶವಿಲ್ಲದಿರುವಕಾರಣ, ಧಾತುಮಯುವಲ್ಲವಾಗಿಯೇ ಇರುವುದು. ಆದುಕಾರಣ, ಶರಣನ ದೇಹವು ಧಾತುಮಯುವೂ ಅಧಾತುಮಯುವೂ ಸಹ ಆಗಿರುವುದೆಂದು ಭಾವ ||೮೧||

ಅನಿಮಿಷ ನಸ್ಥಿಮಾತ್ರತನುವಾಗಿರನೇ ಬಸವಂ ತ್ವಗಾದಿಸಂ |
ಜನಿತವಪುಷ್ಕನಾಗಿರನೆ ಯಲ್ಲಮ ನಂಶಕವರ್ಜಕಾಯ ನಾ ||
ಗಿ ನೆಳಲು ಹಜ್ಜೆಯಿಲ್ಲದಿರನೇ ಶಿವಯೋಗಸುಖಪ್ರಪೂರ್ಣವಾ |
ಸನೆಯುಶರೀರ ವೊಂದೆ ಪರಮಪ್ರಭುವೇ ಮಹದ್ಯೈಪುರೀಶ್ವರಾ ||೮೨||

ಟೀಕೆ—ಅನಿಮಿಷಂ-ಅನಿಮಿಷಯ್ಯನು, ಅಸ್ಥಿಮಾತ್ರತನುವಾಗಿರನೇ-ಅಸ್ಥಿಮಾತ್ರದೇಹವುಳ್ಳಾತನಾಗಿರನೆ ? ಬಸವಂ-ಬಸವೇಶ್ವರನು, ತ್ವಗಾದಿಸಂಜನಿತವಪುಷ್ಕನಾಗಿರನೆ-ಷಡ್‌ಧಾತುಗಳಿಂದೆ ಪುಟ್ಟಿಸಲ್ಪಟ್ಟ ದೇಹವುಳ್ಳಾತನಾಗಿರನೆ ? ಅಲ್ಲಮಂ-ಅಲ್ಲಮಪ್ರಭುವು, ಅಂಶಕವರ್ಜಕಾಯನಾಗಿ-ಅವಯವಂಗಳಿಲ್ಲದ ಶರೀರವುಳ್ಳಾತನಾಗಿ,ನೆಳಲುಹಜ್ಜೆಯಿಲ್ಲದಿರನೇ-ನೆಳಲುಹಜ್ಜೆಗಳಿಲ್ಲದೆ ಇರನೆ ? ಶಿವಯೋಗಸುಖಪ್ರಪೂರ್ಣವಾಸನೆಯು-ಶಿವಯೋಗಸುಖ-ಶಿವಯೋಗಾನಂದದಿಂ, ಪ್ರಪೂರ್ಣ-ಚೆನ್ನಾಗಿ

ತುಂಬಲ್ಪಟ್ಟ, ವಾಸನೆಯ—ಸಂಸ್ಕಾರದ, ಶರೀರಂ—ದೇಹವು, ಒಂದೆ—ಒಂದೇ ಸ್ವರೂಪವು. ||೮೩||

ಟಿಪ್ಪಣಿ—ಶರಣನ ದೇಹವು ಧಾತುಮಯವೂ ಅಧಾತುಮಯವೂ ಆಗಿರುವುದೆಂಬುದನ್ನು ದೃಷ್ಟಾಂತಪುರಸ್ಸರವಾಗಿ ನಿರೂಪಿಸುವನು :—ಅನಿಮಿಷಯ್ಯನು ಕೇವಲ ಮೂಳೆಯಮಾತ್ರದ ಶರೀರವುಳ್ಳವನಾಗಿರಲಿಲ್ಲವೆ ? ಬಸವೇಶ್ವರನು ತ್ವಙ್ಮಾಂಸ ರಕ್ತಾದಿಧಾತುವಿಕಾರವಾದ ಶರೀರವುಳ್ಳವನಾಗಿರಲಿಲ್ಲವೆ ? ಅಲ್ಲಮಪ್ರಭುವು ಕರಚರಣಾದ್ಯವಯವಗಳಿಲ್ಲದ ಮತ್ತೂ ನೆಳಲುಸಹ ಕಾಣದ ಶರೀರವುಳ್ಳವನಾಗಿರಲಿಲ್ಲವೆ ? ಆದುಕಾರಣ, ಲಿಂಗಾಂಗಸಾಮರಸ್ಯಾನಂದದಿಂದ ಪರಿಪೂರ್ಣನಾದ ಶರಣನ ದೇಹವು ಧಾತುವಿಕಾರವಾಗಿದ್ದರೂ ಅಲ್ಲದಿದ್ದರೂ ಸಹ ಒಂದೇ ತೆರದಪ್ರಯೋಜನವುಳ್ಳುದಾಗಿರುವುದೆಂದು ಭಾವವು. ||೮೩||

ಭೌತಿಕ ಮಾದೊಡಾಗ ಲದಕೇಂ ಬಹಿರಂಗದೆ ತೊಟ್ಟ ಕಂತೆಷ |
ಡ್ಢಾತುಕ ಮಾಗ ಲಲ್ಲದೊಡೆ ಧಾತುವಿವರ್ಜಿತಮಾಗ ಲೊಂದೆರ ||
ಳ್ಢಾತುಸಮೇತಮಾಗ ಲವನೀಜಲವಹ್ನಿಮರುನ್ನಭಸ್ಸಮು |
ದ್ಭೂತಶರೀರವೃತ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೮೪||

ಟೀಕೆ—ಅವನೀಜಲವಹ್ನಿಮರುನ್ನಭಸ್ಸಮುದ್ಭೂತಶರೀರವೃತ್ತಿ-ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶಂಗಳಿಂದ ಹುಟ್ಟಲ್ಪಟ್ಟ ದೇಹದವರ್ತನೆಯುಳ್ಳ, ಬಹಿರಂಗದೆತೊಟ್ಟಕಂತೆ-ಬಾಹ್ಯದಲ್ಲಿ ಧರಿಸಿದದೇಹವು, ಭೌತಿಕಮಾಗಲಿ-ಪಂಚಭೂತವಿಕಾರವುಳ್ಳುದಾದೊಡೆಯೂ ಆಗಲಿ, ಷಡ್ಧಾತುಕಮಾಗಲಿ-ರಕ್ತಾದಿಷಡ್ಧಾತುಕಮಾದೊಡೆಯೂ ಆಗಲಿ, ಅಲ್ಲದೊಡೆ-ಅಲ್ಲದಿರ್ದೊಡೆ, ಧಾತುವಿವರ್ಜಿತಮಾಗಲಿ-ಷಡ್‌ಧಾತುರಹಿತಮಾದೊಡೆಯೂ ಆಗಲಿ, ಒಂದೆರಳ್ಢಾತುಸಮೇತಮಾಗಲಿ-ಒಂದೆರಡು ಧಾತುಗಳಿಂದ ಕೂಡಿದುದಾದೊಡೆಯೂ ಆಗಲಿ, ಅದಕೇಂ-ಅದಕ್ಕೇನುದೋಷವು? ||೮೪||

ಟಿಪ್ಪಣಿ—ಶರಣನು ಧರಿಸಿರುವ ಸ್ಥೂಲಶರೀರವು ಪೃಥಿವ್ಯಾದಿ ಭೂತಗಳಿಂದ ಸಮುತ್ಪನ್ನವಾಗಿದ್ದರೂ ಇರಲಿ, ತ್ವಕ್, ಮಾಂಸ, ರುಧಿರ, ಮಜ್ಜಾ, ಅಸ್ಥಿ, ಮೇದಸ್ಸು ಎಂಬ ೬ ಧಾತುಗಳ ವಿಕಾರವಾಗಿದ್ದರೂ ಇರಲಿ. ಅಥವಾ ಒಂದೆರಡು ಧಾತುಗಳ ಮಯವಾಗಿಯೇ ಇದ್ದರೂ ಇರಲಿ, ಹೊರಗೆ ಆ ದೇಹದ ಸ್ಥಿತಿಯು ಹೇಗೆ ಕಾಣುತ್ತಿದ್ದರೂ ಅದರಿಂದ ದೋಷವೇನೂ ಇಲ್ಲ. ||೮೪||

ಬಿಡುವೊಡೆ ಸರ್ವಮಂ ಬಿಡಲೆಬೇ ಕವಸಾನದೊ ಳೈಕ್ಯಸೌಖ್ಯಮಂ |
ಪಡೆವೊಡೆ ಪಾರ್ಥಿವಾಂಬುಘನತೈಜಸಮಾರುತ ಮಂತರಿಕ್ಷಮೆಂ ||
ಬೊಡಲಿದು ಮೊಂದೆಯ್ಯೆಸೆ ತನು ಪಾರ್ಥಿವಮಂಬರದೇಹಮಾದೊಡೇಂ |
ಬಿಡದಿರಬಾರದಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೮೫||

ಟೀಕೆ—ಅವಸಾನದೊಳ್‌-ದೇಹಾವಸಾನದಲ್ಲಿ, ಬಿಡುವೊಡೆ-ಬಿಡಬೇಕಾದೊಡೆ, ಸರ್ವಮಂ—ಎಲ್ಲವನೂ, ಬಿಡಲೆಬೇಕು—ವಿಸರ್ಜಿಸಬೇಕು, ಐಕ್ಯಸೌಖ್ಯಮಂ

ಪಡೆವೊಡೆ-ಶಿವಸಾಮರಸ್ಯಾನಂದವನು ಪಡೆಯಬೇಕಾದೊಡೆ, ಪಾರ್ಥಿವಾಂಬುಘನ ತೈಜಸಮಾರುತಮಂತರಿಕ್ಷಂ—ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶಂಗಳು, ಎಂಬ—ಎನಿಸುವ, ಒಡಲಿದು—ದೇಹವಿದು, ಒಂದೆಯ್ಯೆಸೆ—ಒಂದೆಯಷ್ಟೇ, ತನು-ಶರೀರವು, ಪಾರ್ಥಿವಂ-ಪೃಥ್ವೀತತ್ವಸಂಬಂಧವಾದೊಡೆಯೂ, ಅಂಬರದೇಹಂ-ಆಕಾಶತತ್ವಸಂಬಂಧವಾದ ದೇಹವು, ಆದೊಡೆ—ಉಂಟಾದೊಡೆಯೂ, ಏಂ-ಏನು ಪ್ರಯೋಜನ ? ಬಿಡದಿರಬಾರದಯ್ಯ-ವಿಸರ್ಜಿಸಬಾರದು. ||೮೪||

ಟಿಪ್ಪಣಿ—ಎಂಥ ದೇಹವನ್ನು ಧರಿಸಿದ್ದರೂ ಬಿಡುವಕಾಲ ಬಂದರೆ ಒಂದು ದಿವಸ ಅದನ್ನು ಬಿಡಬೇಕು. ಲಿಂಗಾಂಗಸಮರಸಸೌಖ್ಯವನ್ನು ಹೊಂದುವುದಕ್ಕೆ ಪೃಥ್ವೀಮಯಶರೀರವಾದರೇನು ? ಜಲಮಯ ಶರೀರವಾದರೇನು ? ಮತ್ತಿನ್ನಾವಭೂತವಿಕಾರದೇಹವಾದರೆತಾನೇ ಯೇನು ? ಎಲ್ಲವೂ ಒಂದೇ. ದೇಹಸಂಬಂಧವೆಲ್ಲಿಯವರೆಗೆ ಇರಬೇಕಾಗುವುದೋ ಅಲ್ಲಿಯವರೆಗೂ ಅದನ್ನು ಬಿಡದೆ ಹಿಡಿದೇ ಇರಬೇಕು. ||೮೪||

ಇಲ್ಲೆನ ಗುರ್ವಿವಾರಿಹುತಭುಙ್ಮರುದಂಬರ ಮೆಂಬಿವೆಂದು ತ |
ನ್ನಲ್ಲಿಯೆ ತಾಂ ಗುರೂಕ್ತಿಮತದಿಂ ತಿಳಿ ದೈದುವ ನೆಯ್ದೆಬಿಟ್ಟು ನಿಂ ||
ದಲ್ಲಿ ವಿಶುದ್ಧನಿಷ್ಕಳಶಿವೈಕ್ಯಸುಖಾಸ್ಪದ ನಪ್ಪನೆಂದು ಕೈ |
ವಲ್ಯಶ್ರುತಿಪ್ರಶಸ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೮೫||

ಟೀಕೆ—ಗುರೂಕ್ತಿಮತದಿಂ-ಗುರೂಪದೇಶಪ್ರಕಾರದಿಂದೆ, ತನ್ನಲ್ಲಿಯೆತಾಂ-ತನ್ನಲ್ಲಿತಾನೇ, ತಿಳಿದು-ಅರಿದು, ಉರ್ವಿವಾರಿಹುತಭುಙ್ಮರುದಂಬರಮೆಂಬಿವು-ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶಂಗಳೆಂಬಿವು, ಇಲ್ಲೆನಗೆಂದು-ತನಗಿಲ್ಲವೆಂದು, ಐದುವಂ-ಐದುಭೂತಂಗಳನ್ನೂ, ಎಯ್ದೆ ಬಿಟ್ಟು-ಚೆನ್ನಾಗಿವಿಸರ್ಜಿಸಿ, ನಿಂದಲ್ಲಿ-ಸ್ಥಿರವಾದಲ್ಲಿ, ವಿಶುದ್ಧನಿಷ್ಕಳಶಿವೈಕ್ಯಸುಖಾಸ್ಪದನಪ್ಪನೆಂದು-ವಿಶುದ್ಧ-ಮಿಗೆನಿರ್ಮಳವಾದ, ನಿಷ್ಕಳ-ಕಳಾತೀತವಾದ, ಶಿವೈಕ್ಯಸುಖ-ಶಿವಸಾಮರಸ್ಯಾನಂದಕ್ಕೆ, ಆಸ್ಪದನಪ್ಪನೆಂದು-ಸ್ಥಾನವಾಗುವನೆಂದು, ಕೈವಲ್ಯಶ್ರುತಿಪ್ರಶಸ್ತಿ-ಕೈವಲ್ಯಶ್ರುತಿ-" ನಭೂಮಿರಾಪೋನಚವಹ್ನಿರಸ್ತಿನಚಾನಿಲೋಮೇಽಸ್ತಿನಚಾಂಬರಂಚ | ಏವಂವಿದಿತ್ವಾಪರಮಾತ್ಮರೂಪಂಗುಹಾಶಯಂನಿಷ್ಕಳಮದ್ವಿತೀಯಂ || ಸಮಸ್ತಸಾಕ್ಷಿಂಸದಸದ್ವಿಹೀನಂ ಪ್ರಯಾತಿಸದ್ಯಃಪರಮಾತ್ಮರೂಪಂ " || ಎಂಬ ಕೈವಲ್ಯೋಪನಿಷತ್ತಿನ, ಪ್ರಶಸ್ತಿ-ಕೊಂಡಾಡುವಿಕೆಯುಂಟು. ||೮೫||

ಟಿಪ್ಪಣಿ—ತಾನು ಗುರುವಿನಿಂದ ವೇಧಾದಿದೀಕ್ಷಾತ್ರಯವನ್ನು ಹೊಂದಿದನಂತರ ಪೃಥಿವ್ಯಾದಿಪಂಚಭೂತವಿಕಾರವು ತನ್ನಲ್ಲಿಲ್ಲವೆಂದೂ, ತಾನು ಶುದ್ಧಲಿಂಗಶರೀರಿಯೆಂದೂ ತಿಳಿದುಕೊಂಡವನಾದರೆ, ಅಂತಪ್ಪ ಶರಣನು ನಿರ್ಮಳಶಿವಯೋಗಾನಂದಕ್ಕೆ ಪಾತ್ರನಾಗಿ ಮೆರೆಯುವನು. ಇದೇ ಅರ್ಥ

ವನ್ನು ಕೈವಲ್ಯೋಪನಿಷತ್ತು, " ನನಗೆ ಭೂಸಂಬಂಧವೂ, ಅಗ್ನಿಸಂಬಂಧವೂ, ಆಕಾಶಸಂಬಂಧವೂ ಸಹ ಇರುವುದಿಲ್ಲ. ಎಂಬದಾಗಿ ತಿಳಿದುಕೊಂಡನಂತರ ಹೃದಯಾಕಾಶದಲ್ಲಿ ಹೊಳೆಯುವ ಕಳಾತೀತವಾದ ಪರಬ್ರಹ್ಮವನ್ನು ಹೊಂದುವನು " ಎಂಬುದಾಗಿ ಹೇಳಿರುವುದು. ||೮೫||

ದೃಶ್ಯಜಡಂಗಳೆಂದೆನಿಪ ನಾಕಸಮೀರಣಹವ್ಯಭುಕ್ಪಯಃ |
ಕಾಶ್ಯಪಿಗಳ್ ವಿಶಿಷ್ಟ ಗುಣವೃತ್ತಿಗಳಾದೊಡೆ ಯುತ್ತರೋತ್ತರಂ ||
ನಶ್ವರವಸ್ತುಗಳ್ ಪ್ರಳಯಕಾಲದೊಳಿಂತಿವಡಂಗಿ ಪೋಗೆ ನೀಂ |
ಶಾಶ್ವತನಾಗಿ ಬಾಳ್ವೆ ಪರಮಪ್ರಭುವೇ ಮಹದೈಪುರೀಶ್ವರಾ ||೮೬||

ಟೀಕೆ—ದೃಶ್ಯಜಡಂಗಳ್ ಎಂದೆನಿಪ-ದೃಶ್ಯ-ಕಾಣಲ್ತಕ್ಕ, ಜಡ-ಅಚೇತನಂಗಳೆಂದಿನಿಸುವ, ನಾಕಸಮೀರಣಹವ್ಯಭುಕ್ಪಯಃಕಾಶ್ಯಪಿಗಳ್--ನಾಕ—ಆಕಾಶ, ಸಮೀರಣ-ವಾಯು, ಹವ್ಯಭುಕ್-ಅಗ್ನಿ, ಪಯಃ-ಉದಕ, ಕಾಶ್ಯಪಿಗಳ್-ಭೂಮಿ ಇವುಗಳು, ವಿಶಿಷ್ಟಗುಣವೃತ್ತಿಗಳಾದೊಡೆ-ತಮ್ಮತಮ್ಮ ಗುಣಂಗಳವರ್ತನೆಯೊಡನೆ ಕೂಡಿದೊಡೆಯೂ, ಉತ್ತರೋತ್ತರಂ-ಒಂದರಿಂದೊಂದುವೆಗ್ಗಳಮಾಗಿ, ನಶ್ವರವಸ್ತುಗಳ್-ಅನಿತ್ಯವಾದವಸ್ತುಗಳು, ಪ್ರಳಯಕಾಲದೊಳ್-ಲಯಕಾಲದಲ್ಲಿ, ಇಂತಿವು-ಈ ಭೂತಂಗಳು, ಅಡಂಗಿಪೋಗೆ-ನಷ್ಟವಾಗಿಹೋಗಲಾಗಿ, ನೀಂ-ಎಲೆ ಶಿವನೇ ನೀನು, ಶಾಶ್ವತನಾಗಿ ಬಾಳ್ವೆ-ಕೇಡಿಲ್ಲದಾತನಾಗಿ ಬರ್ದುಕುವೆ. ||೮೬||

ಟಿಪ್ಪಣಿ—ಕಣ್ಣಿಗೆ ಕಾಣಿಸುವ ಚೇತನರಹಿತಗಳಾದ ಪೃಥಿವ್ಯಾದಿ ಭೂತಗಳೆಲ್ಲವೂ ತಮ್ಮ ತಮ್ಮ ಗುಣಗಳಿಂದ ಕೂಡಿಕೊಂಡು ಒಂದಕ್ಕಿಂತ ಮತ್ತೊಂದು ವಿಶಿಷ್ಟವಾಗಿದ್ದರೂ ಪ್ರಳಯಕಾಲವು ಸನ್ನಿಹಿತವಾದಾಗ ಅವೆಲ್ಲವೂ ನಷ್ಟವಾಗಿ ಹೋಗುವುವು. ಎಲೈ ಪರಶಿವನೆ ! ನೀನುಮಾತ್ರ ಆಗಲೂ ನಾಶರಹಿತನಾಗಿ ಬಾಳುತ್ತಿರುವೆ. ||೮೬||

ಪೃಥಿವಿ ಜಡಂ ಜಡಂ ಸಲಿಲಮಗ್ನಿ ಜಡಂ ಶ್ವಸನಂ ಜಡಂ ಜಡಂ |
ಪ್ರಥಮಗುಣೈಕವೃತ್ತಿ ನಭಮಿಂತಿವನಾತ್ಮವಿವೇಕಶಕ್ತಿಯಿಂ ||
ಮಥಿಸಿ ಜಡಾಂಗಮಂ ಬಿಸುಟು ನಿಷ್ಕಳಮಪ್ಪ ಷಡಂಗಲಿಂಗಸ |
ತ್ಪಥಗತನಪ್ಪನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೮೭||

ಟೀಕೆ—ಪೃಥಿವಿ-ಭೂಮಿಯು, ಜಡಂ-ಅಚೇತನವು, ಸಲಿಲಂ—ಜಲವು, ಜಡಂ-ಅಚೇತನವು, ಅಗ್ನಿ—ವಹ್ನಿಯು, ಜಡಂ-ಅಚೇತನವು, ಶ್ವಸನಂ-ವಾಯು, ಜಡಂ-ಅಚೇತನವು, ಪ್ರಥಮಗುಣೈಕವೃತ್ತಿನಭಂ-ಪ್ರಥಮಗುಣ—ಶಬ್ದಗುಣದಿಂದ, ಏಕ-ಮುಖ್ಯವಾದ, ವೃತ್ತಿ-ವರ್ತನೆಯುಳ್ಳ, ನಭಂ-ಆಕಾಶವು, ಜಡಂ-ಅಚೇತನವು, ಇಂತು-ಹೀಂಗೆ, ಇವಂ-ಇವನ್ನು, ಆತ್ಮವಿವೇಕಶಕ್ತಿಯಿಂ-ತನ್ನ ಜ್ಞಾನಸಾಮರ್ಥ್ಯದಿಂದೆ, ಮಥಿಸಿ-ಕಡೆದು, ಜಡಾಂಗಮಂ-ಅಚೇತನಶರೀರವನ್ನು, ಬಿಸುಟು-ವಿಸರ್ಜಿಸಿ,

ನಿಷ್ಕಳಮಪ್ಪ-ಕಲಾತೀತವಾದ, ಷಡಂಗಲಿಂಗಸತ್ಪಥಗತನಪ್ಪನಯ್ಯ-ಷಡಂಗಲಿಂಗ-ಆರುಲಿಂಗಗಳ, ಸತ್ಪಥ-ಸನ್ಮಾರ್ಗವನ್ನು, ಗತನಪ್ಪನಯ್ಯ-ಐದುವಾತನಹನು. ||೮೭||

ಟಿಪ್ಪಣಿ—ಶರಣನು ಆತ್ಮವಿಚಾರಶಕ್ತಿಯಿಂದ—ಈ ಭೂಮಿ ಜಲ ಅಗ್ನಿ ವಾಯು ಆಕಾಶಗಳೆಲ್ಲಾ ಅಚೇತನವಾದುವುಗಳು ಎಂಬುದನ್ನು ತಿಳಿದು, ಆ ಜಡವಸ್ತುಗಳ ಸಂಬಂಧವನ್ನು ಪರಿತ್ಯಜಿಸಿ, ನಿತ್ಯವಾದ ಆಚಾರಾದಿ ಲಿಂಗಗಳ ಸಂಬಂಧವನ್ನು ಹೊಂದಿ ಸಮರಸವಾಗಿ ಮೆರೆಯುತ್ತಿರುವನು ||೮೭||

ಅವತಾರಿಕೆ—ನಿಜಾನಂದತೃಪ್ತನಾಗಿ ನಿಸ್ಪೃಹನಾದ ಶರಣಂಗೆ ಕಾಂಕ್ಷೆಯಿಂದೊಂದ ಬೇಡುವುದು ಸಲ್ಲದೆಂದು ಪೇಳುತ್ತಿರ್ದಪಂ.—

ಮಾಡಿದ ಪಾಪ ಮಿಲ್ಲದೊಡೆ ಮೊಡುವ ಪಾಪ ಮದಿಲ್ಲ ಮುಂದೆತಾಂ |
ನೋಡಲು ಪಾಪ ಮೆಂಬು ದದು ಮುನ್ನವೆ ಯಿಲ್ಲ ಬಿಡಾದೊಡಂತದಂ ||
ಮಾಡಲು ಕರ್ತ ನಲ್ಲ ಪರತಂತ್ರ ನದಂತಿರ ಲಿನ್ನು ನಿನ್ನ ನಾಂ |
ಬೇಡುವ ಪಾಪ ಮುಂಟೆ ಪರಮಪ್ರಭುವೇ ಮಹದೈಪುರೀಶ್ವರಾ ||೮೮||

ಟೀಕೆ—ಮಾಡಿದಪಾಪಂ-ಮೊದಲುಮಾಡಿದ ಪಾಪವು, ಇಲ್ಲದೊಡೆ-ಇಲ್ಲದಿರ್ದೊಡೆ, ಮುಂದೆ-ಇನ್ನು, ಮಾಡುವಪಾಪಂ-ಮಾಡತಕ್ಕಪಾಪವು. ತಾಂ-ತಾನು, ಅದಿಲ್ಲ-ಅದು ತಾನಿಲ್ಲ, ನೋಡಲು-ವಿಚಾರಿಸಲಾಗಿ, ಪಾಪಮೆಂಬುದದು-ಪಾಪವೆಂಬುದು ತಾನು, ಮುನ್ನವೆಯಿಲ್ಲ-ಮೊದಲೇಯಿಲ್ಲ, ಬಿಡು-ವಿಸರ್ಜಿಸು, ಆದೊಡೆ-ಉಂಟಾದೊಡೆ, ಅಂತದಂ-ಹಾಗದನ್ನು, ಮಾಡಲು-ಮಾಡುವುದಕ್ಕೆ, ಕರ್ತನಲ್ಲ-ಸ್ವತಂತ್ರನಲ್ಲ, ಪರತಂತ್ರಂ-ಪರಾಧೀನನು, ಅದಂತಿರಲಿ-ಅದುಹಾಂಗಿರಲಿ, ಇನ್ನು-ಮುಂದೆ, ನಿನ್ನಂ-ನಿನ್ನನ್ನು, ಆಂ-ನಾನು, ಬೇಡುವ-ಬೇಡುವಂಥ, ಪಾಪಮುಂಟೆ-ದೋಷಮುಂಟೆ ? ಇಲ್ಲ. ||೮೮||

ಟಿಪ್ಪಣಿ—ಪುರಾಕೃತವಾದ ಪಾಪದ ಸಂಬಂಧವಿಲ್ಲದಿರುವಾಗ, ತತ್ಕರ್ಮಾನುಸ್ಯೂತವಾಗಿ ಮುಂದೆ ಮಾಡಲ್ಪಡತಕ್ಕ ಪಾಪಾಚರಣೆಯೂ ಇರುವುದಿಲ್ಲ. ವಿಚಾರಮಾಡಿ ನೋಡಿದರೆ “ಸ್ವಕರ್ಮಪರಿಪಾಕೇನಪ್ರಕ್ಷೀಣಮಲವಾಸನಃ | ಶಿವಪ್ರಸಾದಾಜ್ಜೀವೋಽಯಂಜಾಯತೇಶುದ್ಧಮಾನಸಃ || ಶುದ್ಧಾಂತಃಕರಣೇಜೀವೇಶುದ್ಧಕರ್ಮವಿಪಾಕತಃ | ಜಾಯತೇಶಿವಕಾರುಣ್ಯಾಚ್ಛ್ರಸ್ಫುಟಾಭಕ್ತಿರೈಶ್ವರೀ” ಎಂಬ ಸಿದ್ಧಾಂತಶಿಖಾಮಣಿವಚನರೀತ್ಯಾ ಕರ್ಮಕ್ಷಯಾನಂತರವೇ ಶಿವಭಕ್ತಿಯು ಹುಟ್ಟಿ, ತದ್ದ್ವಾರಾ ಮೋಕ್ಷಮಾರ್ಗೋಪದೇಶವು ಸಮನಿಸಿ, ಶರಣನಾದವನಿಗೆ ಪಾಪಸಂಬಂಧವು ಮೊದಲೇ ಇಲ್ಲವಾಗಿರುವುದು. ಒಂದುವೇಳೆ ಇಹದಲ್ಲಿ ಪಾಪಾಚರಣೆಯೆಂಬುದು ಸಂಭವಿಸಿದರೂ ಅದನ್ನು ಮಾಡುವುದಕ್ಕೆ ನಾನು ಕರ್ತನಲ್ಲ; ನಿನ್ನಧೀನನು. ಹೀಗಿರುವಲ್ಲಿ ಅಸ್ವತಂತ್ರನಾದ ನನಗೆ ನಿನ್ನನ್ನು ಕುರಿತು ಒಂದು ಇಷ್ಟಾರ್ಥವು ಬೇಕೆಂದು ಬೇಡುವ ಪಾಪವು ತಾನೇ ಎಲ್ಲುಂಟು ? ||೮೮||

ಬೇಡುವವಂ ವಿಚಾರಿಪೊಡೆ ಭಕ್ತನೆ ಯಲ್ಲಭಿವಾಂಛಿತಾರ್ಥಮಂ |
ಬೇಡಿಸಿಕೊಂಬವಂ ಕಡೆಗೆ ದೇವನೆಯ ಲ್ಲುಭಯೈಕ ಮಿಂತಿವಂ ||

ಕೂಡುತಿರ ಲ್ಭವಂ ಭವಮ ನುಳ್ಳವನೇ ಭವಿ ಯಾಭವಿತ್ವಮಂ |
ಮಾಡುವ ಭಕ್ತಿ ಯೇಕೆ ಪರಮಪ್ರಭುವೇ ಮಹದೈಪುರೀಶ್ವರಾ ||೮೯||

ಟೀಕೆ—ಬೇಡುವವಂ-ಯಾಚಿಸುವಾತನು, ವಿಚಾರಿಪೊಡೆ-ವಿಚಾರಿಸಲಾಗಿ, ಭಕ್ತನೆಯಲ್ಲ-ಶಿವಭಕ್ತನೇ ಅಲ್ಲ, ಅಭಿವಾಂಛಿತಾರ್ಥಮಂ-ಬಯಸಿದಂಥ ಅರ್ಥವನ್ನು, ಬೇಡಿಸಿಕೊಂಬವಂ-ಬೇಡಿಸಿಕೊಂಬಾತನು, ಕಡೆಗೆ-ಅಂತ್ಯಕ್ಕೆ, ದೇವನೆಯಲ್ಲ-ದೇವನೆನಿಸುವಾತನೇ ಅಲ್ಲ, ಉಭಯೈಕಂ-ಎರಡೂಒಂದೆಯೇ, ಇಂತಿವಂ-ಹೀಂಗೆಎರಡನು, ಕೂಡುತಿರಲ್-ಸಂಬಂಧಿಸಲಾಗಿ, ಭವಂ-ಸಂಸಾರವು, ಭವಮನುಳ್ಳವನೇ-ಸಂಸಾರವನುಳ್ಳಾತನೇ, ಭವಿ-ಸಂಸಾರಿಯು, ಆಭವಿತ್ವಮಂ-ಆಸಂಸಾರಿತನವನು, ಮಾಡುವ ಭಕ್ತಿ-ಉಂಟುಮಾಡುವ ಭಕ್ತಿಯು, ಏಕೆ-ಏನುಪ್ರಯೋಜನವು ? ||೮೯||

ಟೀಕೆ—ಕಾಮ್ಯಕರ್ಮವನ್ನೆಸಗಿ ತನ್ನ ಇಷ್ಟದೈವವನ್ನು ಕುರಿತು ವರಪ್ರಾರ್ಥನೆಯನ್ನು ಮಾಡತಕ್ಕವನ್ನು ಭಕ್ತನೇ ಅಲ್ಲ (ಏಕೆಂದರೆ—ಭಕ್ತನು ನಿಷ್ಕಾಮಭಕ್ತಿಯಿಂದ ಪರಿಪೂರ್ಣನಾಗಿರಬೇಕು). ಇಷ್ಟಾರ್ಥಕ್ಕಾಗಿ ಭಕ್ತರಿಂದ ಬೇಡಿಸಿಕೊಳ್ಳತಕ್ಕವನು ದೈವವೇ ಅಲ್ಲ ಏಕೆಂದರೆ—ಭಕ್ತರಲ್ಲಿ ನಿರ್ವ್ಯಾಜಕಾರುಣ್ಯವುಳ್ಳವನು ಈಶ್ವರನು), ಅದುಕಾರಣ, ಬೇಡುವ ಬೇಡಿಸಿಕೊಳ್ಳುವವರಿಬ್ಬರೂ ಭಕ್ತನೂ ಅಲ್ಲ, ದೈವವೂ ಅಲ್ಲ, ಇಬ್ಬರೂ ಒಂದೇ. ಈ ಬೇಡುವಿಕೆ ಬೇಡಿಸಿಕೊಳ್ಳುವಿಕೆಗಳೆಂಬೆರಡೂ ಭವಮೂಲವಾದುವುಗಳು. ಅಂಥ ಭವದಿಂದ ಬದ್ಧನಾದವನು ಭಕ್ತನಲ್ಲ, ಅವನು ಭವಿಯು. ಅಂಥ ಭವಿತ್ವವನ್ನುಂಟುಮಾಡುವ ಸಕಾಮಭಕ್ತಿಯಿಂದ ಪ್ರಯೋಜನವೇನು ? ||೮೯||

ಬೇಡದ ಮುನ್ನ ತಾನೆ ಕುಡುವಾತನೆ ದೇವ ನಭೀಷ್ಟಸಿದ್ಧಿಯಂ |
ಬೇಡದೆ ಕಾಡ ದೆಯ್ದುವನೆ ಭಕ್ತ ನಯತ್ನದಿ ನಪ್ರಯಾಸದಿಂ ||
ಬೇಡುವ ಕಾಡು ವಾಯಸಗೊಳುತ್ತಿಹ ಭಕ್ತಿಯೆ ಪಾಪ ಮಿಂತಿದಂ |
ಬೇಡದಹಾಂಗೆ ಮಾಡು ಪರಮಪ್ರಭುವೇ ಮಹದೈಪುರೀಶ್ವರಾ ||೯೦||

ಟೀಕೆ—ಅಭೀಷ್ಟಸಿದ್ಧಿಯಂ-ಮನೋರಥಸಿದ್ಧಿಯನು, ಬೇಡದಮುನ್ನ-ಬೇಡುವುದರಿಂದ ಮೊದಲು, ತಾನೆ-ತನ್ನಿಂದತಾನೇ, ಕುಡುವಾತನೆ-ಕೊಡುವಂಥಾತನೇ, ದೇವಂ-ಕರ್ತನು, ಅಯತ್ನದಿಂ-ಯತ್ನವಿಲ್ಲದೆ, ಅಪ್ರಯಾಸದಿಂ-ಪ್ರಯಾಸವಿಲ್ಲದೆ, ಬೇಡದೆ ಕಾಡದೆ-ಬೇಡುವುದೂ ಕಾಡುವುದೂ ಇಲ್ಲದೆ, ಎಯ್ದುವನೆ-ಐದುವಾತನೇ, ಭಕ್ತಂ-ಶಿವಭಕ್ತನು, ಬೇಡುವಕಾಡುವ-ಬೇಡುವಕಾಡುವುದರಿಂದೆ, ಆಯಾಸಗೊಳುತ್ತಿಹ-ಕೋಟಲೆಗೊಳುತ್ತಿರ್ಪ, ಭಕ್ತಿ-ಭಕ್ತಿತಾನೇ, ಪಾಪಂ-ಪಾಪವು, ಇಂತಿದಂ-ಹೀಗೆಂಬುದನ್ನು, ಬೇಡದಹಾಂಗೆಮಾಡು-ಬೇಡದಹಾಗೆಮಾಡು. ||೯೦||

ಟಿಪ್ಪಣಿ—ಭಕ್ತನು ಪ್ರಾರ್ಥಿಸುವುದಕ್ಕಿಂತ ಮೊದಲೇ ತಾನಾಗಿ ಅವನಿಷ್ಟಾರ್ಥವನ್ನು ಕೊಡತಕ್ಕವನೇ ದೈವವು. ಯತ್ನ ಪ್ರಯಾಸ ಬೇಡುವಿಕೆ ಕಾಡು-ವಿಕೆಗಳೊಂದೂ ಇಲ್ಲದೆ ದೈವವನ್ನು

ಸೇವಿಸುವವನೇ ಭಕ್ತನು, ಬೇಡುವ ಕಾಡುವ ಆಯಾಸದಿಂದ ಕೂಡಿ ಆಚರಿಸುವ ಭಕ್ತಿ ಯಾವು ದುಂಟೋ ಅದೇ ಪಾಪಾಚರಣೆಯು. ಅಂತಹ ಸಕಾಮವಾದ ಭಕ್ತಿಯನ್ನು ಅಪೇಕ್ಷಿಸದೆ ಇರು ವಂತೆ ನನಗೆ ಅನುಗ್ರಹಿಸು. ||೯೦||

ಬೇಡುವು ದಾವು ದಿಲ್ಲದುದ ನುಳ್ಳುದದುಂಟದ ನಿಲ್ಲಮಾಡಿ ತಾಂ |
ಬೇಡಲದೇಕೆ ಬೇಡಿದೊಡೆ ಬಾರದು ದಿಲ್ಲದು ದಿಲ್ಲ ಸರ್ವಥಾ ||
ಬೇಡದೆ ಮಾಣ್ದೊಡುಳ್ಳುದದು ಪೋಗ ದದೀಗ ಯಥಾರ್ಥ ಮಿಂತಿದಂ |
ಬೇಡದ ಹಾಂಗೆ ಮಾಡು ಪರಮಪ್ರಭುವೇ ಮಹದೈಪುರೀಶ್ವರಾ ||೯೧||

ಟೀಕೆ—ಇಲ್ಲದುದಂ-ಇಲ್ಲದವಸ್ತುವನ್ನು, ಬೇಡುವುದಾವುದು-ಬೇಡುವುದೇನು? ಉಳ್ಳುದು-ಉಂಟಾದವಸ್ತುವು, ಅದುಂಟು-ಅದುಂಟೇ ಉಂಟು. ಅದಂ-ಆವಸ್ತು ವನ್ನು, ಇಲ್ಲಮಾಡಿ-ಇಲ್ಲದುದನಾಗಿಮಾಡಿ, ತಾಂ-ತಾನು, ಬೇಡಲದೇಕೆ-ಬೇಡುವು ದುತಾನೇಕೆ ? ಬೇಡಿದೊಡೆ-ಯಾಚಿಸಿದೊಡೆ, ಬಾರದುದು-ತಾನು ಕೈಸೇರದುದೂ, ಇಲ್ಲದುದು-ಇಲ್ಲದವಸ್ತುವೂ, ಇಲ್ಲ-ಇಲ್ಲವೇ ಇಲ್ಲ. ಸರ್ವಥಾ-ಎಲ್ಲಾ ಬಗೆಯಿಂದೆ ಯೂ, ಬೇಡದೆಮಾಣ್ದೊಡೆ-ಬೇಡದೆಬಿಟ್ಟೊಡೆ, ಉಳ್ಳುದು-ಉಂಟಾದುದು, ಅದು ಪೋಗದು—ಅದುಪೋಗದೆಇರ್ಪುದು, ಅದೀಗಯಥಾರ್ಥಂ—ಅದೀಗವೇ ನಿಶ್ಚಯವು ಇಂತಿದಂ-ಈತೆರದವಸ್ತುವನ್ನು, ಬೇಡದಹಾಂಗೆಮಾಡು-ಯಾಚಿಸದಂತೆಮಾಡು.

ಟಿಪ್ಪಣಿ—ಲೋಕದಲ್ಲಿ ಇಲ್ಲದ ವಸ್ತುವನ್ನು ಬೇಡುವುದೇತಕ್ಕೆ ? ಇರುವ ವಸ್ತುವು ಇದ್ದೇ ಇರುವುದು. ಹಾಗೆ ಇರುವ ವಸ್ತುವನ್ನು ತನಗೆ ಇಲ್ಲವೆಂದು ಕಲ್ಪಿಸಿಕೊಂಡು, ಅದನ್ನು ಯಾಚಿ ಸುವುದೇತಕ್ಕೆ ? ಬೇಡಿದರೆ ದೊರೆಯದಿರುವ ಮತ್ತೂ ಸರ್ವಥಾ ಅಸಿದ್ಧವಾಗಿರುವ ವಸ್ತುವನ್ನು ಬೇಡಿದರೂ ಅದು ದೊರೆಯುವ ಹಾಗೇ ಇಲ್ಲ. ಇರುವ ವಸ್ತುವನ್ನು ಬೇಡದೆ ಇದ್ದರೂ ತಾನು ಕಳೆದುಹೋಗದೆ ಸಿದ್ಧವಾಗಿಯೇ ಇರುವುದು. ಇದು ನಿಶ್ಚಯ. ಅದುಕಾರಣ, ಸಕಾಮ ವ್ಯವಹಾ ರಕ್ಕೆ ಈಡಾದ ವಸ್ತುವನ್ನು ಎಂದಿಗೂ ಅಪೇಕ್ಷಿಸದಿರುವಂತೆ ನನಗೆ ಅನುಗ್ರಹಿಸು. ||೯೧||

ಬೇಡುವುದೀಗ ಕಾಮ ಮದು ಬಾರದುದೇ ಕಡುಗೋಪ ಮಂತದ |
ಕ್ಕೀಡಹುದೀಗ ಲೋಭ ಮದರಿಂ ಮರೆದಿರ್ಪುದೆ ಮೋಹ ಮಲ್ಲಿಪೊ ||
ಕ್ಕಾಡುವುದೀಗ ದುರ್ಮದ ಮದಂ ಬಲಿದಿರ್ಪುದು ತಾನೆ ಮತ್ಸರಂ |
ಬೇಡುವ ಪಾಪಮಿಷ್ಟು ಪರಮಪ್ರಭುವೇ ಮಹದೈಪುರೀಶ್ವರಾ ||೯೨||

ಟೀಕೆ—ಬೇಡುವುದೀಗ-ಯಾಚಿಸುವುದೀಗ, ಕಾಮಂ-ಕಾಮವು, ಅದು-ಆ ವಸ್ತು, ಬಾರದುದೇ-ಬಾರದಿರ್ಪುದೇ, ಕಡುಗೋಪಂ-ವೆಗ್ಗಳವಾದಕ್ರೋಧವು, ಅಂತದಕ್ಕೆ-ಆ ವಸ್ತುವಿಗೆ, ಈಡಹುದೀಗ-ಒಳಗಾಗುವುದೀಗ, ಲೋಭಂ-ಲೋಭವು, ಅದರಿಂ-ಆ ವಸ್ತುವಿನಿಂದೆ, ಮರೆದಿರ್ಪುದೆ-ಅಜ್ಞಾನದಿಂದಿರ್ಪುದೇ, ಮೋಹಂ-ಮೋ ಹವು, ಅಲ್ಲಿ-ಆ ವಸ್ತುವಿನಲ್ಲಿ, ಪೊಕ್ಕಾಡುವುದೀಗ-ತೇಂಕಾಡುವುದೀಗ, ದುರ್ಮದಂ-

 

ನಿಕೃಷ್ಟವಾದಮುದವು, ಅದಂ-ಆವಸ್ತುವನು, ಬಲಿದಿರ್ಪುದುತಾನೆ-ದೃಢೀಕರಿಸಿರ್ಪುದು ತಾನೇ, ಮತ್ಸರಂ-ಮತ್ಸರವು, ಇಷ್ಟು-ಇವೆಲ್ಲವೂ, ಬೇಡುವಪಾಪಂ-ಯಾಚಿಸುವ ಪಾಪವೇ. ||೯೨||

ಟಿಪ್ಪಣಿ—ಒಂದುವಸ್ತುವನ್ನು ಬೇಕೆಂದು ಅಪೇಕ್ಷಿಸುವುದೇ ಕಾಮವು. ಆ ವಸ್ತುವು ದೊರೆಯದೆ ಹೋದರೆ ಆಗಲೇ ಕೋಪವು ಹುಟ್ಟುವುದು. ಬೇಡಿದ ವಸ್ತುವು ದೊರೆದರೆ ಅದನ್ನು ಕಳೆಯದೆ ರಕ್ಷಿಸಿಕೊಂಡಿರುವುದೇ ಲೋಭವು. ಆ ಇಷ್ಟ ವಸ್ತು ಪ್ರಾಪ್ತಿಯದೆಸೆಯಿಂದ ವಿವೇಕ ಗೆಟ್ಟಿರುವುದೇ ಮೋಹವು. ಆ ವಸ್ತು ಪ್ರಾಪ್ತಿಯ ಆನಂದದಲ್ಲಿ ಮುಳುಗಾಡುತ್ತ ಸೊಕ್ಕಿರುವುದೇ ಮದವು. ದೊರೆದ ಆ ವಸ್ತುವನ್ನು ಭದ್ರಪಡಿಸಿಕೊಂಡು ಬೀಗುತ್ತಿರುವುದೇ ಮತ್ಸರವು. ಅದು ಕಾರಣ, ವಿಚಾರಮಾಡಿ ನೋಡಿದರೆ ಕಾಮಾದ್ಯರಿಷಡ್ವರ್ಗವೆಲ್ಲವೂ ಬೇಡುವುದೆಂಬ ಪಾಪಕಾರ್ಯ ವೊಂದರಿಂದಲೇ ಹುಟ್ಟುವುವೆಂಬುದು ಗೊತ್ತಾಗುವುದು. ||೯೨||

ಬೇಡುವವಂಗೆ ಬೇಡುತಿಹ ದೈನ್ಯ ಮದೊಂದುರೆ ಬೇಡಿ ಬರ್ಪ ಹೆ |
ಗ್ಗೊಡಿನ ವಿತ್ತದಿಂ ದಕಟ ಪೂರ್ಣ ಮೆನಿಪ್ಪುದೆ ಮತ್ತೆ ಮತ್ತೆ ತಾಂ ||
ಬೇಡಿಸುತಿರ್ಪುದೈಸೆ ಸಿನೆ ಬೇಡದವಂ ಗದು ಪೂರ್ಣಮಾಗಿ ಕೈ |
ಗೂಡಿಸು ತಿಕ್ಕುತಿರ್ಕು ಪರಮಪ್ರಭುವೇ ಮಹದೈಪುರೀಶ್ವರಾ ||೯೩||

ಟೀಕೆ—ಬೇಡುವವಂಗೆ-ಯಾಚಿಸುವಾತಂಗೆ, ಬೇಡುತಿಹದೈನ್ಯಂ-ಬೇಡುತಿರ್ಪದೈನ್ಯವು, ಉರೆ-ಚೆನ್ನಾಗಿ, ಅದೊಂದು-ಅದುತಾನೊಂದು, ಬೇಡಿಬರ್ಪ-ಯಾಚಿಸಿಬರ್ಪ, ಹೆಗ್ಗೊಡಿನವಿತ್ತದಿಂದೆ-ವೆಗ್ಗಳವಾಗಿಕೊಟ್ಟದ್ರವ್ಯದಿಂದೆ, ಪೂರ್ಣಮೆನಿಪ್ಪುದೆ-ಸಾಕೆಂದೆನಿಸುವುದೆ ? ಅಕಟ-ಅಯ್ಯೋ ! ಮತ್ತೆಮತ್ತೆ-ಮರಳಿಮರಳಿ, ತಾಂ-ತಾನು, ಬೇಡಿಸುತಿರ್ಪುದೈಸೆ-ಯಾಚಿಸುತಿರ್ಪುದಷ್ಟೇ, ಅದು-ಅದುನಿಮಿತ್ತವಾಗಿ, ಅದು-ಆ ವಸ್ತುವು, ಸಿನೆಬೇಡದವಂಗೆ-ಏನನ್ನೂ ಬೇಡದಾತಂಗೆ, ಪೂರ್ಣಮಾಗಿ-ಸಾಕೆಂಬಂತೆ, ಕೈಗೂಡಿಸುತೆ-ಕೈಸೇರಿಸುತೆ, ಇಕ್ಕುತಿರ್ಕು-ಕೊಡುತ್ತಿರುವುದು.

ಟಿಪ್ಪಣಿ—ಪರರನ್ನು ಕಂಡು ಯಾಚಿಸುವನಲ್ಲಿರುವ ಬಡತನವು, ಆ ಅನ್ಯರು ಕೊಡುವ ಮಿಗಿಲಾದ ಹಣದಿಂದ ತುಂಬಿಹೋಗಿ, ಇನ್ನು ಸಾಕೆಂದು ಹೇಳಿಸಿಕೊಳ್ಳುವುದೆಂದಿಗೂ ಇಲ್ಲ. ಹಣವು ದೊರೆದಷ್ಟೂ ಮತ್ತೆಮತ್ತೆ ದ್ರವ್ಯಾಕಾಂಕ್ಷೆಯು ಹೆಚ್ಚಿ ಮರಳಿ ಬೇಡುತ್ತಿರುವಂತೆಯೇ ಮಾಡುವುದು. ಅದುಕಾರಣ ಒಂದು ವಸ್ತುವಿನ ಅಪೇಕ್ಷೆಯನ್ನು ಸ್ವಲ್ಪವೂ ಮಾಡದೆ ಇದ್ದವನಿಗೆ ಆ ನಿಷ್ಕಾಮತ್ವವು ಅವನಿಗೆ ಪರಿತೃಪ್ತಿಯನ್ನುಂಟುಮಾಡಿರುವುದು. ||೯೩||

ಬೇಡುವುದೇನು ಪಾಪಮೆ ಸದಾಶಿವ ನಿನ್ನನೆ ಬೇಡುತನ್ಯರಂ |
ಬೇಡದ ಸಿದ್ಧಿಯಂ ಪಡೆಯದಿರ್ಪುದರಿಂದಮೆ ಪಾಪ ಮಾದುದಾ ||
ಬೇಡುವ ಪಾಪಮಂ ಮರೆದು ಮಾಡದೆ ನಿಸ್ಪೃಹನಾಗಿ ನಿನ್ನ ನಾಂ |
ಬೇಡದಹಾಂಗೆ ಮಾಡು ಪರಮಪ್ರಭುವೇ ಮಹದೈಪುರೀಶ್ವರಾ ||೯೪||

ಟೀಕೆ—ಭೋಸದಾಶಿವ-ಎಲೈಪರಮಮಂಗಲಸ್ವರೂಪನೆ, ಬೇಡುವುದೇನು-ಬೇಡುವುದು ತಾನೇನು, ಪಾಪಮೆ-ದೋಷವೆ ? ಅಲ್ಲ. ನಿನ್ನನೆಬೇಡುತೆ-ನಿನ್ನನೊಬ್ಬನನ್ನೇ ಬೇಡುತ್ತ, ಅನ್ಯರಂ-ಬೇರೊಬ್ಬರನ್ನು, ಬೇಡದಸಿದ್ಧಿಯಂ-ಯಾಚಿಸದಸಿದ್ಧಿಯನು, ಪಡೆಯದಿರ್ಪುದರಿಂದಮೆ-ಹೊಂದದಿರುವುದರಿಂದಲೇ, ಆದುದು-ಉಂಟಾದುದು, ಆಬೇಡುವಪಾಪಮಂ-ಯಾಚಿಸುವ ಆದೋಷವನು, ಮರೆದುಮಾಡದೆ-ಮರೆದುಯಾಚಿಪುದಿಲ್ಲದೆ, ನಿಸ್ಪೃಹನಾಗಿ-ನಿರಾಸಕ್ತನಾಗಿ, ನಿನ್ನಂ-ನಿನ್ನನು, ಆಂ-ನಾನು, ಬೇಡದಹಾಂಗೆ ಮಾಡು-ಯಾಚಿಸದಂತೆಮಾಡು. ||೯೪||

ಟಿಪ್ಪಣಿ—ಎಲೈ ಪರಮಮಂಗಲಸ್ವರೂಪನಾದ ಶಿವನೆ, ಲೋಕದಲ್ಲಿ ಬೇಡುವಿಕೆಯೆಂಬುವುದೇ ಪಾಪವಲ್ಲ. ಮತ್ತೇನೆಂದರೆ—ಭಕ್ತವತ್ಸಲನೂ ಮುಕ್ತಿಪ್ರದನೂ ಆದ ನಿನ್ನೊಬ್ಬನನ್ನು ಮಾತ್ರ ಯಾಚಿಸುತ್ತ ಅನ್ಯರನ್ನು ಬೇಡದಿರುವಂತಹ ಸಿದ್ಧಿಯನ್ನು ಪಡೆದುಕೊಳ್ಳದಿದ್ದರೆ ಮಾತ್ರ ಅಂತಹಬೇಡುವಿಕೆಯು ಪಾಪವೆನಿಸಿಕೊಳ್ಳುವುದು. ಆದರೆ ಯಾಚ್ನೆಯೆಂಬುದೇ ಅತೃಪ್ತಿಗೆ ಸಾಧಕವಾಗುವುದರಿಂದ ಆ ಯಾಚ್ನೆಯನ್ನು ಮರೆದಾದರೂ ಮಾಡದೆ ನಿಸ್ಪೃಹನಾಗಿ ಇರುವಂತೆ ನನಗೆ ನೀನು ಅನುಗ್ರಹಿಸಬೇಕು. ||೯೪||

ಪುರುಷಕೃತಪ್ರಯತ್ನಮು ಮಯತ್ನಮುಂ ಮಿಂತೆರಡುಂ ಭವತ್ಕೃಪಾ |
ಪರಿಣತಮಾಗೆ ಸಿದ್ಧಿಸುಗು ಮಲ್ಲದೆ ತಾಂ ಕೃತಯತ್ನಮಾದೊಡಂ ||
ನಿರುಪಮಸಿದ್ಧಿದಂ ಕೃಪೆಯದಿಲ್ಲದೊಡಿಲ್ಲದರಿಂ ದಯತ್ನದಿಂ |
ದಿರುತಿಹ ಹಾಂಗೆ ಮಾಡು ಪರಮಪ್ರಭುವೇ ಮಹದೈಪುರೀಶ್ವರಾ ||೯೫||

ಟೀಕೆ—ಪುರುಷಕೃತಪ್ರಯತ್ನಮುಂ-ಪುರುಷನಿಂ ಮಾಡಲ್ಪಟ್ಟ ಯತ್ನವೂ, ಅಯತ್ನಮುಂ-ಯತ್ನವಮಾಡದಿಹಣವೂ,ಇಂತೆರಡುಂ-ಈಯತ್ನಾಯತ್ನಂಗಳೆರಡೂ, ಭವತ್ಕೃಪಾಪರಿಣತಮಾಗೆ-ನಿನ್ನ ಕೃಪಾಸ್ವರೂಪವಾಗಲಾಗಿ, ಸಿದ್ಧಿಸುಗುಮಲ್ಲದೆ-ಕೈಸೇರುವುದಲ್ಲದೆ, ತಾಂ-ತಾನು, ಕೃತಯತ್ನಮಾದೊಡಂ-ಮಾಡಲ್ಪಟ್ಟಪ್ರಯತ್ನವುಳ್ಳುದಾದರೂ, ನಿರುಪಮಸಿದ್ಧಿದಂ-ನಿರುಪಮ-ಪ್ರತಿಯಿಲ್ಲದ, ಸಿದ್ಧಿದಂ-ಮೋಕ್ಷವನ್ನು ಕೊಡುವಂತಹುದು, ಅದುಕೃಪೆ-ಆನಿನ್ನ ಕರುಣವು, ಇಲ್ಲದೊಡೆ-ಇಲ್ಲದಿದ್ದೊಡೆ, ಇಲ್ಲ-ಆಗುವುದಿಲ್ಲ, ಅದರಿಂದೆ-ಆಕಾರಣದಿಂದ, ಅಯತ್ನದಿಂದೆ, ಇರುತಿಹ ಹಾಂಗೆ ಮಾಡು-ಇರುತ್ತಿರುವಂತೆ ಎಸಗು. ||೯೫||

ಟಿಪ್ಪಣಿ—ಎಲೈ ಸ್ವಾಮಿಯೆ, ಪುರುಷನು ಪ್ರಯತ್ನವನ್ನು ಮಾಡಲಿ ಮಾಡದೇಯಿರಲಿ ಆ ಪ್ರಯತ್ನಾಪ್ರಯತ್ನಗಳೆರಡೂ ಫಲಿಸಬೇಕಾದರೆ ನಿನ್ನ ದಯೆಯಿಂದ ಅವು ಪರಿಪಕ್ವವಾಗಲೇಬೇಕು. ಎಣೆಯಿಲ್ಲದ ಮೋಕ್ಷಫಲವನ್ನು ಕೊಡತಕ್ಕ ಆ ನಿನ್ನ ಕಾರುಣ್ಯವಿಲ್ಲದಿದ್ದ ಬಳಿಕ ಎಷ್ಟು ಪ್ರಯತ್ನಪಟ್ಟರೂ ಅದು ಫಲಕಾರಿಯಾಗುವುದಿಲ್ಲ. ಅದುಕಾರಣ, ಬರಿಯ ಭ್ರಮೆಯಿಂದ ಪ್ರಯತ್ನಶೀಲನಾಗದಿರುವಂತೆ ನನಗೆ ನಿನ್ನ ದಯೆಯನ್ನು ಅನುಗ್ರಹಿಸು. ||೯೫||

ಪರುಸ ಮದಾಗು ತಾಗು ತಕಟಾ ಪೊಸಚಿನ್ನದ ಘಟ್ಟಿಯಾದವೋ |
ಲ್ನಿರುತ ನಿಜೈಕ್ಯಭಕ್ತಿ ಪೊರವೇಷದ ಭಾಷೆಯ ಡಂಭಭಕ್ತಿ ಯಾ ||
ಗುರುತರಭೋಗಸಿದ್ಧಿ ಕರಮಾದುದು ಶಾಂಭವಯೋಗಸಿದ್ಧಿ ಯಂ |
ತರಿಸಿದು ದೇವೆ ನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೯೬||

ಟೀಕೆ—ಪರುಸಮದು-ಸಿದ್ಧರಸತಾನು, ಆಗುತಾಗುತೆ-ಆಗುತ್ತೆ ಆಗುತ್ತೆ, ಪೊಸಚಿನ್ನದಘಟ್ಟಿಯಾದವೋಲ್-ನೂತನವಾದ ಸುವರ್ಣಘಟ್ಟಿಯಾದಹಾಂಗೆ, ನಿರುತನಿಜೈಕ್ಯಭಕ್ತಿ-ನಿಶ್ಚಯವಾದಸಮರಸಭಕ್ತಿಯು, ಪೊರವೇಷಭಾಷೆಯಡಂಭಭಕ್ತಿಯಾಗಿ-ಬಾಹ್ಯವೇಷಭಾಷೆಗಳ ಬೂಟಕವಾದಭಕ್ತಿಯಾಗಿ, ಉರುತರಭೋಗಸಿದ್ಧಿಕರಂ—ಉರುತರಭೋಗ—ಮಹಾಭೋಗಂಗಳ, ಸಿದ್ಧಿಕರಂ—ಸಿದ್ಧಿಯಂಮಾಳ್ಪದು, ಆದುದು-ಉಂಟಾದುದು, ಶಾಂಭವಯೋಗಸಿದ್ಧಿ-ಶಿವಸಂಬಂಧಿಯಾದ ಜ್ಞಾನಸಿದ್ಧಿಯು, ಅಂತರಿಸಿದುದು-ಒಳಸರಿದುದು, ಏವೆನಯ್ಯ-ಏನಮಾಡುವೆನಯ್ಯ ? ಅಕಟ-ಅಯ್ಯೋ ! ||೯೬||

ಟಿಪ್ಪಣಿ—ಸಿದ್ಧರಸವು ಲೋಹಸಂಬಂಧಗೊಂಡು ಕ್ರಮೇಣ ಹೊಸ ಚಿನ್ನದ ಗಟ್ಟಿಯಾಗುತ್ತ ಬಂದಂತೆ ನಿಷ್ಕಾಮವಾದ ಅಚ್ಚ ಸಮರಸಭಕ್ತಿಯು ಬರಬರುತ್ತ ಬಾಹ್ಯವೇಷಾಡಂಬರದ ಕಾಮ್ಯಭಕ್ತಿಯಾಗಿ ಪರಿಣಮಿಸಿ, ಭೋಗಭಾಗ್ಯಪ್ರದವಾಗುತಾ ಬಂದಿತು. ಈ ಕಾರಣದಿಂದ ಮುಕ್ತಿಪ್ರದವಾದ ಶಿವಜ್ಞಾನವು ಅಡಗಿಹೋಯಿತು. ಅಯ್ಯೋ ! ನಾನೇನು ಮಾಡಲಿ ! (ನಿಷ್ಕಾಮಭಕ್ತಿಯು ನಿವೃತ್ತಿಮಾರ್ಗವುಳ್ಳುದಾಗಿ ಮುಕ್ತಿಯನ್ನೀವುದು. ಸಕಾಮಭಕ್ತಿಯು ಪ್ರವೃತ್ತಿಮಾರ್ಗವುಳ್ಳುದಾಗಿ ಭೋಗಲಾಭವನ್ನುಂಟುಮಾಡುವುದೆಂದು ಭಾವ) । ||೯೬||

ಅವತಾರಿಕೆ—ಉಪಾಧಿ ನಿರುಪಾಧಿಕ ಭಕ್ತರ ಸ್ವರೂಪಮಂ ಪೇಳುತ್ತಿರ್ದಪಂ.—

ಅಳಿಸರಘುದ್ವಯಕ್ಕೆ ಸಮವೃತ್ತಿ ಮಧುವ್ರತಧರ್ಮ ಮಾದೊಡಂ |
ತಿಳಿವೊಡೆ ಬಂಧಮೋಕ್ಷ ಯುಗ ಮಾಗಿಹು ದಾಸಮವೃತ್ತಿ ತದ್ದ್ವಯ ||
ಕ್ಕಿಳೆಯೊಳಹಂಗೆ ಭಕ್ತಿಪಥವರ್ತನಸಾಮ್ಯ ಮಭಕ್ತಭಕ್ತಸಂ |
ಕುಳ ಮೆರಡಕ್ಕೆ ಬೇರೆ ಪರಮಪ್ರಭುವೇ ಮಹದೈಪುರೀಶ್ವರಾ ||೯೭||

ಟೀಕೆ—ಅಳಿಸರಘುದ್ವಯಕ್ಕೆ-ಅಳಿ—ತುಂಬಿಯು, ಸರಘು—ಜೇನುಹುಳುವಿನ, ದ್ವಯಕ್ಕೆ-ಈ ಎರಡಕ್ಕೆ, ಮಧುವ್ರತಧರ್ಮಂ-ಮಕರಂದಸ್ವೀಕಾರಮಾಡುವ ಧರ್ಮವು, ಸಮವೃತ್ತಿ-ಸರಿಯಾದವ್ಯಾಪಾರವು, ಆದೊಡಂ-ಆದರೂ, ತಿಳಿವೊಡೆ-ವಿಚಾರಿಸುವೊಡೆ, ಅಸಮವೃತ್ತಿ-ಅಸಮಾನವಾದ ಧರ್ಮವು, ತದ್ದ್ವಯಕ್ಕೆ-ಆ ಎರಡಕ್ಕೆ, ಇಳೆಯೊಳ್-ಭೂಮಿಯಲ್ಲಿ, ಬಂಧಮೋಕ್ಷಯುಗಮಾಗಿಹುದು-ಬಂಧಮೋಕ್ಷಸ್ವರೂಪಮಾಗಿಹುದು (ಜೇನಹುಳುವು ಬಂಧರೂಪವು ; ತುಂಬಿ ವಿಲಕ್ಷಣವಾಗಿರ್ಪುದೆಂಬು

ದರ್ಥಂ) ಅಹಂಗೆ-ಹಾಂಗೆ, ಅಭಕ್ತ ಭಕ್ತಸಂಕುಳಮೆರಡಕ್ಕೆ-ಉಪಾಧಿ ನಿರುಪಾಧಿ ಭಕ್ತಸಮೂಹವೆರಡಕ್ಕೆ, ಭಕ್ತಿಪಥವರ್ತನಸಾಮ್ಯಂ-ಭಕ್ತಿಪಥವರ್ತನೆಯ ಸಮಾನತ್ವವು, ಆದೊಡೇಂ-ಆದೊಡೇನು ? ಬೇರೆ-ಬಂಧಮೋಕ್ಷಂಗಳಿಂದೆ ಬೇರಾಗಿರ್ಪುದು.

ಟಿಪ್ಪಣಿ—ಮೇಲಿನ ಪದ್ಯದಲ್ಲಿ ಕಂಡಭಿಪ್ರಾಯವನ್ನು ಇಲ್ಲಿ ದೃಷ್ಟಾಂತಪೂರ್ವಕವಾಗಿ ನಿರೂಪಿಸುವನು :—ಪುಷ್ಪದಲ್ಲಿರುವ ಮಕರಂದವನ್ನು ಪಾನಮಾಡತಕ್ಕ ಧರ್ಮವು ತುಂಬಿಗೂ ಜೇನುಹುಳಕ್ಕೂ ಒಂದೇ ಸಮನಾಗಿರುವುದು. ಆದರೆ ಆ ಮಕರಂದವನ್ನು ಕೂಡಿಡಬೇಕೆಂಬಲೋಭಕ್ಕೆ ಎರವಾಗಿ ಜೇನಹುಳುವು ಬಂಧಕ್ಕೊಳಗಾಗಿರುವುದು. ಅಂತಹ ಲೋಭದಿಂದ ತಗುಲಿಕೊಳ್ಳದಿರುವ ತುಂಬಿಯು ಆ ಬಂಧವಿಲ್ಲದೆ ಸ್ವಚ್ಛಂದವಾಗಿರುವುದು. ಅವುಗಳಂತೆಯೇ ಭಕ್ತಿಮಾರ್ಗದಾಚರಣೆಯು ಒಂದೇ ತೆರನಾಗಿದ್ದರೂ ಭಕ್ತಿಯೆಂಬುದು ಸೋಪಾಧಿಕವಾದರೆ ಬಂಧಕಾರಿಯಾಗುವುದು ; ನಿರುಪಾಧಿಕವಾದರೆ ಮೋಕ್ಷಪ್ರದವಾಗುವುದು. ||೯೭||

ಅವತಾರಿಕೆ—ಆತ್ಮಸಮರ್ಪಣ ಕ್ರಿಯಾರಹಿತಮಾಗಿ ಬಾಹ್ಯಕ್ರಿಯೆಯಿಂದೆ ಫಲಪದಂಗಳ ಕಾಂಕ್ಷಿಪರಂ ಖಂಡಿತ್ತಿರ್ದಪಂ.—

ಜಲಕುಸುಮೋದನೋಪಕರಣಕ್ರಮಪೂಜೆಯ ನೊಲ್ದು ಮಾಡಿತ |
ತ್ಫಲಮ ನಮದ್ರ್ದ ಕಾಂಕ್ಷಿಪರು ಲೋಗರ ಮಕ್ಕಳ ನಿಕ್ಕಿನೋಳ್ಪವೋಲ್ ||
ನೆಲೆಯ ನಿದಾವ ಭಕ್ತಿಯೊಳ ಗಾಜಲಮುಖ್ಯಪದಾರ್ಥ ಮಾರ ದಾ |
ಫಲ ವವಕೈಸೆ ದೇವ ಪರಮಪ್ರಭುವೇ ಮಹದೈಪುರೀಶ್ವರಾ ||೯೮||

ಟೀಕೆ—ದೇವ-ಎಲೆ ಸ್ವಯಂಪ್ರಕಾಶರೂಪನೆ, ಲೋಗರಮಕ್ಕಳಂಇಕ್ಕಿ-ಹೆರರಮಕ್ಕಳಬಲಿಯನ್ನಿಕ್ಕಿ, ನೆಲೆಯಂ-ನಿಧಾನವನು, ನೋಳ್ಪವೋಲ್-ನೋಡುವ ಹಾಂಗೆ, ಜಲಕುಸುಮೋದನೋಪಕರಣಕ್ರಮಪೂಜೆಯಂ-ಜಲ-ನೀರು, ಕುಸುಮ-ಹೂವು, ಓದನ-ಅನ್ನವು, ಉಪಕರಣಕ್ರಮಪೂಜೆಯಂ-ಇವಾದಿಯಾದ ಉಪಕರಣಂಗಳಿಂದ ಕ್ರಮತಪ್ಪದಪೂಜೆಯನು, ಒಲ್ದುಮಾಡಿ-ಪ್ರೀತಿಯಿಂದೆಮಾಡಿ, ತತ್ಫಲಮಂ-ಆಫಲವನು, ಅಮದ್ರ್ದ-ಪೊರ್ದಿ, ಕಾಂಕ್ಷಿಪರು-ಬಯಸುವರು. ಆಜಲಮುಖ್ಯಪದಾರ್ಥಂ-ಆ ಉದಕಮೊದಲಾದ ಪದಾರ್ಥಂಗಳು, ಆರದು-ಆರೊಡವೆ ? ಆಫಲಂ-ಅವುಕೊಟ್ಟಫಲವು, ಅವಕೈಸೆ—ಅವಕಷ್ಟೆ ? ಇದಾವಭಕ್ತಿಯೊಳಗು—ಈಫಲಂಗಳ ಬಯಸುವುದಾವಭಕ್ತಿಯೊಳಗೆ ಸೇರಿದುದು ? ಸಲ್ಲದೆಂಬುದರ್ಥ. ||೯೮||

ಟಿಪ್ಪಣಿ—ಎಲೆ ಶಿವನೆ, ಹೆರರ ಮಕ್ಕಳನ್ನು ತಂದು ಬಲಿಗೊಟ್ಟು ನಿಕ್ಷೇಪವನ್ನು ತಾನು ಪಡೆದುಕೊಳ್ಳಬೇಕೆಂದು ಯತ್ನಿಸುವವನಂತೆ, ನೀರು ಹೂವು ಅನ್ನ ಮೊದಲಾದ ಸಾಮಗ್ರಿಗಳಿಂದ ದೈವಪೂಜೆಯನ್ನು ಮಾಡಿ, ತನ್ಮೂಲಕವಾಗಿ ಬಂದ ಫಲವನ್ನು ತಾವು ಪಡೆಯಬೇಕೆಂದು ಅಪೇಕ್ಷಿಸುತ್ತಿರುವರಲ್ಲ ! ಇದೇನಾಶ್ಚರ್ಯ ! ಆ ನೀರು ಮೊದಲಾದ ಪದಾರ್ಥಗಳು ತಾನೊ ? ಅವುಗಳು ತನ್ನೊಡವೆಯೆ ? ಅವುಗಳು ದೈವಕ್ಕೆ ಸಮರ್ಪಿತವಾದುದರಿಂದ ಲಭಿಸುವ ಫಲವು ಅವುಗಳಿಗೇ ಆಗುವುದಲ್ಲದೆ ಇವನಿಗೆಲ್ಲಿ ಲಭಿಸುವುದು ? (ಎಂದರೆ ತನ್ನ ಇಷ್ಟದೈವಕ್ಕೆ ತನ್ನನ್ನು ಮುಖ್ಯವಾಗಿ

ಅರ್ಪಿಸಿಕೊಡದೆ ಆತ್ಮವಂಚನೆಯನ್ನು ಮಾಡಿ, ಬಾಹ್ಯಾಡಂಬರದ ಪೂಜೆಯನ್ನೇ ಮಾಡುವುದರಲ್ಲಿ ಫಲವಿಲ್ಲವೆಂದುಭಾವ). ||೯೮||

ಓದನಮಂ ನಿವೇದಿಸಿದ ತತ್ಫಲ ಮೋಷಧಿಗಳ್ಗೆ ಪತ್ರಪು |
ಷ್ಪಾದಿಸಮರ್ಚನಾಫಲ ಮದ್ದೈದೆ ವನಸ್ಪತಿಗಳ್ಗೆ ನಿರ್ಮಲ ||
ಸ್ವಾದುಜಲಾಭಿಷೇಚಿತಮ ನಿತ್ತ ಫಲಂ ನದಿಗಳ್ಗೆ ಮಿಕ್ಕವ |
ರ್ಗಾದವು ದೆಂತದಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೯೯||

ಟೀಕೆ—ಓದನಮಂ-ಓದನರಸವನು, ನಿವೇದಿಸಿದ-ನೈವೇದ್ಯಮಾಡಿದ, ತತ್ಫಲಂ-ಆಫಲವು, ಓಪಧಿಗಳ್ಗೆ-ಧಾನ್ಯಂಗಳಿಗೆ, ಪತ್ರಪುಷ್ಪಾದಿಸಮರ್ಚನಾಫಲಂ-ಪತ್ರಪುಷ್ಪಾದಿ-ಪತ್ರಪುಷ್ಪಂಗಳು ಮೊದಲಾದುವುಗಳ, ಸಮರ್ಚನಾಫಲಂ-ಒಳ್ಳಿತ್ತಾದ ಪೂಜೆಯಫಲವು, ಅದು-ಅದುತಾನು, ಐದೆ-ಚೆನ್ನಾಗಿ, ವನಸ್ಪತಿಗಳ್ಗೆ-ವೃಕ್ಷಂಗಳಿಗೆ, ನಿರ್ಮಲಸ್ವಾದುಜಲಾಭಿಷೇಚಿತಮಂ-ನಿರ್ಮಲ-ಸ್ವಚ್ಛವಾದ, ಸ್ವಾದುಜಲ-ಸ್ವಾದೂದಕದಿಂದೆ, ಅಭಿಷೇಚಿತಮಂ-ಅಭಿಷೇಕವನು, ಇತ್ತಫಲಂ-ಕೊಟ್ಟಫಲವು, ನದಿಗಳ್ಗೆ-ತೊರೆಗಳ್ಗೆ, ಮಿಕ್ಕವರ್ಗೆ-ಫಲವಬೇಡುವರ್ಗೆ, ಆದಪುದೆಂತದಯ್ಯ-ಆಫಲವಾಗುವುದೆಂತಯ್ಯ ? ಫಲವಿಲ್ಲವೆಂಬುದರ್ಥಂ. ||೯೯||

ಟಿಪ್ಪಣಿ—ಎಲೈ ಸ್ವಾಮಿಯೆ, ತನ್ನ ದೈವಕ್ಕೆ ಅನ್ನವನ್ನು ನಿವೇದನಮಾಡುವುದರಿಂದ ಉಂಟಾಗುವ ಫಲವು ಆ ಧಾನ್ಯಗಳಿಗೆ ಲಭಿಸುವುದು. ಹೂವುಪತ್ರೆಗಳನ್ನು ಧರಿಸುವುದರಿಂದ ಹುಟ್ಟುವ ಫಲವು ಆಪತ್ರಪುಷ್ಪಗಳನ್ನು ಬಿಟ್ಟಿದ್ದ ಗಿಡುಬಳ್ಳಿಗಳಿಗೆ ಸೇರುವುದು. ನಿರ್ಮಲವಾದ ಜಲವನ್ನು ಅಭಿಷೇಕಿಸುವುದರಿಂದ ಹುಟ್ಟುವ ಫಲವು ಆನೀರನ್ನು ಕೊಟ್ಟನದಿಗಳಿಗೆ ಪ್ರಾಪ್ತವಾಗುವುದು. ಹೀಗಿರುವಾಗ, ಅಂತಹ ಅನ್ಯ ವಸ್ತುಗಳನ್ನು ಸಮರ್ಪಿಸಿ, ತನುಗೆ ಅವುಗಳ ಫಲವಾಗಬೇಕೆಂದು ಅಪೇಕ್ಷಿಸುವವನಿಗೆ ಅದು ದೊರೆಯುವುದು ಹೇಗೆ ? ತನ್ನನ್ನು ತಾನು ಅರ್ಪಿಸುವುದರಿಂದಲೇ ತನಗೆ ಲಾಭವಾಗುವುದೆಂದರ್ಥ. ||೯೯||

ಕ್ಷಿತಿ ಜಲ ವಹ್ನಿವಾಯು ನಭಮೆಂಬಿವು ನಿನ್ನವು ನಿನ್ನ ಪೂಜೆಗೀ |
ಕ್ಷಿತಿಮುಖಪಂಚಭೂತಕೃತ ಮಪ್ಪ ಪದಾರ್ಥಮ ನಿತ್ತು ತಮ್ಮವೆಂ ||
ಬತಿಮುಮಕಾರದಿಂ ಫಲಮ ನೀಹಿಪ ರಾತ್ಮಸಮರ್ಪಣಕ್ರಿಯಾ |
ಮತಿರತಿಹೀನರಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೧೦೦||

ಟೀಕೆ—ಭೋಪರಮಪ್ರಭುವೇ-ಎಲೆ ಜಗದ್ವಲ್ಲಭನೇ, ಕ್ಷಿತಿಜಲವಹ್ನಿವಾಯುನಭಮೆಂಬಿವು-ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶಂಗಳೆಂಬಿವು, ನಿನ್ನವು-ನಿನ್ನೊಡವೆ, ನಿನ್ನಪೂಜೆಗೆ-ನಿನ್ನರ್ಚನೆಗೆ, ಆತ್ಮಸಮರ್ಪಣಕ್ರಿಯಾಮತಿರತಿಹೀನರ್-ಆತ್ಮಸಮರ್ಪಣ-ಆತ್ಮಸಮರ್ಪಣವಂ, ಕ್ರಿಯಾ-ಮಾಡುವಲ್ಲಿ, ಮತಿರತಿಹೀನರ್-ಬುದ್ಧಿಯಲ್ಲಿ ಪ್ರೀತಿಯಿಲ್ಲದವರುಗಳು, ಈಕ್ಷಿತಿಮುಖಪಂಚಭೂತಕೃತಮಪ್ಪ-ಈಕ್ಷಿತಿ

ಮುಖ-ಈಭೂಮಿ ಮೊದಲಾದ, ಪಂಚಭೂತಕೃತಮಪ್ಪ-ಪಂಚಭೂತಂಗಳಿಂದ ಮಾಡಲ್ಪಟ್ಟ, ಪದಾರ್ಥಮಂ-ವಸ್ತುಗಳನು, ತಮ್ಮದೆಂಬ-ತಮ್ಮದು ಎಂಬ, ಅತಿ ಮಮಕಾರದಿಂ-ಅತ್ಯಂತಮಮಕಾರದಿಂದೆ, ಇತ್ತು-ಕೊಟ್ಟು, ಫಲಮಂ-ಅವರ ಫಲ ವನ್ನು, ಈಹಿಪರಯ್ಯ-ಇಚ್ಛೈಸುವರು. ||೧೦೦||

ಟಿಪ್ಪಣಿ—ಎಲೈ ಸ್ವಾಮಿಯೆ, ಈ ಪೃಥಿವ್ಯಾದಿಪಂಚಭೂತಗಳು ನಿನ್ನ ವಸ್ತುಗಳು. ನಿನಗೆ ಮೊದಲು ಆತ್ಮಾರ್ಪಣೆಯನ್ನು ಮಾಡಿ ಪೂಜಿಸುವ ಬುದ್ಧಿಯಿಲ್ಲದಿರುವ ಜನರುಗಳು ಈ ಪೃಥಿವ್ಯಾದಿ ಭೂತಸಂಭೂತಗಳಾದ ಜಲಪತ್ರಪುಷ್ಪಾದಿಗಳನ್ನು ತಮ್ಮದೆಂದು ಭಾವಿಸಿ, ಅವನ್ನು ನಿನಗೆ ಸಮರ್ಪಿಸಿ, ತನ್ಮೂಲಕವಾದ ಫಲವನ್ನು ತಾವು ಪಡೆದುಕೊಳ್ಳಬೇಕೆಂದು ಇಚ್ಛೈಸುತ್ತಿರುವರಲ್ಲಾ । ||೧೦೦||

ಅವತಾರಿಕೆ—ಪೂಜಾಸಾಧನದ್ರವ್ಯಗಳಂ ಪರರಿಂ ತರಿಸಿ ಲಿಂಗಪೂಜೆಯಂ ಮಾಡಬಾರ ದೆಂದು ಪೇಳುತ್ತಿರ್ದಪಂ.—

ತಾನೆ ಜಲಪ್ರಸೂನಮುಖಸರ್ವಪದಾರ್ಥಮ ನನ್ಯರಂ ಪೊಗ |
ಳ್ದೇನುಮ ನಾಸೆಗೆಯ್ಯದೆ ನಿಜೇಶ್ವರಪೂಜೆಗೆ ಕೊಂಡುಬಂದು ನಿ ||
ತ್ಯಾನತ ಮರ್ಚಿಪಾತ ನವನೇ ಸುಖಿ ಮಿಕ್ಕವ ನೆಯ್ದೆ ದುಃಖಿಯೆಂ |
ಬಾನುಡಿ ಯೊಳ್ಳಿತಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೧೦೧||

ಟೀಕೆ—ನಿಜೇಶ್ವರ ಪೂಜೆಗೆ-ತನ್ನಲಿಂಗಪೂಜೆಗೆ, ಅನ್ಯರಂಪೊಗಳ್ದು-ಬೇರೊ ಬ್ಬರಸ್ತುತಿಸಿ, ಏನುಮನಾಸೆಗೆಯ್ಯದೆ-ಏನನ್ನೂ ಬಯಸದೆ, ಜಲಪ್ರಸೂನಮುಖ ಸರ್ವಪದಾರ್ಥಮಂ-ಉದಕಪುಷ್ಪ ಮುಂತಾದ ಸಕಲಪದಾರ್ಥವನ್ನು, ತಾನೆ-ತಾನೆಯೇ, ಕೊಂಡುಬಂದು-ತೆಗೆದುಕೊಂಡುಬಂದು, ನಿತ್ಯಾನತಂ-ನಿತ್ಯ-ಅವಾಗಲೂ ಆನತಂ-ನಮ್ರನಾಗಿ, ಅರ್ಚಿಪಾತಂ-ಪೂಜಿಸುವಾತನು, ಅವನೇ-ಆತನೇ, ಸುಖಿ-ಪರಿಣಾಮಿಯು, ಮಿಕ್ಕವಂ-ಉಳಿದಾತನು, ಎಯ್ದೆ-ಚೆನ್ನಾಗಿ, ದುಃಖಿಯೆಂಬ-ದುಃಖಿಯುತಾನೆಂಬ, ಆನುಡಿ-ಆವಾಕ್ಯವು, ಒಳ್ಳಿತಯ್ಯ-ಲೇಸುಕಣಯ್ಯ. ||೧೦೧||

ಟಿಪ್ಪಣಿ – ಹಾಗಾದರೆ ಲಿಂಗಪೂಜೆಯನ್ನು ಜಲಪುಷ್ಪಾದಿಗಳಿಂದ ಮಾಡಬಾರದೆ ? ಎಂದರೆ, ಹೇಗೆ ಮಾಡಬೇಕೆಂಬುದನ್ನು ಈ ಪದ್ಯದಲ್ಲಿ ಹೇಳುವನು—ಲಿಂಗಪೂಜೆಮಾಡತಕ್ಕವನು ಯಾವು ದೊಂದು ಫಲಾಪೇಕ್ಷೆಯನ್ನೂ ಮಾಡದೆ ನಿರ್ಮಲವಾದ ಭಕ್ತಿಯುಳ್ಳವನಾಗಿ, ಬೇರೊಬ್ಬರನ್ನು ಬೇಡಿ ಜಲಪತ್ರಪುಷ್ಪಾದಿಗಳನ್ನು ತರಿಸಿಕೊಳ್ಳದೆ, ಪೂಜೋಪಕರಣಗಳನ್ನೆಲ್ಲಾ ತಾನೇ ತಂದು ಪೂಜಿಸಬೇಕು. ಹಾಗೆ ಪೂಜಿಸತಕ್ಕವನೇ ನಿತ್ಯಸುಖಿಯಾಗುವನು. ಹಾಗಲ್ಲದೆ ಸೋಪಾಧಿಕಭಕ್ತಿಯಿಂದ ಪರರನ್ನು ಬೇಡಿ, ಕಾಡಿ, ಅನ್ಯರ ಹಸ್ತದಿಂದ ಬಂದ ಪದಾರ್ಥಗಳನ್ನು ಸಮರ್ಪಿಸುವವನು ದುಃಖಿಯಾಗು ವನು ಎಂಬ ಈ ಶಿವಾಗಮವಾಕ್ಯವು ಪ್ರಶಸ್ತವಾದುದು. ||೧೦೧||

ಆನುಡಿ ಯೊಳ್ಳಿತಾದವೊ ಲದೇಂ ನಡೆ ಯೊಳ್ಳಿತು ಮಾಗ ದನ್ಯರ |
ಲ್ಲಾ ನಿಜದೇಹಮುಖ್ಯಕರಣಂಗಳು ತನ್ನವರೇ ವೃಥಾಭಿಮಾ ||

ನಾನು ಗತತ್ವದಿಂ ದವರ ಕೈಯೊಳೆ ತಾಂ ತರಿಸಲ್ಕೆ ಯೋಗ್ಯಮೇ |
ನೀನೆ ವಿಚಾರಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೧೦೨||

ಟೀಕೆ—ಭೋಪರಮಪ್ರಭುವೇ-ಎಲೆಜಗದ್ವಲ್ಲಭನೆ, ಆನುಡಿ-ಪರರಕೈಯಲ್ಲಿ ತರಿಸಿ ಪೂಜಿಸಬಾರದೆಂಬ ನುಡಿಯು, ಒಳ್ಳಿತಾದವೊಲ್-ಲೇಸಾದಹಾಂಗೆ, ಅದು ನಡೆಯುಂ-ಅವರ್ತನವೂ, ಒಳ್ಳಿತು ಆಗದು-ಲೇಸಾಗದು ಅದೇಂ-ಅದೇನು ? ನಿಜ ದೇಹಮುಖ್ಯಕರಣಂಗಳು-ತನ್ನ ದೇಹದಲ್ಲಿ ಮುಖ್ಯವಾದ ಬುದ್ಧ್ಯಾದಿಕರಣಂಗಳು, ತನ್ನವರೇ-ತನ್ನ ಸಂಬಂಧದವರೇ ? ಅನ್ಯರಲ್ಲಾ-ಪರರಲಾ ? ವೃಥಾಭಿಮಾನಾನು ಗತತ್ವದಿಂದೆ-ವ್ಯರ್ಥವಾದ ಅಭಿಮಾನದ ಸಂಗದಲ್ಲಿ ತಿರುಗುವುದರಿಂದೆ, ಅವರ ಕೈಯೊಳ್—ಆಕರಣಂಗಳ ಕೈಯಲ್ಲಿ, ತಾಂ—ತಾನು, ತರಿಸಲ್ಕೆ—ತರಿಸುವುದಕ್ಕೆ, ಯೊಗ್ಯಮೇ—ಉಚಿತವೆ ? ಅಲ್ಲ. ನೀನೆ ವಿಚಾರಿಸಯ್ಯ—ನೀನೇಪರಾಮರಿಕೆಯ ಮಾಡಯ್ಯ. ||೧೦೨||

ಟಿಪ್ಪಣಿ—ಎಲೆ ಪರಶಿವನೆ, ಪರರಕೈಯಲ್ಲಿ ತರಿಸಿ ಪೂಜಿಸಬಾರದೆಂಬ ಮೇಲೆ ಹೇಳಿದ ನುಡಿಯು ಪ್ರಶಸ್ತವಾಗಿರುವಂತೆಯೇ ನಡೆಯು ಕೂಡ ಪ್ರಶಸ್ತವಾಗಿರಬಾರದೆ ? ಅದು ಕೂಡ ಪ್ರಶಸ್ತವಾಗಿಯೇ ಇರಬೇಕು. ಹೇಗೆಂದರೆ—ತನ್ನ ದೇಹಕರಣಾದಿಗಳು ತಾನಾಗುವುವೇನು ? ಅವು ಕೂಡ ತನಗೆ ಭಿನ್ನವಾದುವಲ್ಲವೆ ? ಅಂಥಕರಣಾದಿಗಳನ್ನು ತನ್ನವೆಂಬ ಅಭಿಮಾನಗೊಂಡು ಅವುಗಳ ಕೈಯಲ್ಲಿ ಜಲಪತ್ರಪುಷ್ಪಾದಿಗಳನ್ನು ತಾನು ತರಿಸುವುದು ಕೂಡ ಯೋಗ್ಯವಾದುದೇ ? ನೀನೇ ವಿಚಾರಮಾಡಿ ನೋಡು ||೧೦೨||

ತನ್ನವ ರೆಂದೊಡೇಂ ಕೆಲಬ ರುಂಟೆ ವಿಚಾರಿಸೆ ಲೋಗ ರೆಂದುತಾ |
ನನ್ಯರ ನೋಳ್ಪರುಂಟೆ ಸಕಲ ರ್ಪರರಲ್ಲ ವಿಭೇದಬುದ್ಧಿಯಿಂ ||
ತನ್ನವರೆಂಬು ದೊಂದುಮಮಕಾರಮೆ ತನ್ನದು ಮಿಕ್ಕ ರೆಲ್ಲರುಂ |
ಮುನ್ನಮೆ ಲೋಗರಯ್ಯ ಪರಮಪ್ರಭುವೇ ಮಹದೈಪುರೀಶ್ವರಾ || ||೧೦೩||

ಟೀಕೆ—ವಿಭೇದಬುದ್ಧಿಯಿಂ-ಭೇದವಿಲ್ಲದ ಬುದ್ಧಿಯಿಂದೆ, ವಿಚಾರಿಸೆ-ವಿಚಾರಿಸಲಾಗಿ, ತನ್ನವರೆಂದೊಡೇಂ-ತನ್ನವರೆಂದೊಡೇನು ? ಕೆಲಬರುಂಟೆ-ಕೆಲಬರೊಳರೆ ? ಲೋಗರೆಂದು-ಅನ್ಯರೆಂದು, ತಾಂ-ತಾನು, ಅನ್ಯರ-ಪರರನ್ನು, ನೋಳ್ಪರುಂಟೆ-ನೋಡುವರುಂಟೆ? ಇಲ್ಲ, ಸಕಲರ್-ಎಲ್ಲರೂ, ಪರರಲ್ಲ-ಅನ್ಯರಲ್ಲ ವಿಭೇದಬುದ್ಧಿಯಿಂ-ಭೇದವಂಮಾಳ್ಪಬುದ್ಧಿಯಿಂದೆ, (ಇಲ್ಲಿ ಪದಭಂಗಶ್ಲೇಷೆ) ತನ್ನವರೆಂಬುದೊಂದು ಮಮಕಾರಮೆ-ತನ್ನವರೆಂಬಮಮಕಾರವೊಂದೇ, ತನ್ನದು-ತನ್ನಸಂಬಂಧವು ಮಿಕ್ಕರೆಲ್ಲರುಂ-ಉಳಿದವರೆಲ್ಲರೂ, ಮುನ್ನಮೆ-ಮೊದಲೇ, ಲೋಗರಯ್ಯ-ಅನ್ಯರಯ್ಯ.

ಟಿಪ್ಪಣಿ—ಸಕಲ ಪೂಜೋಪಕರಣಾದಿಗಳೂ, ಅವನ್ನು ತಂದು ಕೊಡುವವರೂ ಶಿವಾಂಶ ಸಂಭೂತಗಳಾದ ಕಾರಣ, ಶಿವಸ್ವರೂಪರೇ ಆಗಿರುವರೆಂಬ ಭಾವದಿಂದ ಹೆರರ ಕೈಯಲ್ಲಾದರೂ

ಪತ್ರಪುಷ್ಪಾದಿಗಳನ್ನು ತರಿಸಿ ಪೂಜಿಸಬಹುದೆಂಬುದನ್ನು ಇನ್ನು ನಿರೂಪಿಸುವನು. ಎಲೆ ಶಿವನೆ, ವಿಚಾರಮಾಡಿನೋಡಿದರೆ ತನಗೆ ಕೆಲವರು ಮಾತ್ರ ಸ್ವಕೀಯರಾಗಿಯೂ ಉಳಿದವರೆಲ್ಲಾ ಹೆರರಾಗಿಯೂ ಇರುವುದುಂಟೆ ? ತಾನು ಮಿಕ್ಕವರೆನ್ನೆಲ್ಲಾ ಹೆರರೆಂದು ತಿಳಿಯುವುದಕ್ಕಾದೀತ ? ಎಲ್ಲರೂ ಶಿವಸಂಭೂತರಾದುದರಿಂದ ತನಗೆ ಎಲ್ಲರೂ ಒಂದೇ. ಅಂತಹ ಭಾವಗೊಂಡಿರುವುದನ್ನು ಬಿಟ್ಟು ಭೇದಬುದ್ಧಿಯಿಂ ಕೂಡಿರುವವರಿಗೆ ನನ್ನವರೆಂಬ ಮಮಕಾರಗೊಂಡಿರುವುದೊಂದು ಮಾತ್ರ ಅವರದಾಗಿ, ಉಳಿದಿರುವುದೆಲ್ಲವೂ ಅನ್ಯವಾಗಿಯೇ ಇರುವುದು. ||೧೦೩||

ತನ್ನವ ರನ್ಯ ರೆಂಬುಭಯಭಾವ ಮದಿಲ್ಲದೆ ನೋಳ್ಪೊಡೆಲ್ಲರುಂ |
ನಿನ್ನವ ರೆಂದವರ್ಗ್ಗಳೊಲಿ ದಿತ್ತ ಜಲಪ್ರಸವಾದಿವಸ್ತುವಿಂ ||
ನಿನ್ನನೆ ಪೂಜಿಪಾತ ನವನೇ ಸುಖಿ ಮಿಕ್ಕವ ನೆಯ್ದೆ ದುಃಖಿ ಮ |
ತ್ತಿನ್ನು ವಿಚಾರ ಮೇನು ಪರಮಪ್ರಭುವೇ ಮಹದೈಪುರೀಶ್ವರಾ ||೧೦೪||

ಟೀಕೆ—ಭೋಪರಮಪ್ರಭುವೇ-ಎಲೈ ಜಗದ್ವಲ್ಲಭನೇ, ನೋಳ್ಪೊಡೆ-ವಿಚಾರಿಸುವೊಡೆ, ತನ್ನವರ್ ಅನ್ಯರ್ ಎಂಬ-ತನ್ನವರು ಪರರು ಎಂಬ, ಉಭಯಭಾವಂ-ಭಿನ್ನಭಾವವು, ಅದಿಲ್ಲದೆ-ಅದುತಾನಿಲ್ಲದೆ, ಎಲ್ಲರಂ-ಸರ್ವರೂ, ನಿನ್ನವರೆಂದು-ನಿನ್ನಸಂಬಂಧವರೆಂದು, ಅವರ್ಗಳ್-ಅವರು, ಒಲಿದಿತ್ತ-ಪ್ರೀತಿಯಿಂದಕೊಟ್ಟ, ಜಲಪ್ರಸವಾದಿವಸ್ತುವಿಂ-ಉದಕಪುಷ್ಪ ಮೊದಲಾದ ದ್ರವ್ಯಂಗಳಿಂ, ನಿನ್ನನೆ-ನಿನ್ನನೊಬ್ಬನನ್ನೇ, ಪೂಜಿಪಾತಂ—ಪೂಜಿಸುವಾತನು, ಅವನೇ—ಆತನೇ, ಸುಖಿ—ಪರಿಣಾಮಿಯು, ಮಿಕ್ಕವಂ-ಉಳಿದಾತನು, ಎಯ್ದೆ-ಚೆನ್ನಾಗಿ, ದುಃಖಿ-ದುಃಖವುಳ್ಳಾತನು. ಮತ್ತೆ-ಮರಳಿ, ಇನ್ನು ವಿಚಾರಿಸಲೇನು-ಇನ್ನು ವಿವೇಕವಾವುದು ? ||೧೦೪||

ಟಿಪ್ಪಣಿ—ಎಲೆ ಜಗದೀಶನೆ, ವಿಚಾರಮಾಡಿ ನೋಡಿದರೆ ಇವರು ತನ್ನವರು ಇವರು ಹೆರರು ಎಂಬ ಎರಡುತೆರದ ಭಾವವೂ ತನ್ನಲ್ಲಿಲ್ಲದೆ ಎಲ್ಲರೂ ಶಿವಾಂಶೋದ್ಭೂತರು ಎಂದು ತಿಳಿದು, ಅವರುಗಳು ಪ್ರೀತಿಯಿಂದ ತಂದುಕೊಟ್ಟ ಪತ್ರಪುಷ್ಪಜಲಾದಿಗಳಿಂದ ನಿನ್ನೊಬ್ಬನನ್ನೇ ಭಕ್ತಿಯಿಂದ ಆರಾಧಿಸತಕ್ಕವನೇ ಪರಮಸುಖಿಯು; ಉಳಿದವರೆಲ್ಲರೂ ದುಃಖಿಗಳು. ಇನ್ನಿದರಮೇಲೆ ವಿಚಾರವೇತಕೆ ?

ಯಾಚಿಸಿ ಮಾಡಲಾಗದು ಶಿವಾರ್ಚನೆಯಂ ಜಲಪುಷ್ಪಮುಖ್ಯಕಾ |
ಲೋಚಿತವಸ್ತುವಂ ಪರರ ವೆಂದಕಟಾ ಪುಸಿಮಾತನಾಡಿ ತಾ ||
ವೇಚಪಲತ್ವದಿಂ ಮಡುವಿ ನಗ್ಗಣಿಯಂ ಗಿಡುವಿಂ ಪ್ರಸೂನಮಂ |
ಯಾಚಿಸಿ ತರ್ಪ ರೇಕೆ ಪರಮಪ್ರಭುವೇ ಮಹದೈಪುರೀಶ್ವರಾ ||೧೦೫||

ಟೀಕೆ—ಜಲಪುಷ್ಪಮುಖ್ಯಕಾಲೋಚಿತವಸ್ತುವಂ-ಜಲಪುಷ್ಪಮುಖ್ಯ-ಉದಕ ಪುಷ್ಪಮೊದಲಾದ, ಕಾಲೋಚಿತವಸ್ತುವಂ—ಕಾಲೋಚಿತದ್ರವ್ಯವನು, ಪರರವೆಂದು—ಅನ್ಯರವೆಂದು, ಅಕಟಾ—ಅಯ್ಯೋ, ಪುಸಿಮಾತನಾಡಿ—ಸಟೆಯಮಾತನುಡಿದು, ತಾವೇ-ತಮ್ಮ ತಾವೇ, ಚಪಲತ್ವದಿಂ-ಚಪಲತನದಿಂದ, ಮಡುವಿಂ-ಹಳ್ಳದಿಂದೆ,

ಅಗ್ಗಣಿಯಂ-ಉದಕವನ್ನು, ಗಿಡುವಿಂ—ಗಿಡುವಿನಿಂದೆ, ಪ್ರಸೂನಮಂ—ಪುಷ್ಪವನು, ಯಾಚಸಿತರ್ಪರೇಕೆ—ಏತಕ್ಕೆಬೇಡಿಕೊಂಡುತರ್ಪರು ? ಶಿವಾರ್ಚನೆಯಂ—ಲಿಂಗಪೂಜೆಯನು, ಯಾಚಿಸಿಮಾಡಲಾಗದು-ಬೇಡಿತಂದುಮಾಡಬಾರದು ||೧೦೫||

ಟಿಪ್ಪಣಿ—ಎಲೈ ಸ್ವಾಮಿಯೆ, ನೀರು ಹೂವು ಮೊದಲಾದ ಶಿವಪೂಜೋಪಕರಣ ವಸ್ತುಗಳನ್ನು ಪರರವೆಂದು ತಾವೇ ಸುಳ್ಳಾಗಿ ಕಲ್ಪಿಸಿ ನುಡಿದು, ಸವಿಮಾತುಗಳಿಂದ ಬೇಡಿ ಆ ನದಿಯ ನೀರನ್ನೂ ಗಿಡುವಿನ ಹೂವುಗಳನ್ನು ತರಿಸಿಕೊಳ್ಳುವುದೇಕೆ ? ಯಾವಾಗಲೂ ಪರರನ್ನುಕಾಡಿ ಬೇಡಿ ಪದಾರ್ಥಗಳನ್ನು ತಂದು ಶಿವಾರ್ಚನೆಯನ್ನು ಮಾಡಬಾರದು. ||೧೦೫||

ತಾನೆ ನಿಜೇಷ್ಟಲಿಂಗಯುಜನೋಚಿತವಸ್ತುವ ನೊಲ್ದು ಕೊಂಡುಬಂ |
ದೇನುಮ ನನ್ಯರಪ್ಪವರು ತಂದುದ ನೊಲ್ಲದೆ ಪೂಜೆಗೆಯ್ವವಂ ||
ಮಾನವ ನಲ್ಲವಂ ಶರಣ ನನ್ಯರು ತಂದುದ ನೀಸಿಕೊಂಬವಂ |
ಮಾನವ ನೈಸೆ ದೇವ ಪರಮಪ್ರಭುವೇ ಮಹದೈಪುರೀಶ್ವರಾ ||೧೦೬||

ಟೀಕೆ—ದೇವ—ಎಲೈ ಸ್ವಯಂಪ್ರಕಾಶನೆ, ನಿಜೇಷ್ಟಲಿಂಗಯುಜನೋಚಿತವಸ್ತುವಂ-ತನ್ನ ಇಷ್ಟಲಿಂಗಪೂಜೆಗೆ ಯೋಗ್ಯವಾದವಸ್ತುವನು, ತಾನೆ-ತನ್ನಿಂದ ತಾನೇ, ಒಲ್ದು-ಪ್ರೀತಿಯಿಂದೆ, ಕೊಂಡುಬಂದು-ತೆಗೆದುಕೊಂಡುಬಂದು, -ಅನ್ಯರಪ್ಪವರು-ಪರರಾದವರು, ತಂದುದಂ-ತಂದಂಥ, ಏನುಮಂ-ಏನನ್ನೂ, ಒಲ್ಲದೆ-ಬಿಟ್ಟು, ಪೂಜೆಗೆಯ್ವವಂ-ಪೂಜೆಯುಮಾಡುವಾತನು, ಮಾನವನಲ್ಲ-ಮನುಷ್ಯನಲ್ಲ._ ಅವಂ-ಅವನು, ಶರಣಂ-ಶಿವಶರಣನು, ಅನ್ಯರುತಂದುದಂ-ಪರರುತಂದುದನು, ಈಸಿಕೊಂಬವಂ-ತೆಗೆದುಕೊಂಬಾತನು, ಮಾನವನೈಸೆ-ಮನುಷ್ಯನಷ್ಟೆ ? ಅಹುದು. ||೧೦೬||

ಟಿಪ್ಪಣಿ—ಎಲೈ ಪ್ರಭುವೇ, ತನ್ನ ಇಷ್ಟಲಿಂಗಪೂಜೆಗೆ ಅನ್ಯರು ಕೊಟ್ಟ ಯಾವುದೊಂದು ವಸ್ತುವನ್ನೂ ತೆಗೆದುಕೊಳ್ಳದೆ, ಬೇಕಾದ ಉಪಕರಣಗಳನ್ನು ತಾನೇ ಪ್ರೀತಿಯಿಂದ ತೆಗೆದುಕೊಂಡು ಬಂದು, ಪೂಜೆಯನ್ನು ಮಾಡತಕ್ಕವನು ಮನುಷ್ಯಮಾತ್ರನಲ್ಲ. ಅವನು ಶರಣನೇ ಸರಿ. ಅನ್ಯರು ತಂದ ವಸ್ತುವನ್ನು ಈಸಿಕೊಂಡು ಪೂಜಿಸತಕ್ಕವನು ಮನುಷ್ಯನೆನಿಸಿಕೊಳ್ಳುವನು. ||೧೦೬||

ಕರಚರಣಾದಿಗ ಳ್ಪರಿಕಿಸಲ್ ತನ ಗನ್ಯ ರವರ್ಗೆ ಮತ್ತದೇಂ |
ಹೊರೆವನೆ ಬಾಳ್ದು ತನ್ನ ಶಿವಪೂಜೆಗೆ ತಾಂ ತರಲೊಲ್ಲ ದನ್ಯರಿಂ ||
ತರಿಸಿ ಜಲಪ್ರಸೂನಫಲವಸ್ತುಗಳಿಂ ಶಿವಪೂಜೆಗೆಯ್ವನೇ |
ಶರಣ ನಿದಾವಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ||೧೦೭||

ಟೀಕೆ—ಪರಿಕಿಸಲ್—ವಿಚಾರಿಸಲಾಗಿ, ಕರಚರಣಾದಿಗಳ್—ಹಸ್ತಪಾದ ಮೊದಲಾದುವು, ತನಗೆ ಅನ್ಯರೆ-ತನಗೆ ಬೇರೆಯೆ ? ಅವರ್ಗೆ-ಆ ಹಸ್ತಪಾದಂಗಳಿಗೆ, ಮತ್ತೆ-ಮರಳಿ, ಬಾಳ್ದು-ಬದುಕಿ, ಅದೇಂಹೊರೆವನೆ-ಅದೇನು ರಕ್ಷಿಸುವನೆ ? ಶರ

ಣಂ-ಶಿವಶರಣನು, ತನ್ನ ಶಿವಪೂಜೆಗೆ-ತನ್ನ ಲಿಂಗಪೂಜೆಗೆ, ತಾಂತರಲೊಲ್ಲದೆ-ತಾನು ತರಲೊಲ್ಲದೆ, ಅನ್ಯರಿಂತರಿಸಿ-ಪರರಿಂದೆತರಿಸಿ, ಜಲಪ್ರಸೂನಫಲವಸ್ತುಗಳಿಂ-ಉದಕ ಪುಷ್ಪಫಲಂಗಳು ಮೊದಲಾದ ದ್ರವ್ಯಂಗಳಿಂದೆ, ಶಿವಪೂಜೆಯಂ ಮಾಡುವನೇ ? ಮಾಡನು. ಇದಾವ ಭಕ್ತಿ-ಇದೇತರಭಕ್ತಿಯಪ ? ||೧೦೭||

ಟಿಪ್ಪಣಿ—ವಿಚಾರಮಾಡಿ ನೋಡಿದರೆ ಹಸ್ತ ಪಾದ ಮೊದಲಾದವುಗಳು ತನಗೆ ಬೇಕಾದುವುಗಳೆ ? ಅವುಗಳನ್ನು ಕಾಪಾಡುವುದಕ್ಕಾಗಿಯೇ ತಾನು ಬದುಕಿರುವನೆ ? ಇಲ್ಲ. ಹೀಗಿರುವಲ್ಲಿ ಶರಣನು ತನ್ನ ಲಿಂಗಪೂಜೆಗಾಗಿ ತನ್ನ ಮೈದಣಿಸಿ ತಾನೇ ಪತ್ರ ಪುಷ್ಪಾದಿಗಳನ್ನು ತೆಗೆದುಕೊಂಡು ಬರದೆ, ಪರರುಗಳಿಂದ ಅವನ್ನು ತರಿಸಿ ಶಿವಪೂಜೆಮಾಡುವನೆ ? ಎಂದಿಗೂ ಮಾಡನು. ಅನ್ಯರಿಂದ ಪತ್ರ ಪುಷ್ಪಾದಿಗಳನ್ನು ತರಿಸಿಕೊಂಡು ತನ್ನ ಲಿಂಗಪೂಜೆಯನ್ನು ಮಾಡುವುದು ಎಂತಹ ಭಕ್ತಿ ? ಬಿಡು. ||೧೦೭||

ತನ್ನ ಸತೀಸುತಾನುಚರಬಂಧುಜನಂಗಳು ಮಿನ್ನು ಮತ್ತೆಮಿ |
ಕ್ಕನ್ಯರು ಮಾತ್ಮದೇಹಕರಣಾದಿಗಳುಂ ಸಲೆ ತಾನು ಮೆಲ್ಲರುಂ ||
ನಿನ್ನವ ರೆಂದು ನಿನ್ನೊಡವೆ ಯೆಂದು ನಿಜೇಶ್ವರಪೂಜೆಗೆಯ್ವವಂ |
ಧನ್ಯನದೀಗ ಪೂಜೆ ಪರಮಪ್ರಭುವೇ ಮಹದೈಪುರೀಶ್ವರಾ ||೧೦೮||

ಟೀಕೆ—ಭೋಪರಮಪ್ರಭುವೇ-ಎಲೆವಿಶ್ವವಲ್ಲಭನೇ, ತನ್ನ ಸತೀಸುತಾನುಚರ ಬಂಧುಜನಂಗಳುಂ-ತನ್ನ-ತನ್ನ ಸಂಬಂಧವಾದ, ಸತೀ-ಸ್ತ್ರೀಯು, ಸುತ-ಪುತ್ರರು, ಅನುಚರ-ಸೇವಕರು-ಬಂಧುಜನಂಗಳುಂ—ನಂಟರುಗಳೂ, ಇನ್ನು, ಮತ್ತೆ—ಮರಳಿ, ಮಿಕ್ಕ-ಉಳಿದಂಥ, ಅನ್ಯರುಂ-ಪರರೂ, ಆತ್ಮದೇಹಕರಣಾದಿಗಳುಂ-ತನ್ನ ದೇಹದಲ್ಲಿ ರ್ಪಕರಣ ಮೊದಲಾದುವೂ, ಸಲೆ-ಚೆನ್ನಾಗಿ, ತಾನುಂ-ತಾನೂ, ಎಲ್ಲರುಂ-ಸರ್ವರೂ, ನಿನ್ನವರೆಂದು-ನಿನ್ನ ಸಂಬಂಧದವರೆಂದು, ನಿನ್ನೊಡವೆಯೆಂದು-ನಿನ್ನ ದ್ರವ್ಯವೆಂದು, ನಿಜೇಶ್ವರಪೂಜೆಗೆಯ್ವವಂ-ತನ್ನ ಶಿವಲಿಂಗಪೂಜೆಯಮಾಡುವಾತನು, ಧನ್ಯಂ-ಕೃತಾರ್ಥನು. ಅದೀಗವೂಜೆ-ಅದೀಗಶಿವಲಿಂಗಪೂಜೆಯು. (ಈ ಅರ್ಥದಲ್ಲಿ—" ದ್ರವ್ಯಾರ್ಥಂಚಮಹಾದೇವಃ ದ್ರವ್ಯರೂಪೋಮಹೇಶ್ವರಃ | ಇತೀಹಭೇದೋನೋನಾಸ್ತಿ ಸರ್ವರೂಪಸ್ಸದಾಶಿವಃ " ಎಂದುಂಟು.) ||೧೦೮||

ಟಿಪ್ಪಣಿ—ಎಲೈ ಸ್ವಾಮಿಯೆ, ತನ್ನ ಹೆಂಡತಿ ಮಕ್ಕಳು, ಸೇವಕರು, ನಂಟರುಗಳೂ, ಇನ್ನುಳಿದವರೂ, ತನ್ನ ದೇಹೇಂದ್ರಿಯಾದಿಗಳೂ, ತಾನೂ ಸಹ ನಿನ್ನಿಂದ ಹುಟ್ಟಿದವರಾದ ಕಾರಣ, ನಿನ್ನವರೇ ನಿನ್ನ ಪದಾರ್ಥಗಳೇ ಎಂದು ತಿಳಿದು, ಯಾವನು ನಿನ್ನ ಪೂಜೆಯನ್ನು ಮಾಡುವನೋ ಅವನೇ ಧನ್ಯನು. ಅವನು ಮಾಡುವ ಪೂಜೆಯೇ ಪೂಜೆಯು. ||೧೦೮||

ಅವತಾರಿಕೆ—ಇಂತೀ ಸಮಸ್ತ ಪದಾರ್ಥಂಗಳಂ ಕೊಡುವಾತನೂ ಶಿವನಲ್ಲದೆ ಬೇರಲ್ಲವೆಂದು ಪೇಳುತ್ತಿರ್ದಪಂ—

ಕುಡುವವ ನಾರು ಕೊಂಬುವ ನದಾರು ವೃಥಾಭ್ರಮೆಯೇಕೆ ಬೇಡ ಮಾ |
ಣ್ಕುಡುವವನುಂ ಬಲಾತ್ಕರಿಸಿ ಕೊಂಬವನುಂ ಶಿವ ನೆಂದು ವೇದ ಮು ||
ಗ್ಗಡಿಸುತೆ ದಾತೃಭೋಕ್ತೃ ಸಕಲಂ ನೆರೆ ನೀ ನೆನುತಿರ್ಪ ವಾಕ್ಯಮಂ |
ಪಿಡಿವುದೆ ಭಕ್ತಿಯಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೧೦೯||

ಟೀಕೆ—ಭೋಪರಮಪ್ರಭುವೇ-ಎಲೈ ಜಗದ್ವಲ್ಲಭನೆ, ಕುಡುವವಂ-ಭಕ್ತಿ ಪದಾರ್ಥಂಗಳಕೊಡುವಾತನು, ಆರು-ಯಾರು? ಕೊಂಬವಂ-ತೆಗೆದುಕೊಂಬಾತನು, ಅದಾರು-ಯಾರು ? ವೃಥಾ-ವ್ಯರ್ಥವಾಗಿ, ಭ್ರಮೆಯೆಕೆ-ಭ್ರಾಂತಿಯೇಕೆ ? ಬೇಡ-ವಿಸರ್ಜಿಸು, ಮಾಣ್-ನಿಲ್ಲು, ಕುಡುವವನುಂ-ಕೊಡುವಾತನೂ, ಬಲಾತ್ಕರಿಸಿ-ಬಲ್ಮೆಯಿಂದೆ, ಕೊಂಬವನುಂ-ತೆಗೆದುಕೊಂಬಾತನೂ, ಶಿವನೆಂದು-ಮಹಾಲಿಂಗವೆಂದು, ವೇದಮುಗ್ಗಡಿಸುತೆ—" ನಾಹಂಕರ್ತಾ ನಾಹಂಭೋಕ್ತಾ ನಾಹಂಕಾರಯಿತಾ " ಎಂದು ತೈತ್ತಿರಿಯೋಪನಿಷತ್ತುಬೊಬ್ಬಿಡುತ್ತೆ, ದಾತೃಭೋಕ್ತೃ ಸಕಲಂ—ಕೊಡುವಾತನೂ ಭುಂಜಿಸುವಾತನೂ ಸರ್ವರೂ, ನೆರೆ-ಚೆನ್ನಾಗಿ, ನೀನೆನುತಿರ್ಪವಾಕ್ಯಮಂ-ನೀನೆಯೆಂದು ಹೇಳುವ ವೇದವಾಕ್ಯವನು, ಪಿಡಿವುದೆ-ಗ್ರಹಿಸುವುದೇ, ಭಕ್ತಿಯಯ್ಯ-ಶಿವಭಕ್ತಿಯಯ್ಯ (ಈ ಅರ್ಥದಲ್ಲಿ ಪುರಾಣವಚನವು :—ಶಿವೋದಾತಾಶಿವೋಭೋಕ್ತಾಶಿವಸ್ಸರ್ವಮಿದಂಜಗತ್ | ಶಿವೋಯಜತಿತತ್ಸರ್ವಂತಚ್ಛಿವಸ್ಸೋಽಹಮೇವಚ " ಎಂದುಂಟು). ||೧೦೯||

ಟಿಪ್ಪಣಿ—ಎಲೈ ಜಗದೀಶನೇ, ಭಕ್ತಿಯಿಂದರ್ಪಿಸತಕ್ಕ ಪದಾರ್ಥಗಳನ್ನೆಲ್ಲಾ ಸರ್ವರಿಗೂ ಕೊಡತಕ್ಕವನಾರು? ಪರಿಗ್ರಹಿಸುವವನಾರು? ಅವನ್ನೆಲ್ಲಾ ಶಿವನಿಗೆ ಸಮರ್ಪಿಸತಕ್ಕವನು ನಾನೆಂದು ಹೇಳಿಕೊಳ್ಳುವ ಬರಿಯ ಭ್ರಾಂತಿಯ ಮಾತಿನಿಂದ ಪ್ರಯೋಜನವೇನು ? ಕೊಡುವವನೂ ತೆಗೆದುಕೊಳ್ಳುವವನೂ, ಅನುಭವಿಸುವವನೂ ಶಿವನಲ್ಲದೆ ಬೇರೊಬ್ಬನಿಲ್ಲವೆಂದು ಸಾರುತ್ತಿರುವ ವೇದವಚನವನ್ನು ಅನುಸರಿಸಿ ಆಚರಿಸುವುದೇ ನಿಜವಾದ ಭಕ್ತಿಮಾರ್ಗವು. ||೧೦೯||

ಬರ್ಪುದು ಬಾರ ದೆಂಬುಭಯಸಂಶಯಮಿಲ್ಲಹುದಾಗ ದೆಂಬುದಿ |
ಲ್ಲೊಪ್ಪಚಿಭೇದ ಮಿಲ್ಲ ಶಿವಲಿಂಗದೊಳುಂ ಮಿಗೆ ನೋಡೆ ತನ್ನೊಳುಂ ||
ತಪ್ಪದೆ ಸರ್ವಮಂ ಶಿವಮುಖಾರ್ಪಿತಮಂ ನೆರೆ ಮಾಡಿ ಭೋಗಿಸು |
ತ್ತಿರ್ಪವ ರಾಧ್ಯರಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ||೧೧೦||

ಟೀಕೆ—ಬರ್ಪುದುಬಾರದೆಂಬ-ಬರುವುದು ಬಾರದುದೆಂಬ, ಉಭಯಸಂಶಯಮಿಲ್ಲ-ಎರಡುಸಂಕಲ್ಪವು ಇಲ್ಲ, ಅಹುದಾಗದೆಂಬುದು-ಅಪ್ಪುದಾಗದೆಂಬುದು, ಇಲ್ಲ-ಇಲ್ಲವೇ, ಮಿಗೆನೋಡಿ-ಚೆನ್ನಾಗಿ ವಿಚಾರಿಸಿನೋಡಲಾಗಿ, ಶಿವಲಿಂಗದೊಳುಂ-ಶಿವಲಿಂಗದಲ್ಲಿಯೂ, ತನ್ನೊಳುಂ-ತನ್ನಲ್ಲಿಯೂ, ಒಪ್ಪಚಿಭೇದಮಿಲ್ಲ-ಕಿಂಚಿತೂ ಭೇದ

ವಿಲ್ಲ, ತಪ್ಪದೆ-ಏನೂತಪ್ಪದೆ, ಸರ್ವಮಂ-ಎಲ್ಲವನ್ನೂ, ಶಿವಮುಖಾರ್ಪಿತಮಂ-ಶಿವ ಲಿಂಗಮುಖಕ್ಕರ್ಪಿಸುವುದನ್ನು, ನೆರೆಮಾಡಿ-ಚೆನ್ನಾಗಿಮಾಡಿ, ಭೋಗಿಸುತ್ತಿರ್ಪವರ್-ಅನುಭವಿಸುತ್ತಿರ್ಪರು, ಆದ್ಯರಯ್ಯ-ಶಿವಶರಣರಯ್ಯ. ||೧೧೦||

ಟಿಪ್ಪಣಿ—ತಮಗೆ ಇದು ಬರುವುದು, ಇದು ಬಾರದು, ಇದು ಆಗುವುದು, ಇದು ಹೋಗುವುದು ಎಂಬ ಸಂಶಯವನ್ನೆಲ್ಲಾ ಕಳೆದು, ಶಿವಲಿಂಗಕ್ಕೂ ತಮಗೂ ಲೇಶಮಾತ್ರವೂ ಭೇದವಿಲ್ಲದೆ ಸಮರಸವಾಗಿ, ಸಕಲೇಂದ್ರಿಯ ಮುಖಾಗತ ವಿಷಯಗಳನ್ನು ಆಯಾ ಲಿಂಗಮುಖದಲ್ಲಿ ಸಮರ್ಪಿಸಿ, ತತ್ಪ್ರಸಾದ ಸೌಖ್ಯವನ್ನು ಅನುಭವಿಸುತ್ತಲಿರುವವರೇ ಶಿವಶರಣರುಗಳು. ||೧೧೦||

ಅವತಾರಿಕೆ—ಗ್ರಂಥಸಮಾಪ್ತಿಯಲ್ಲಿ ಪುರಾತನರ ಅನುಗ್ರಹಮಂ ಕೊಡು ಎಂದು ಶಿವನಂ ಕುರಿತು ಪ್ರಾರ್ಥಿಸುತ್ತಿರ್ದಪಂ.—

ಎಸೆವ ವೃಷಾಧಿರಾಟ್ಚೆನ್ನವೃಷಾಂಕ ಗುಹೇಶ್ವರ ನಲ್ಲಮಪ್ರಪೂ |
ರ್ಣಸುಲಭಯೋಗಿನಾಥ ಮಹದೇವಿ ಮಹಾಸತಿ ಸಿದ್ಧರಾಮಮು ||
ಖ್ಯಸಕಲ ಲಿಂಗಸಂಗ ನಿಜನಿಷ್ಠ ಪುರಾತನ ರುನ್ನತಪ್ರಸಾ |
ದಸುಖವ ನಿತ್ತು ಕಾಯಿ ಪರಮಪ್ರಭುವೇ ಮಹದೈಪುರೀಶ್ವರಾ ||೧೧೧||

ಟೀಕೆ—ಭೋಪರಮಪ್ರಭುವೇ-ಎಲೈ ಜಗದ್ವಲ್ಲಭನೇ, ಎಸೆವ-ಒಪ್ಪುತಿರ್ಪ, ವೃಷಾಧಿರಾಟ್-ಬಸವರಾಜದೇವರು, ಚೆನ್ನವೃಷಾಂಕ-ಚೆನ್ನಬಸವೇಶ್ವರನೆಂಬ ಪೆಸರುಳ್ಳಾತನು, ಅಲ್ಲಮಪ್ರಪೂರ್ಣಸುಲಭಯೋಗಿನಾಥ-ಅಲ್ಲಮ-ಅಲ್ಲಮಪ್ರಭುವೆಂಬ, ಪ್ರಪೂರ್ಣ-ಜಗದ್ಭರಿತನಾದ, ಸುಲಭ-ಭಕ್ತರ್ಗೆ ಸುಲಭನಾದ, ಯೋಗಿ-ಶಿವಯೋಗೀಶ್ವರರುಗಳಿಗೆ, ನಾಥ-ಒಡೆಯನಾದಾತನು, ಮಹದೇವಿ ಮಹಾಸತಿ-ಮಹಾದೇವಿಯೆಂಬ ಮಹಾಶರಣೆಯು, ಸಿದ್ಧರಾಮಮುಖ್ಯಸಕಲಲಿಂಗಸಂಗನಿಜನಿಷ್ಠಪುರಾತನರ-ಸಿದ್ಧರಾಮ-ಸಿದ್ಧರಾಮೇಶ್ವರನು, ಮುಖ್ಯ-ಮುಂತಾದ, ಸಕಲ-ಸಮಸ್ತರಾದ ಲಿಂಗಸಂಗನಿಜನಿಷ್ಠ-ಲಿಂಗದಲ್ಲಿ ಸಂಬಂಧಿಸಲ್ಪಟ್ಟ ಸಹಜನಿಷ್ಠೆಯುಳ್ಳ, ಪುರಾತನರ-ಆದ್ಯರುಗಳ, ಉನ್ನತಪ್ರಸಾದಸುಖಮಂ-ಪೆರ್ಚುಗೆಯೊದ ಅನುಗ್ರಹಾನಂದವನ್ನು, ಇತ್ತು-ಕೊಟ್ಟು, ಕಾಯಿ-ರಕ್ಷಿಸು. ||೧೧೧||

ಟಿಪ್ಪಣಿ— ಎಲೈ ಮಹಾಪ್ರಭುವೆ, ಶ್ರೀಬಸವೇಶ್ವರ ಚೆನ್ನಬಸವೇಶ್ವರರು, ಸಕಲ ಪ್ರಾಣಿಗಳ ದಹರಾಕಾಶದಲ್ಲಿ ಮೆರೆಯುವ ಸ್ವಾಮಿಯಾದ, ಭಕ್ತಸುಲಭನಾದ, ಅಲ್ಲಮಪ್ರಭು ಮಹಾಯೋಗೀಶ್ವರನು ಮಹಾದೇವಿಯಕ್ಕನೆಂಬ ಮಹಾಶರಣೆಯು, ಸೊನ್ನಲಾಪುರದ ಸಿದ್ಧರಾಮ ಶಿವಯೋಗಿಯು ಇವರೇ ಮೊದಲಾದ ಲಿಂಗಾಂಗಸಾಮರಸ್ಯವುಳ್ಳ ಮಹಾಶಿವಶರಣರುಗಳ ಮಹಾನುಗ್ರಹದಿಂದ ಪ್ರಾಪ್ತವಾಗುವ ಅವಿರಳಾನಂದವನ್ನು ನನಗೆ ಅನುಗ್ರಹಿಸಿ ಕಾಪಾಡು. ||೧೧೧||

ಶತಕ ಮಿದೈಪುರಪ್ರಭುಪದಾಂಕಿತ ಮಾದ ಪುರಾತನೋಕ್ತಿಸಂ |
ಮತ ಮೆನ ಲಪ್ರಯಾಸಪದಬಂಧ ನಿಜಾನುಭವಾನುಬಂಧಸಂ ||

ಶೃತಿಭವಬಂಧ ಮಾದುದು ಶಿವೈಕ್ಯಪರಾಯಣಭಕ್ತಿಯೋಗ ಸಂ |
ಸ್ಥಿತಶರಣಾಂಘ್ರಿಪೂಜೆ ಪರಮಪ್ರಭುವೇ ಮಹದೈಪುರೀಶ್ವರಾ ||೧೧೨||

ಟೀಕೆ—ಐಪುರಪ್ರಭುಪದಾಂಕಿತಮಾದ-ಐಪುರದ ಸೋಮೇಶ್ವರನ ಪಾದಕ್ಕೆ ಅಂಕಿತವಾಗಿ ಮಾಡಲ್ಪಟ್ಟ, ಶತಕಮಿದು-ವೈರಾಗ್ಯಪ್ರತಿಪಾದಕವಾದ ಈ ಶತಕವು ಪುರಾತನೋಕ್ತಿ-ಪುರಾತನರ ವಚನಂಗಳಿಗೆ, ಸಮ್ಮತಮೆನಲ್-ಸಂಬಂಧವೆನಲಾಗಿ, ಅಪ್ರಯಾಸಪದಬಂಧನಿಜಾನುಭವಾನುಬಂಧಸಂಶೃತಿಭವಬಂಧಂ- ಅಪ್ರಯಾಸಪದಬಂಧ-ಪ್ರಯಾಸವಿಲ್ಲದ ಶಬ್ದಸಂಬಂಧವುಳ್ಳುದಾಗಿ, ನಿಜಾನುಭವಾನುಬಂಧ-ಸಹಜವಾದ ಶಿವಜ್ಞಾನದೊಡನೆ ಕೂಡಿದುದಾಗಿ, ಸಂಶೃತಿಭವಬಂಧಂ-ಸಮ್‌-ಒಳ್ಳಿತ್ತಾದ ಶ್ರುತಿ-ವೇದಂಗಳತ್ತಣಿಂ,ಭವ-ಹುಟ್ಟಿದರ್ಥದ, ಬಂಧಂ-ಸಂಬಂಧವುಳ್ಳುದು, ಶಿವೈಕ್ಯಪರಾಯಣಭಕ್ತಿಯೋಗಸಂಸ್ಥಿತಶರಣಾಂಘ್ರಿಪೂಜೆ—ಶಿವೈಕ್ಯಪರಾಯಣ-ಶಿವಲಿಂಗೈಕ್ಯದಲ್ಲಿ ತಾತ್ಪರ್ಯವನುಳ್ಳ, ಭಕ್ತಿಯೋಗ-ಶಿವಭಕ್ತಿಯೋಗದಲ್ಲಿ, ಸಂಸ್ಥಿತ-ಚೆನ್ನಾಗಿನೆಲೆಗೊಂಡಿರ್ಪಂಥ, ಶರಣ-ಶಿವಶರಣರುಗಳು, ಅಂಘ್ರಿಪೂಜೆ-ಶ್ರೀಪಾದಂಗಳಪೂಜೆಯು, ಆದುದು-ಆಯಿತು. ||೧೧೨||

ಟಿಪ್ಪಣಿ—ಶ್ರೀಮದೈಪುರದ ಸೋಮೇಶ್ವರನ ಪಾದಕ್ಕೆ ಅಂಕಿತವಾಗಿ ಮಾಡಲ್ಪಟ್ಟಿರುವ ವೈರಾಗ್ಯಪ್ರತಿಪಾದಕವಾದ ಈ ಶತಕವು ಪೂರ್ವಶಿವಾಚಾರ್ಯರು ಅಪ್ಪಣೆಕೊಡಿಸಿರುವ ವಾಕ್ಯಗಳಿಗೆ ಸಮ್ಮತವಾಗಿಯೂ, ಅನಾಯಾಸಸಿದ್ಧವಾದ ಪದಬಂಧದಿಂದ ಲಲಿತವಾಗಿಯೂ, ಸಹಜ ಶಿವಜ್ಞಾನ ಸಂಪನ್ನವಾಗಿಯೂ, ವೇದವಚನಾರ್ಥಗರ್ಭಿತವಾಗಿಯೂ ಇರುವುದು. ಈ ಗ್ರಂಥವು ಶಿವಲಿಂಗ ನಿಷ್ಠಾಗರಿಷ್ಠರಾದ ಭಕ್ತಿಯೋಗತತ್ಪರರಾದ ಶಿವಶರಣರ ಪಾದಸೇವೆಯಾಗಿ ಅರ್ಪಿಸಲ್ಪಟ್ಟಿರುವುದು.

ಅಪ್ರತಿಮಪ್ರತಿಷ್ಠಪರಿಪೂರ್ಣಪರಾನುಭವಪ್ರಭಾವಭ |
ವ್ಯಪ್ರಥಿತಾರ್ಥಮಾದ ಪದಬಂಧಪದೋತ್ತರಭಕ್ತಿಯೋಗಸೌ ||
ಖ್ಯಪ್ರದ ಸದ್ಗುರೂಕ್ತಿಮತಸಿದ್ಧ ಮಿದೀಶತಕಕ್ಕೆ ಮಾಯಿದೇ |
ವ ಪ್ರಭು ವೀಗ ಕರ್ತೃ ಪರಮಪ್ರಭುವೇ ಮಹದೈಪುರೀಶ್ವರಾ ||೧೧೩||

ಟೀಕೆ—ಇದು-ಈ ಶತಕವು, ಅಪ್ರತಿಮ.....ಪ್ರಥಿತಾರ್ಥಮಾದ-ಅಪ್ರತಿಮ-ಸಮಾನವಿಲ್ಲದಂಥ, ಪ್ರತಿಷ್ಠ-ಪ್ರತಿಷ್ಠೆಯನುಳ್ಳ, ಪರಿಪೂರ್ಣ-ವ್ಯಾಪಕವಾದ ಪರಾನುಭವ-ಉತ್ಕೃಷ್ಟವಾದ ಶಿವಜ್ಞಾನದ, ಪ್ರಭಾವ-ಸಾಮರ್ಥ್ಯದಿಂದ, ಭವ್ಯ-ಒಪ್ಪುತ್ತಿರ್ಪ, ಪ್ರಥಿತ-ಪ್ರಖ್ಯಾತಮಾದ, ಅರ್ಥಮಾದ-ಅರ್ಥವನುಳ್ಳ, ಪದ...ಮತಸಿದ್ಧಂ-ಪದಬಂಧ-ಶಬ್ದಸಂಬಂಧವನುಳ್ಳ, ಪದೋತ್ತರ-ಸಾಲೋಕ್ಯಾದಿಪದಂಗಳಿಗೆ ಮೀರಿದ, ಭಕ್ತಿಯೋಗ-ಭಕ್ತಿಕೂಟವೆಂಬ, ಸೌಖ್ಯ-ಆನಂದವನ್ನು, ಪ್ರದ-ಕೊಡುತ್ತಿರ್ಪ, ಸದ್ಗುರೂಕ್ತಿಮತಸಿದ್ಧಂ-ಸದ್ಗುರೂಕ್ತಿಮತ-ಶ್ರೀಗುರುವಚನಕ್ಕೆ ಸಂಬಂಧ

ವಾಗಿ, ಸಿದ್ಧಂ-ಪ್ರಸಿದ್ಧವು, ಈ ಶತಕಕ್ಕೆ-ಈ ನೂರುಪದ್ಯಂಗಳನುಳ್ಳ ಪ್ರಬಂಧಕ್ಕೆ, ಮಾಯಿದೇವಪ್ರಭುವೀಗ-ಮಾಯಿದೇವಪ್ರಭುವೆಂಬಾಚಾರ್ಯನೇ, ಕರ್ತೃ-ಕರ್ತನು.

ಗದ್ಯ || ಇದು ಸಮಸ್ತಶಿವಯೋಗಿಜನಮನೋನಿಲಯ ಶ್ರೀಮನ್ನಿರಂಜನ ಲಿಂಗಚರಣಸರಸೀರುಹಸೌರಭಾಸಕ್ತ ಮತ್ತಮಧುಕರಾಯಮಾಣ ಷಟ್ಸ್ಥಲ ಲಿಂಗಾಂಗಸಂಯೋಗಸನ್ಮಾರ್ಗಸಿದ್ಧಾಂತ ಸ್ಥಾಪನಾಚಾರ್ಯಪರಮಸುಜ್ಞಾನ ಸತ್ಕ್ರಿಯಾಯುಕ್ತ ಭಕ್ತಿಭರಿತಾಂತರಂಗ ಪ್ರಣವಪೂರ್ವಕ ಪಂಚಾಕ್ಷರೀ ಮಂತ್ರೋದ್ಧಾರಿತ ಮಂಜುಳಬಾಷಾವಿಲಾಸನಪ್ಪ ತೋಂಟದ ಸಿದ್ಧಲಿಂಗದೇಶಿಕನಿಂ ವಿರಚಿತಮಪ್ಪ ಶ್ರೀಮದ್ವೀರಶೈವಾಚಾರಸಾರೋದ್ಧಾರ ಭಕ್ತಿಜ್ಞಾನವೈರಾಗ್ಯಪ್ರತಿಪಾದಕ ಶಿವಾಧವ ಶಿವಾವಲ್ಲಭ ಮಹದ್ಮೈಪುರೀಶ್ವರಾಂಕಿತ ಶತಕತ್ರಯ ಮಹಾವ್ಯಾಖ್ಯಾನದೊಳ್ ವೈರಾಗ್ಯಪ್ರತಿಪಾದಕ ಮಹದ್ಮೈಪುರೀಶ್ವರಶತಕಂ.

ಸಂಪೂರ್ಣಂ

ಟಿಪ್ಪಣಿ—ಈ ಶತಕವು ಅಸಮಾನವಾದ ಪ್ರಾಶಸ್ತ್ಯದಿಂದ ಕೂಡಿದ ಶಿವಜ್ಞಾನ ಪ್ರಭಾವದಿಂದ ಮೆರೆಯುತ್ತಿರುವ ಅಭಿಪ್ರಾಯವನ್ನು ಹೊಂದಿರುವ ಶಬ್ದಗಳುಳ್ಳುದಾಗಿಯೂ, ಸಾಲೋಕ್ಯ ಸಾಮೀಪ್ಯಾದಿ ಪದವಿಗಳಿಗೆ ಮಿಗಿಲಾದ ಚನೆಯ ಪುರುಷಾರ್ಥವಾದ ಶಿವಭಕ್ತಿಯೋಗದಿಂದ ಸಿದ್ಧವಾಗುವ ಪರಮಾನಂದವನ್ನು ವಾಚಕರಿಗೆ ಕೊಡತಕ್ಕುದಾಗಿಯೂ, ಶ್ರೀ ಗುರೂಪದಿಷ್ಟವಾದ ಸದ್ವೀರಶೈವ ಮಾರ್ಗಕ್ಕೆ ಅನುಸಾರವಾಗಿಯೂ ಇರುತ್ತಿರುವುದು. ಇಂತಪ್ಪ ಶತಕವನ್ನು ಶ್ರೀ ಮಗ್ಗೆಯ ಮಾಯಿದೇವಾಚಾರ್ಯನು ರಚಿಸಿದನು. ||೧೧೩||

ಎಂಬಲ್ಲಿಗೆ ವೈರಾಗ್ಯಪ್ರಶಂಸಾಪರವಾದ ಮಹದ್ಮೈಪುರೀಶ್ವರಶತಕಕ್ಕೆ ಕನ್ನಡ ಟಿಪ್ಪಣವು ಮುಗಿದುದು.

**ಶತಕತ್ರಯಂ ಸಂಪೂರ್ಣಂ.**

ಇತಿಶಿವಂ

